# ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಪುರಾಣ

( ಭಾಮಿನಿ ಷಟ್ಪದಿ )

ಗ್ರಂಥಕರ್ತರು :

ಶ್ರೀ ತುಕಾರಾಮಪ್ಪ ರತ್ನಪ್ಪ ಕೋಪರಡೆ

ಬನಹಟ್ಟಿ



೧೯೭೨

# ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಪುರಾಣ

( ಭಾಮಿನಿ ಷಟ್ಪದಿ )

ಗ್ರಂಥಕರ್ತರು :

ಶ್ರೀ ತುಕಾರಾಮಪ್ಪ ರತ್ನಪ್ಪ ಕೋಪರಡೆ
ಬನಹಟ್ಟಿ

ಪ್ರಕಾಶಕರು :

ಮೂರುಸಾವಿರ ಮಠದ ಜಗದ್ಗುರು ಗಂಗಾಧರ ರಾಜಯೋಗೀಂದ್ರ
ಮಹಾಸ್ವಾಮಿಗಳವರ ಪೀಠಾರೋಹಣದ ದ್ವಾದಶ ವಾರ್ಷಿಕೋತ್ಸವ
ಸಮಿತಿ, ಹುಬ್ಬಳ್ಳಿ

೧೯೭೨

ಶ್ರೀ ಜಗದ್ಗುರು ಮೂರುಸಾವಿರಮಠ ಗ್ರಂಥಮಾಲಾ ನಂ. ೪೬



# ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಪುರಾಣ

೧೯೭೨

## ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರ

## ಆಶೀರ್ವಚನ

ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಪುರಾಣವನ್ನು ನಮ್ಮ ಧರ್ಮ ಪ್ರಚಾರಕ ಮಂಡಲದ ಪರವಾಗಿ ಸಕಲ ಸದ್ಭಕ್ತರ ಕೈಯಲ್ಲಿ ನೀಡಲು ನಮಗೆ ಅಮಿತ ಸಂತೋಷ ವಾಗುತ್ತದೆ. ಜಗದ್ಗುರು ಮೂರುಸಾವಿರ ಮಠವು ಸಕಲ ಮತ-ಪಂಥಗಳ ಬಾಂಧವರ ಹೃನ್ಮನಗಳನ್ನು ಗೆದ್ದುಕೊಂಡಿದೆಯೆಂಬುದಕ್ಕೆ ಈ ಪುರಾಣಕರ್ತರಾದ ಶತಾಯುಷಿ ಶ್ರೀ ತುಕಾರಾಮ ಕೋಪರಡೆ ಅವರೇ ಸಾಕ್ಷಿ. ಅವರು ಮತದಿಂದ ನಾಮದೇವ ಸಿಂಪಿಗ ಕುಲೋತ್ಪನ್ನರು. ಆದರೆ ಗುರುಸಿದ್ಧೇಶ್ವರ ಚರಿತ್ರೆಯನ್ನು ಭಕ್ತಿ ಪೂರ್ವಕವಾಗಿ ಬರೆದು ದನ್ನು ನೋಡಿದರೆ ಯಾರಿಗೆ ತಾನೆ ಹೆಮ್ಮೆ ಅನಿಸಲಿಕ್ಕಿಲ್ಲ? ಅವರ ಭಾವೈಕ್ಯತೆ ಹಾಗೂ ಸದ್ಭಾವನೆಗಳಿಂದ ನಮಗೆ ತುಂಬ ಆನಂದವಾಗಿದೆ. ಈ ಕೃತಿಯಲ್ಲಿ ಗ್ರಂಥ ಕರ್ತರು ಬಹಳ ಪರಿಶ್ರಮದಿಂದ ಜಗದ್ಗುರು ಗುರುಸಿದ್ಧೇಶ್ವರರ ಜೀವನ ಚರಿತ್ರೆಯ ಆಮೂಲಾಗ್ರಗಳನ್ನು ಪರಿಶೋಧಿಸಿ, ಭಾಮಿನಿ ಷಟ್ಪದಿಯ ಪುರಾಣ ಶೈಲಿಯಲ್ಲಿ ಪ್ರಕಟನೆಗೆ ತಂದಿದ್ದಾರೆ. ವೀರಶೈವ ಪುರಾಣಗಳ ತಂತ್ರ ಇಲ್ಲಿ ಎದ್ದು ಕಾಣುತ್ತದೆ. ಶಿವಭಕ್ತಿ ಶಾಸ್ತ್ರ ಶ್ರದ್ಧೆ–ಕೀರ್ತನೆ–ಪವಾಡ ಹಾಗೂ ಅಲೌಕಿಕ ಕತೆಗಳು ೨೦ನೇ ಶತಮಾನದಲ್ಲಿ ಅಜ್ಞಾದ ಪುರಾಣ ಕರ್ತರಲ್ಲಿ ಎದ್ದು ಕಾಣುತ್ತವೆ. ಇಲ್ಲಿ ಕಾವ್ಯಾಂಶಕ್ಕಿಂತ ಕಾವ್ಯನಾಯಕನ ವ್ಯಕ್ತಿದರ್ಶನ ಬಹುಮುಖ್ಯ. ಬಹುಶಃ ಈ ಶತಮಾನದ ಎಲ್ಲ ಪುರಾಣಗಳು ಭೀಮಕವಿಯ ಬಸವಪುರಾಣ, ವಿರುಪಾಕ್ಷ ಪಂಡಿ ತನ ಚನ್ನಬಸವಪುರಾಣ ಹಾಗೂ ಚಾಮರಸನ ಪ್ರಭುಲಿಂಗ ಲೀಲೆಗಳಿಂದ ಪ್ರಭಾ ವಿತವಾಗಿವೆ. ಆ ರೀತಿಯ ಪ್ರಭಾವ ಮುದ್ರೆಯನ್ನು ಪ್ರಸ್ತುತ ಈ ಕೃತಿಯಲ್ಲಿ ನಿಚ್ಚಳವಾಗಿ ಗಮನಿಸಬಹುದಾದರೂ ಮಹಾಕವಿತ್ವದ ಎತ್ತರವನ್ನಲ್ಲ. ಈ ತುಕಾ ರಾಮ ಅವರು ಭಕ್ತಿ ಕವಿಗಳು. ಭಕ್ತಿಯಿಂದ ಹಾಡಿದ್ದಾರೆ. ಆದ್ದರಿಂದ ಇಲ್ಲಿ ಕಾವ್ಯಶಕ್ತಿಯಾಗಲೀ, ಪಂಡಿತ ಮಾನ್ಯತೆಯಾಗಲೀ ಮುಖ್ಯವಲ್ಲ. ಭಕ್ತಿಯೇ ಈ ಕೃತಿಯ ಸ್ಥಾಯಿ. ಅದರ ಆವಿರ್ಭಾವದಲ್ಲಿ ಪೂರ್ವ ಕವಿಗಳ ಒಳ್ಳೆಯ ಸಂಪ್ರದಾ ಯದಲ್ಲಿ ಶ್ರೀ ತುಕಾರಾಮ ಅವರು ಬೆಳೆದು ಬಂದಿದ್ದಾರೆ. ಅನೇಕ ಶಾಸ್ತ್ರ–ಕಾವ್ಯ–ಪುರಾಣಗಳನ್ನು ಅವರು ಓದಿರುವದರಿಂದ ಆ ಹಿನ್ನೆಲೆ ಇಲ್ಲಿ ಅವರಿಗೆ ಸ್ವಾಭಾವಿಕ ವಾಗಿ ಸ್ಫೂರ್ತಿಯನ್ನಿತ್ತಿದೆ. ಇಲ್ಲಿ ಕಾವ್ಯದ ಎತ್ತರ ಇಲ್ಲವಾದರೂ ಪವಿತ್ರವಾದ ಭಕ್ತಿಗೆ ಕೊರತೆಯೇನಿಲ್ಲ. ಮುಖ್ಯವಾಗಿ ಈ ಕೃತಿ ಧರ್ಮ ಧರ್ಮಗಳ ಭಾವೈಕ್ಯ

ತೆಗೆ ಸಾಕ್ಷಿಯಾಗಿ ನಿಂದುದೇ ಗಮನಾರ್ಹ. ಅಂತೆಯೇ ಈ ಗ್ರಂಥವನ್ನು ನಮ್ಮ ಧರ್ಮಪ್ರಸಾರಕ ಮಂಡಲದಿಂದ ಅಚ್ಚು ಹಾಕಿಸಲು ನಾವು ಒಪ್ಪಿಗೆ ನೀಡಿದೆವು.

ಸಮಸ್ತ ಸದ್ಭಕ್ತರು ಈ ಕೃತಿಯನ್ನು ಗೌರವದಿಂದ ಬರಮಾಡಿಕೊಂಡು ಇದರ ಅಧ್ಯಯನ, ಪಠನಗಳನ್ನು ತಮ್ಮ ತಮ್ಮ ಮನೆಗಳಲ್ಲಿ ನಡೆಸಬೇಕೆಂದು ಆಶಿಸುತ್ತೇವೆ.

ಈ ಪುರಾಣವು ಇಷ್ಟು ಬೇಗನೆ ಪ್ರಕಟವಾಗಲು ಗೋಕಾಕ ತಾಲೂಕಿನ ಮೇಲ್ಮಟ್ಟಿ ಹಳ್ಳಿಯ ಸದ್ಭಕ್ತರೇ ಮೂಲಕಾರಣ. ಜೊತೆಗೆ ಜಗದ್ಗುರು ಪೀಠದ ಪರಮ ಭಕ್ತರಾದ ಶ್ರೀಯುತ ಅಸುಂಡಿ ಚನ್ನಮಲ್ಲಪ್ಪನವರು ಮುಂದೆ ಬಂದು ೧೦೦೧ ರೂಪಾಯಿಗಳನ್ನು ಭಕ್ತಿ ಕಾಣಿಕೆ ಸಲ್ಲಿಸಿರುವದರ ಪರಿಣಾಮವಾಗಿ ನಮ್ಮ ದ್ವಾದಶ ಪೀಠಾರೋಹಣದ ಸಂದರ್ಭದಲ್ಲಿ ಪ್ರಕಟಿಸಲು ಅನುಕೂಲವಾಯ್ತು. ಮೇಲ್ಮಟ್ಟಿಯ ಭಕ್ತರೂ ಸಹ ೨೦೦೧ ರೂಪಾಯಿಗಳನ್ನು ನೀಡಿ ಜಗದ್ಗುರು ಗುರು ಸಿದ್ಧೇಶ್ವರನ ಕೃಪೆಗೆ ಪಾತ್ರರಾಗಿದ್ದಾರೆ. ಎಲ್ಲರಿಗೂ ಸನ್ಮಂಗಳವನ್ನುಂಟು ಮಾಡಲೆಂದು ಅಂತಃಕರಣ ಪೂರ್ವಕ ಹಾರೈಸುತ್ತೇವೆ. ಸಕಾಲಕ್ಕೆ ಮುದ್ರಿಸಿಕೊಟ್ಟ ಹುಬ್ಬಳ್ಳಿಯ ಜ್ಞಾನೇಶ್ವರ ಮುದ್ರಣಾಲಯದ ಒಡೆಯರಿಗೂ ಜಗದ್ಗುರು ಗುರು ಸಿದ್ಧೇಶ್ವರನು ಆಯುರಾರೋಗ್ಯವನ್ನಿತ್ತು ಸಲಹಲೆಂದು ಹಾರೈಸೋಣವಾಗಿದೆ.

ದಿ. ೨೫–೩–೭೨
ಹುಬ್ಬಳ್ಳಿ

इत्याशिष:



ಪರಮಪೂಜ್ಯ ಲಿಂ. ಜಗದ್ಗುರು ಗುರುಸಿದ್ಧ ರಾಜಯೋಗೀಂದ್ರ
ಮಹಾ ಸ್ವಾಮಿಗಳವರು

ಮೂರುಸಾವಿರಮಠ, ಹುಬ್ಬಳ್ಳಿ

ಜನನ : ೧೮೯೯ ಲಿಂಗೈಕ್ಯ : ೧೯೫೮

## ಸಹಾಯ ಸಲ್ಲಿಸಿದವರು



'ನೇಗಿಲಯೋಗಿ' ಶ್ರೀ ಚೆನ್ನಮಲ್ಲಪ್ಪನವರು

ಅಸುಂಡಿ, ತಾ|| ಬಿಡನಾಳ

§ ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಪ್ರಸನ್ನ §



# ಪುರಾಣಕರ್ತನ ಪೀಠಿಕೆ

( ಭಾಮಿನಿ ಷಟ್ಪದಿ )

ಶ್ರೀಶುಭಾಂಗಂ ಜಗದ ಜನಕಂ
ಶೇಷಭೂಷಂ ಪಂಚವಕ್ತ್ರಂ
ತೋಷರೂಪಂ ಪಾರ್ವತೀಶಂ ನೀಲಕಂಧರನು ।
ನಾಶ ದುಷ್ಟರ ಮಾಳ್ಪ ಮಹಿಮಂ
ಪೋಷಿಸುವ ಸಜ್ಜನರ ಪ್ರೇಮದೊ—
ಳೀಶ ವಿಶ್ವಕ್ಕಾದ ದೇವಗೆ ಪ್ರಥಮ ವಂದಿಪೆನು ॥೧॥

ಶ್ರೀಗುರುವರನು ಸಿದ್ಧಪುರುಷನು
ರಾಗದಿಂ ಭಕ್ತರನು ಪೊರೆದಾ
ನಾಗಭೂಷಣ ಪರಮ ಭಕ್ತನು ಶಿವನೊಳಗೆ ಬೆರೆದ ।
ಆಗಿರುವ ಪ್ರಖ್ಯಾತ ಜಗದಿ ವಿ-
ರಾಗರೂಪಗೆ ಕಾಡಸಿದ್ಧಗೆ
ಬಾಗುವೆನು ಬನಹಟ್ಟಿ ಪತ್ತನ ದೇವರಿಗೆ ನಾನು ॥೨॥

ಬಳಿಕ ನಮಿಪೆನು ಗುರುವರಂಘ್ರಿಗೆ
ಕಳೆದ ಜನಸೇವೆಯಲಿ ಕಾಲವ
ಕಳೆದ ಕನ್ನಡ ನುಡಿಯ ವರ್ಧಿಪ ಕಾರ್ಯದೊಳಗಾಯು ।
ಉಳಿದ ಜಗದಲಿ ಕೀರ್ತಿತನುವಿಂ
ಗೆಳೆಯನಾಗಿಹ ದೀನ ಜನರಿಗೆ
ತಿಳಿಮನದ ಚಿಕ್ಕೋಡಿ ತಮ್ಮಪ್ಪನವರುಗಳ ಮುದದೆ ॥೩॥

ಪರಮ ಕವಿಯಾ ಕಾಳಿದಾಸನು
ವಿರಚಿಸಿದ ಮೇಘದೂತವ
ವರ ಶಕುಂತಲಾ ನಾಟಕವ ಕನ್ನಡಿಸಿರುವ ಮತ್ತೆ ।
ಬರೆದು ಚರಿತೆಯ ಲಿಂಗರಾಜರ
ಹರುಷಗೊಳಿಸಿದ ಪ್ರಾಜ್ಞಜನರನು
ವರಕವಿಗೆ ರೈನಾಪುರಗೆ ನಾಂ ಮುದದಿ ವಂದಿಪೆನು ॥೪॥

ಸಿದ್ಧಪುರುಷರು ಯೋಗಿಗಳು ಮೇಣ್
ಬುದ್ಧಿನಿಧಿಗಳು ಪರಮ ಚತುರರು
ಗೆದ್ದವರು ಷಡ್ರಿಪುಗಳನು ಸಲೆ ಪರಮ ದಾಸಿಗಳು ।
ಎದ್ದೆಸೆವ ಹುಬ್ಬಳ್ಳಿಪುರದೊಳು
ಮುದ್ದುಮಠದಾ ಮೂರುಸಾವಿರ
ಶುದ್ಧಮನಸಿನ ಜಗದ ಗುರುಸಿದ್ಧ ಯತಿಯಿವರ ॥೫॥

ಮೆರೆಯುತಿರುವಾ ಜನಜನಿತ ಮಠ
ದೊರೆಯರಾಗಿಪ ಪ್ರಸ್ತುತದ ಜಗ-
ದ್ಗುರುವರರು ಗಂಗಾಧರಾಹ್ವಯನಾಂತ ಸ್ವಾಮಿಗಳು ।
ಬರೆಯಲಿಕ್ಕೆ ಪುರಾಣವನ್ನೀ
ಪರುಷದಿಂ ಆಜ್ಞಾಪಿಸಿರುವರು
ಶಿರದೊಳಾಂತವರಪ್ಪಣೆಯ ನಾಂ ರಚಿಸಿರುವೆನಿದನು ॥೬॥

ನಮಿಪೆನೈ ನಾಂ ಭಾರತಾಂಬೆಗೆ
ಸುಮನ ಸಮ ಮೃದು ಹೃದಯಯುಕ್ತೆಗೆ
ಪ್ರಮುದದಿಂ ಸುತರನ್ನು ಸಲಹುವ ಬಹುದಯಾನ್ವಿತೆಗೆ ।
ಅಮಿತ ಯಶದಿಂದೊಪ್ಪುವವಳಿಗೆ
ಸಮವಿರದ ವರ ಪುಣ್ಯಚರಿತೆಗೆ
ನಮನ ಜಗದಿಂ ಪಡೆಯುವವಳಿಗೆ ಶಾಂತತಾಮಯಿಗೆ ॥೭॥

ಜಗತಿನಲ್ಲಿಯೆ ಶ್ರೇಷ್ಠ ಜನನಿಗೆ
ಜಗತಿಗೆಲ್ಲಾ ನೆರೆವ ಮಾಳ್ಪೆಗೆ
ಜಗತಿಗೆಲ್ಲಾ ಜ್ಞಾನದಾನವಗಯ್ವ ಮಹಿಮಳಿಗೆ ।
ಜಗಕೆ ಧರ್ಮದ ಜ್ಞಾನದರ್ಶನ
ಮಿಗೆ ಮಮತೆಯಿಂದೆಸಗುವವಳಿಗೆ
ಜಗವನ್ನೆಲ್ಲಾ ತನ್ನ ಋಣದೊಳಗಿಟ್ಟಳಿಗೆ ಮತ್ತೆ ॥೮॥

ಭಾರತಾಂಬೆಯ ಜ್ಯೇಷ್ಠಪುತ್ರಿಯ
ವೀರಶೂರರ ಜನ್ಮದಾತೆಯ
ಭೂರಿ ಸಾಮ್ರಾಟರನು ಶಾಂತರ ಜ್ಞಾನಿ ಜನರನ್ನು ।
ಶೂರದಾನಿಗಳನು ಪರಮೋ-
ದಾರರನು ತಾಂ ಸತತ ಪಡೆಯುವ
ಚಾರುಚರಿತೆಗೆ ಕನ್ನಡದ ಭೂದೇವಿಗಾನತವು ॥೯॥

ಕನ್ನಡದ ನಾಡಲ್ಲಿ ಜನಿಸಿದ
ಸನ್ನುತರು ಪಂಪಾದಿಗಳು ಮೇಣ್
ಣೆನ್ನಳಿದ ಹಿರಿಕಿರಿಯರೆನಿಸಿರುವೆಲ್ಲ ಕವಿಗಳಿಗೆ ।
ಉನ್ನತಿಯಗೊಳಿಸಿರುವ ಭಾಷೆಯ
ನನ್ನಿಸೊಲ್ಲಿನ ಸೇವಕರಿಗಾಂ
ಭಿನ್ನವಿಲ್ಲದ ಶುದ್ಧ ಭಾವದೆ ನತಿಯನೆಸಗುವೆನು ॥೧೦॥

ಆರು ಚರಣದ ಕಾವ್ಯವರ್ಗದಿ
ಮೀರಿಹ ಹರಿಶ್ಚಂದ್ರ ಕಾವ್ಯವ
ಭೂರಿ ತೋಷವು ಬುಧರಿಗಾಗುವ ತೆರದಿ ಬರೆದಿರುವ ।
ಸಾರತರ ಕವಿ ರಾಘವಾಂಕನ
ಚಾರು ಚರಣಕೆ ನಮನಗಯ್ವೆನು
ವಾರಿನಿಧಿಯೊಳು ತೋಷವೆಂಬುವ ಬಿದ್ದಿರುವ ನಾನು ॥೧೧॥

ಎರಗುವೆನು ಬಲು ಪ್ರೇಮದಿಂದಂ
ಸರುವ ಜನರಿಗೆ ಮೋದಗೊಳಿಸುವ
ಸರುವರೂ ಬೇಸರದೆ ನೋಡುವ ಕೇಳ್ವ ನಾಟಕವ ।
ಸುರಸಯುತ ಬಹು ಪಾರಿಜಾತವ
ಬರೆದ ಕವಿ ಯಪರಾಳ ತಮ್ಮಪ
ನುರುಹರುಷದಿಂ ನಾನು ಚರಣಾಂಭೋಜಯುಗ್ಮಕ್ಕೆ ॥೧೨॥

ಮರೆಯಲೆಂತಾಂ ಪ್ರಾಣಮಿತ್ರನ
ಹರನೊಳಗೆ ಬೆರೆದಿರುವ ಸುಜನನ
ಕರುಣೆಯಾಗಿಹ ಹಮ್ಮಿರದ ಬಿಳ್ಳೂರ ಡಾಕ್ಟರನ ।
ತೊರೆದು ಸ್ವಾರ್ಥವ ನನ್ನ ಮೇಲತಿ
ತೆರತೆರದೊಳುಪಕಾರ ಗೆಯ್ದಿಹ
ಸರುವರಿಗೆ ಪ್ರಿಯನಾದ ಸುಗುಣಿ ಶಿವಪ್ಪನಿಗೆ ನತಿಯೆ ॥೧೩॥

ಬರೆದಿರುವನೀ ವರ ಪುರಾಣವ
ಮೆರೆಯುತಿಪ ಬನಹಟ್ಟಿ ನಗರದ
ದೊರೆಯನಾಗಿಹ ಕಾಡದೇವರ ಭಕ್ತನಾಗಿರುವ ।
ಸರುವ ಜನರಿಗೆ ಬಾಗಿ ನಡೆಯುವ
ಹರನ ಮೇಣ್ ಸದ್ದಾಸನಾದಾ
ಕಿರಿಯ ಸೇವಕ ಭಾಷೆಯ ತುಕಾರಾಮನೆಂಬವನು ॥೧೪॥

ಪ್ರಥಮ ಪೀಠಿಕೆ ಮುಗಿದುದು





# ಪುರಾಣ ಪೀಠಿಕೆ

ಶ್ರೀ ಶಿವಸು ಕೈಲಾಸನಾಥನು
ಮೂಷಕವನೇರಿಹನ ಜನಕನು
ದಾಸರಂ ಬಹು ಕರುಣದಿಂ ಸತತ ಪೊರೆವವನು ।
ಈಶನಿಗೆ ಸರಿ ಇಹರೆ ಜಗದಲಿ
ಪೋಷಕಂ ತಾಂ ವಿಶ್ವವೆಲ್ಲವ
ತೋಷನಿಧಿಯಾ ಪಾರ್ವತೀಶನು ಪೊರೆ ಯಲ್ಲರನು ॥ ೧ ॥

ಪಿತನು ಗೈಯ್ಯುವ ಪತಿಯ ನಿಂದೆಯ
ಸತಿಮಣಿಯು ತಾಂ ಕೇಳಲಾರದೆ
ಪಿತನ ಯಜ್ಞಕ್ಕಾದಳಾಹುತಿ ವಿನುತೆ ದಕ್ಷಸುತೆ ।
ಚತುರೆ ಬಳಿಕಗರಾಜನುದರದಿ
ಪೃಥಿವಿಯೊಳಗೀ ಜನಿಸಿ ಮೋದದೆ
ಶಿತಿಗಳನ ತಾಂ ಲಗ್ನವಾಗಿಹ ಪಾರ್ವತಿಗೆ ನತಿಯು ॥ ೨ ॥

ಶಿವನ ಅಗ್ನಿಯ ನೇತ್ರದಿಂದಂ
ಭವಿಸಿರುವ ಶ್ರೀ ವೀರಭದ್ರನು
ಶಿವನ ಬೆಸದೊಲು ದಕ್ಷರಾಜನ ಮಸ್ತಕವ ತರಿದು ।
ಭುವಿಯ ಮೇಲ್ ನರಸಿಂಹರೂಪದೆ
ಭವಿಸಿ ಮದದಿಂ ಜನರ ವಧಿಸಿದ
ದಿವಿಜಹರಿಯಂ ತಾನು ವಧಿಸಿದ ದೇವಗಾನತವು ॥ ೩ ॥

ಸಿದ್ಧಿನಾಯಕನಾದ ದೇವಗೆ
ಬದ್ಧನಾಗಿರದವಗೆ ಮೋಹದೆ
ಶುದ್ಧ ಸಾತ್ವಿಕ ರೂಪನಾಗಿಹ ಮತ್ತೆ ಪಾರ್ವತಿಯ ।
ಮುದ್ದು ಮಗನಿಗೆ ಕರದೊಳಂಕುಶ
ವಿದ್ದ ಸಂತತ ತೋಷದೊಳುತಾ
ನಿದ್ದ ಗಜವದನನಿಗೆ ಹರ್ಷದೆ ನಾನು ವಂದಿಪೆನು ॥ ೪ ॥

ಹರಿಯು ಬ್ರಹ್ಮನ ಸುರಪತಿಯ ತಾಂ
ತ್ವರದಿ ಸೋಲಿಸಿ ಯುದ್ಧ ರಂಗದಿ
ಹರನ ಲೋಕವನುಳಿದು ದಿವಿಜರ ಲೋಕವನ್ನೆಲ್ಲ ।
ಭರದೆ ಪಾದಾಕ್ರಾಂತ ಮಾಡಿದ
ದುರುಳ ರಾಕ್ಷಸ ತಾರಕಾಖ್ಯನ
ತರಿದ ಶರವನದೊಳಗೆ ಜನಿಸಿದ ಷಣ್ಮುಖನಿಗೆ ನತಿಯು ॥ ೫ ॥

ವಿಷಮ ಮತ ವಿಷ ಪಸರಿಸಿರೆ ಬಲು
ರಸೆಯೊಳೀ ಭಾರತದಿ ಮೊದಲೊಳು
ಕಸುವು ಹೋಗಿರೆ ಧರ್ಮ ದೇಶದ ಹಿಂದುಳಿದ ಜನರು ।
ಉಸುರುಗರೆಯುತೆ ದುಃಖದಿಂದಂ
ಯಶದ ಮಾರ್ಗವ ಕಾಣಲಾರದೆ
ಕಸವಿಸಿಯ ಕಡು ಪಡುತೆ ಕಾಲವ ಕಳೆಯುತಿರುವವಗೆ ॥ ೬ ॥

ಶಿವನ ಬಯಕೆಯ ತೆರದಿ ಜನ್ಮಿಸಿ
ಭುವಿಯೊಳಗೆ ಭಾರತದ ಬಂದನು
ದಿವಿಜನಾಗಿಹ ಮಹಿಮ ಬಸವನು ಸತ್ಯಧರ್ಮವನು ।
ಅವಿರತವು ಶ್ರಮಿಸುತ್ತೆ ಪಸರಿಸಿ
ಜವದೆ ಜನರುದ್ಧಾರ ಮಾಡಿದ
ರವಿಗೆ ಧರ್ಮದ ಬಸವದೇವಗೆ ಮುದದಿ ವಂದಿಪೆನು ॥ ೭ ॥

ಲಿಂಗವಿಲ್ಲದ ಶಿವನ ಭಕ್ತನು
ತುಂಗಕೀರ್ತಿಯ ಪಡೆದ ಸಿದ್ಧನು
ಹಂಗಿರದ ಶ್ರೀ ಸಿದ್ಧರಾಮಗೆ ಸೊನ್ನಲಾಪುರದ ।
ಅಂಗಜಾರಿಯ ದಯದೆ ಸೋಲಿಸಿ
ಮಂಗಲದ ನಿಜಸಿದ್ಧಿ ಬಲದಿಂ
ಲಿಂಗಧರಿಸಲಿಕವಗೆ ಹಚ್ಚಿದ ಪ್ರಭುಗೆ ಮಣಿಯುವೆನು ॥ ೮ ॥

ಅನುಭವದ ಮಂಟಪದಿ ಪ್ರಮುಖನು
ವಿನಯರೂಪನು ಜ್ಞಾನಜಲಧಿಯು
ಘನಮಹಿಮ ಗುರು ಬಸವದೇವಗೆ ಜ್ಞಾನ ಮಾರ್ಗದಲಿ ।
ಕೊನೆಗೆ ತಾಂ ಗುರುವಾಗಿ ಮೆರೆದಿಹ
ತನುವ ಶಿವಮತಕಾಗಿ ಸವೆಸಿದ
ಜನಜನಿತ ಗುರು ಚೆನ್ನಬಸವನ ಚರಣಕೆರಗುವೆನು ॥ ೯ ॥

ಹರನ ಲೋಕವ ತೊರೆದು ಮರ್ತ್ಯದಿ
ನರರ ರೂಪವ ತಾಳ್ದು ಜನಿಸಿದ
ಶರಣರೆನಿಸಿದ ಪ್ರಮಥರೆಲ್ಲರ ಚರಣ ಸಾರಸಕೆ ।
ಹರುಷದಿಂದಂ ಬಾಗುವೆನು ನಾಂ
ಸ್ಮರಿಸುವವರೆಸಗಿರುವ ಕಾರ್ಯವ
ಮರೆಯಲಾಗದು ಸದುಪಕಾರವ ನೆನೆಯುತ್ತ ಮತ್ತೆ ॥ ೧೧ ॥

ಅಕ್ಕನಾಗಮ್ಮಾದಿ ಶರಣೆಯ
ರಕ್ಕರದೆ ವಂದನೆಯ ಮಾಳ್ಪೆನು
ಕುಕ್ಕಿಸಿರುವರು ಜಗದ ಕಣ್ಗಳ ಶರಣೆಯುವರವರು ।
ತಕ್ಕವರು ಸ್ತುತಿ ಮಾಡಲೆಲ್ಲರು
ಚೊಕ್ಕ ತಮ್ಮಯ ನಡೆ ನುಡಿಗಳಿಂ
ದುಕ್ಕುವುದು ಸಂತೋಷಸಾಗರ ನೆನಿಸಿದೊಡನವರ ॥ ೧೧ ॥

ಚೆನ್ನ ಕನ್ನಡ ಭಾಷಿಕರದಿ
ಚಿನ್ನದಂತಹ ಭೂಮಿ ಭಾಗದಿ
ರನ್ನದಂತಹ ದೇವ ಮಂದಿರ ಹಲವು ಶೋಭಿಪೆವು ।
ಇನ್ನು ತೀರ್ಥ ಕ್ಷೇತ್ರವೆನಿತೊ
ಸನ್ನುತಿಗೆ ಸತ್ಪಾತ್ರವಾಗಿವೆ
ನನ್ನಿಯೇ ಕರ್ನಾಟಕದ ಭೂ ಪುಣ್ಯಭೂ ನಿಜವು ॥ ೧೨ ॥

ಪಟ್ಟದೇವರ ಮೇಣ್ ವಿರಕ್ತರ
ಸೆಟ್ಟ ಮಠಗಳಗಣಿತವಿರುವವು
ಬಿಟ್ಟು ಬಿಡದೇ ಇರುವ ಚರಮೂರ್ತಿಗಳ ಮಠವೆನಿತೊ ।
ದಿಟ್ಟಿಗುರೆ ಸಂತೋಷಗೊಳಿಪವು
ಬಿಟ್ಟು ಸ್ವಾರ್ಥದ ಮಠದೊರೆಯರಾ
ಗಟ್ಟಿದುವು ತಾವ್ ಗೆಯ್ಯುತಿರುವರು ಧರ್ಮಸೇವೆಯನು ॥ ೧೩ ॥

ಮಠದ ಸ್ವಾಮಿಗಳೊಳಗೆ ನೈಜವು
ಪಟುಗಳೀಸು ಪುರಾಣದೊಡೆಯರು
ನಿಟಿಲನೇತ್ರನ ದಯದೆ ಜನಹಿತವಧಿಕ ಮಾಡಿಪರು ।
ದಿಟವು ಶಿವಸೇವಕರು ಮಹಿಮರ
ತಟನಿಪತಿಯೇ ದಯದೊಳಿರುವರು
ಕುಟಿಲತನ ಗೊತ್ತಿರದ ಶ್ರೀ ಗುರುಸಿದ್ಧಯತಿವರರು ॥ ೧೪ ॥

ಸುಮತಿಯೇ ತಳಹದಿಯು ಧರ್ಮದ
ಸುಮತಿಗಳಿಗೇಂ ಅರಹಬೇಕೇ
ಸುಮನರರ ಹರ ಶಂಭುವಿನ ಸುತರೆಲ್ಲ ಮಾನವರು ।
ಸಮಗಣಿಸದದು ಧರ್ಮವಲ್ಲವು
ಕುಮತಗಳು ಹಾಗಿದ್ದ ಮತಗಳು
ಸಮಗಣಿಪುದೀ ಮನುಜರೆಲ್ಲರ ಶಿವಮತವು ತಾನು ॥ ೧೫ ॥

ವೀರಶೈವರ ಧರ್ಮ ಮಾಡಿದೆ
ಭೂರಿ ಹಿತವನು ಹಿಂದು ಧರ್ಮದ
ತೋರಿಸಿದೆ ಸತ್ಪಥವ ಧರ್ಮದ ಸುಸಮತೆಯ ತತ್ವ ।
ಬೀರಿಬಿಟ್ಟಿತು ದೇಶದೆಲ್ಲೆಡೆ
ಬೇರು ಕಡಿದಿದೆ ವಿಷಮ ಕುಮತದ
ದೂರ ಮಾಡಿದೆ ಜಾತಿಭೇದದ ಭಾವವನ್ನಿಡವು ॥ ೧೬ ॥

ಇಲ್ಲಿ ಜಾತಿಯ ಭೇದವೇ ತಾಂ
ಸಲ್ಲಲಿತ ಶಿವಧರ್ಮದಲ್ಲೀ
ಸಲ್ಲಿಸಿರುವದು ನಾರಿಯರಿಗೂ ಸಮತೆಯನ್ನಿದುವು ।
ಇಲ್ಲ ಮಡಿ ಮೈಲಿಗೆಯ ರೀತಿಯು
ಕೊಲ್ಲಲಾಗದು ಪ್ರಾಣಿಗಳನು
ಮೆಲ್ಲಬಾರದು ಮಾಂಸವನು ಪೇಣ್ ಸುರೆಯ ತ್ಯಜಿಸುವುದು ॥ ೧೭ ॥

ಎಂಬ ಕಟ್ಟುಗಳುಂಟು ಸಮುಚಿತ
ಶಂಭುವಿನ ಸದ್ಧರ್ಮದೊಳಗೀ
ಯುಂಬುವರು ಬಹು ಸೌಖ್ಯಶಾಂತಿಯ ಶಿವಮತದ ಜನರು ।
ತುಂಬಿರುವರೀ ಶ್ರೇಷ್ಠ ಧರ್ಮದಿ
ಹಂಬಲಿಸಿ ಪರಮತದ ಜನಗಳ
ಮುಂಬರಲು ಪಂಥಾನ ಕಾಣದೆ ಪೂರ್ವಧರ್ಮದಲಿ ॥ ೧೮ ॥

ಮಾಡಿಕೊಂಡರು ತಮ್ಮಯುನ್ನತಿ
ನಾಡೆ ಸಕಲರು ಸೇರಿ ಯಿದರೊಳು
ಮಾಡಿದನು ಶ್ರೀ ಬಸವರಾಜನು ಉದ್ಧರಣವವರ ।
ಹಾಡಿಹರಸುವರಿಂದಿಗೂ ಆ
ಜೋಡಿರದ ಧರ್ಮಾತ್ಮನುಪಕೃತಿ
ಬೇಡುವರು ಮತ್ತೊಮ್ಮೆ ಜನ್ಮಿಸಿ ಬರಲಿಕವನನ್ನು ॥ ೧೯ ॥

ತನ್ನ ಧರ್ಮದಿ ತೆಗೆದುಕೊಂಡಿದೆ
ಮುನ್ನವಸ್ಪೃಶ್ಯರನ್ನು ಹಲರನು
ಚನ್ನಮಾರ್ಗಕೆ ಹಚ್ಚಿರುವರ್ಕೆ ಕೆಡಕುನಡೆ ಬಿಡಿಸಿ ।
ನನ್ನಿಯೇ ಇದು ಶ್ರೇಷ್ಠ ಧರ್ಮವು
ಕನ್ನಡದ ನಾಡಲ್ಲಿ ಭವಿಸಿದೆ
ರನ್ನಕೀರ್ತಿಯ ತಳೆದಿರುವದಿದು ನಮ್ಮ ನಾಡಲ್ಲಿ ॥ ೨೦ ॥

ಮುಂದೆ ಬಿದ್ದರು ಸರ್ವವಿಧದಲಿ
ಬಂಧುರರು ಶಿವಮತದರೆಲ್ಲರು
ಹೊಂದಿ ಶ್ರಮವನು ಪ್ರಮುಖ ಜನಗಳು ದುಡಿದ ಕಾರಣದೆ ।
ಹೊಂದಿ ಕಷ್ಟವ ಮತದರೆಯರಾ
ನಂದದಿಂದಂ ಶ್ರಮಿಸುತಿರುವರು
ಕುಂದಿರದ ಸ್ವಜನರ ಸುಹಿತವನು ಮಾಡಲಿಕೆ ತಾವು ॥ ೨೧ ॥

ಇಂತು ಲಿಂಗಾಯತರ ಧರ್ಮವು
ಕಂತುರಿಪುವಿನ ಕರುಣದಿಂದಂ
ಶಾಂತಿ ಸೌಖ್ಯವ ಬೀರುತಿರುವದು ಹಿಂದು ದೇಶದಲಿ।
ಅಂತು ಸಮತಾ ತತ್ವ ಹರಡಲಿ
ಸ್ವಂತ ಜನರೇಳಿಗೆಯ ಗೆಯ್ಮೆಲಿ
ಚಿಂತೆಯಳಿಯಲಿ ಸುಖವು ತುಂಬಲಿ ನಮ್ಮ ದೇಶದಲಿ ॥ ೨೨ ॥

ಪಾರಮಾರ್ಥಿಕ ವಿಷಯದೊಳು ಬರಿ
ಸಾರಶಕ್ತಿ ವಿಶಿಷ್ಟವಾಗಿಹ
ಧೀರರೇ ಅದ್ವೈತ ಮತವಿಹುದೆಂದು ಪೇಳುವದು।
ತೀರ ತಾನು ಸ್ವತಂತ್ರವಾಗಿದೆ
ಸಾರ ಸಾಮಾಜಿಕ ವಿಷಯದೊಳು
ವೀರರೇ ಇದು ಧರ್ಮವದರಿಂ ವೀರಶೈವವೆಂದು ॥ ೨೩ ॥

ಜೈನರಂತೆ ಸ್ವತಂತ್ರವಾಗಿದೆ
ತಾನು ಲಿಂಗಾಯತರ ಧರ್ಮವು
ಜಾಣರೇ ಸತ್ಕ್ರಾಂತಿ ಮಾಡಿದೆ ವಿಷಮ ಧರ್ಮದಲಿ
ತಾನು ಅಸ್ಪೃಶ್ಯರನು ಕೂಡಾ
ಹೀನವಾಗೆಣಿಸಿಲ್ಲವೆಂದೂ
ದೀನ ದುರ್ಬಲರನ್ನು ನಿರುತದೊಳೆತ್ತಿಕೊಳ್ಳುವದು ॥ ೨೪ ॥

ವೀರಶೈವರ ಧರ್ಮ ಮಾಡಿದ
ತೀರ ತುಸು ಸಂಗತಿಯನರಿಯಲು
ಸೇರಿಸಿರುವದು ಪೀಠಿಕೆಯೊಳು ತಿಳಿದುಕೊಳ್ಳುವುದು।
ವೀರಶೈವರೆ ಕೇಳಿರೈ ನೀವ್
ವೀರಯತಿ ಗುರುಸಿದ್ಧ ಮಹಿಮರ
ಭೂರಿ ಮುದದೆ ಪುರಾಣ ಪೇಳ್ವೆವು ಮುಂದೆ ನಾವಿನ್ನು ॥ ೨೫ ॥

ಪುರಾಣ ಪೀಠಿಕೆ ಮುಗಿದುದು



# ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಪುರಾಣ

## ಪ್ರಾರಂಭ

## ಮೊದಲನೆಯ ಸಂಧಿ

( ಭಾಮಿನಿ ಷಟ್ಪದಿ )

॥ ಸೂಚನೆ ॥ ಪುಟ್ಟಿಹರು ಕೊಣ್ಣೂರ ಕ್ಷೇತ್ರದಿ
ದಿಟ್ಟರಾಗಿಹ ಜಗದ ಗುರುಗಳು
ದಿಟ್ಟಿ ಮೂರುಳ್ಳವನ ದಯದಿಂ ಲೋಕ-ಹಿತಗೆಯ್ಯೆ ।

ಜಗವನೆಲ್ಲವ ತನ್ನುದರದೊಳು
ಮಿಗೆ ಹರುಷದಿಂದಿಟ್ಟುಕೊಂಡಿಹ
ಜಗತಿಗೆಲ್ಲಾ ಜನಕನಾಗಿಹ ಪಾರ್ವತೀಶ್ವರನು ।
ಅಘವ ನಮ್ಮಯ ಕ್ಷಮಿಸಿ ಪೊರೆಯಲಿ
ಸುಗತಿಯಂ ಕಡೆಯಲ್ಲಿ ಕೊಡಲೈ
ಸುಗುಣಮಣಿಗಳ ಕೋಶನಾಗಿರುವಾ ದಯಾಮಯನು ॥ ೧ ॥

ವಿನುತ ಕರ್ನಾಟಕದೊಳಿರುವುದು
ಜನ ಜನಿತ ಬೆಳಗಾಂವಿ ಜಿಲ್ಹೆಯು
ಘನವ ಪೊಂದಿಪ ಜಿಲ್ಹೆಯೊಳು ಗೋಕಾಕವೆಂದೆನಿಪ ।
ವಿನುತ ತಾಲೂಕಿಪ್ಪುದು ದೊಡ್ಡದು
ಮನಸಿಜಾರಿಯ ದಯದೊಳದರೊಳು
ಜನರೆ ಕೊಣ್ಣೂರೆಂಬ ಕ್ಷೇತ್ರವು ಹೆಚ್ಚಿಗೊಪ್ಪುವುದು ॥ ೨ ॥

ಇರುವದದು ಗೋಕಾಕದಿಂದಂ
ಪೆರೆವ ಕ್ಷೇತ್ರವು ಸಪ್ತ ಮೈಲವು
ಹಿರಿಯ ಭಕ್ತರೆ ಪಶ್ಚಿಮಕೆ ಗೋಕಾಕಪುರದಿಂದೆ ।
ನೆರೆಯೊಳಿರೆ ಗೋಕಾಕ ಸ್ಟೇಶನ
ಹರಿಯುವಳು ತಾಂ ಪುಣ್ಯಜಲಯುತೆ
ಭರದೆ ಘಟ್ಟಪ್ರವಾಹವೆಂಬುವ ಸತ್ತರಂಗಿಣಿಯು ॥ ೩ ॥

ಬಳಿಯೊಳಿಪುದಾ ಕ್ಷೇತ್ರ, ಪೂರ್ವಕೆ
ಹೊಳೆಗೆ ತಡಿಸಲು ಸುಪ್ರಸಿದ್ಧವು
ಹೊಳೆಯ ತಟದಲಿ ತೆಂಕಣಕೆ ವಿಲಾಯತಿಯ ಜನರ ।
ಬಲುಹು ದೊಡ್ಡದು ನೂಲ ಗಿರಣಿಯು
ಚೆಲುವು ರಾಮೇಶ್ವರನ ಗುಡಿಯಿದೆ
ತಳೆದು ಗಾಂಭೀರ್ಯವನು ಮೆರೆವುದು ಗುಡಿಯು ತಾನಲ್ಲಿ ॥ ೪ ॥

ನೆರೆಯೊಳಿದೆ ಕೊಣ್ಣೂರ ಕ್ಷೇತ್ರದ
ಪೆರೆವ ಬಲು ಕಿರು ಬೆಟ್ಟ ಗ್ರಾಮವು
ನೆರೆಯೊಳಿದೆ ಮೇಣ್ ಹಳ್ಳಿ ಮಲ್ಲಾಪುರವು ತಾನಲ್ಲಿ ।
ಇರುವದದು ಮಲ್ಲಾಪುರವು ಗಡ
ವರ ತರಂಗಿಣಿ ಘಟ್ಟಜಾತೆಯ
ಪರವ ಭಕ್ತರೆ ತೀರದಲಿ ಕೊಣ್ಣೂರ ಪೂರ್ವಕ್ಕೆ ॥ ೫ ॥

ಗಿರಣಿ ಸುತ್ತಲು ಗ್ರಾಮನೆಲಸಿದೆ
ಗಿರಣಿಯಲಿ ಗಡ ಕೂಲಿ ಮಾಳ್ಪರ
ಗಿರಣಿ ಯೂರೆಂದಕೆ ನಾಮವು ಬಿದ್ದಿಹುದು ತಾನು ।
ಇರುವರಾ ಗಿರಣಿಯಲಿ ದುಡಿಯುವ
ಸರುವ ಜನಗಳು ಹತ್ತು ಸಾಸಿರ
ಹಿರಿಯ ಗಿರಣಿಯು ನಿಖಿಲ ಕರ್ನಾಟಕದೊಳಿದು ನಿಜವು ॥ ೬ ॥

ಹತ್ತಿರವೆ ಕೊಣ್ಣೂರ ಕ್ಷೇತ್ರದ
ಭಿತ್ತಿ ಇದೆ ಹೊಳೆ ನೀರು ಕಟ್ಟಿದ
ಚಿತ್ತವೇಧಕವಾಗಿರುವದದು ವಿಸ್ತಾರ ಬಹುದೊಂದಿ ।
ಇತ್ತದರ ಕಾಲಿವೆಯು ಹೋಗಿಹು-
ದೊತ್ತರವು ಸಾಗುತ್ತೆ ಪೂರ್ವಕೆ
ಮತ್ತೆಸೆಯುವವು ಗುಡ್ಡಗಳು ಗೋಕಾಕ ಬಳಿ ಇರುವ ॥ ೭ ॥

ಹಿರಿಯದಿಹ ಕೊಣ್ಣೂರ ಕ್ಷೇತ್ರದಿ
ಹಿರಿಯ ಸಿದ್ಧನ ಕಾಡದೇವರ
ಪರಮ ದೇವಾಲಯ ಮಠಂಗಳು ರಮ್ಯವಾಗಿಹವು ।
ಇರುತಿಹರು ಬಹು ಜನಗಳಿತ್ತಲೆ
ಕರುಣಿಗಳು ಲಿಂಗಾಯತರು ತಾವ್-
ಸರುವರೂ ಸುಖದಿಂದೆ ಬಾಳುವೆ ಸಾಗಿಸುತೆ ನಿರುತ ॥ ೮ ॥

ಕಾಡಸಿದ್ಧನ ಮಠದೊಳಿರುವುದು
ನಾಡೆ ರಂಜಿಪ ಗುಡಿಯು ವಿಶ್ರುತ
ನಾಡಿನೊಳು ಹೆಸರಾದ ಶ್ರೀ ಕೆಂಪಯ್ಯಸ್ವಾಮಿಗಳ ।
ನೋಡಿರೈ ಕೊಣ್ಣೂರ ಕ್ಷೇತ್ರದಿ
ಗಾಢ ಬಲಿಹನುಮಂತ ದೇವರ
ಜೋಡಿರದ ತಾಂ ಬ್ರಹ್ಮಚಾರಿಯ ಗುಡಿಯು ಶೋಭಿಪ್ಪುದು ॥ ೯ ॥

ಮತ್ತೆ ಚೈತ್ಯಾಲಯವಿರುವದಾ
ಚಿತ್ತವೆಳೆಯುವ ಕ್ಷೇತ್ರದಲ್ಲಿಯೆ
ಮೆತ್ತಗಿನ ಮಾನಸದ ಜನಗಳ ಜೈನ ಬಂಧುಗಳ ।
ಹತ್ತಿರವೆ ಕಿರುಬೆಟ್ಟದಾಚೆಗೆ
ಕುತ್ತು ಭಕ್ತರ ಕಳೆವ ಸಿದ್ಧನ
ಸತ್ತಮನ ದುರದುಂಡಿ ಸ್ವಾಮಿಯ ದಿವ್ಯಮಠವಿಹುದು ॥ ೧೦ ॥

ಇರುವದದು ಅರಭಾವಿ ಗ್ರಾಮದ
ನೆರೆ ಇರುವ ಪುಣ್ಯಾಟವಿಯೊಳು
ಹಿರಿಯ ಗುಡಿಯದು ಪ್ರೇಕ್ಷಕರಿಗುರೆ ಹರ್ಷಗೊಳಿಸುವುದು ।
ಇರುವದಾ ಕೊಣ್ಣೂರ ಕ್ಷೇತ್ರದ
ನೆರೆಯೊಳೀಚೆಗೆ ಸಾವಳಗಿಯೊಳು
ಕರುಣೆ ಸಿದ್ಧನ ಸ್ವಾಮಿ ಶಿವಲಿಂಗೇಶ್ವರನ ಮಠವು ॥ ೧೧ ॥

ಮೆರೆವುದೈ ಮೇಣ್ ತೆಂಕಣಕೆ ಮಠ
ಪರಮ ಗುರು ಅಡಿವಪ್ಪ ಸ್ವಾಮಿಯ
ಹಿರಿಯ ಸಿದ್ಧನ ದಿವ್ಯಮಠವದು ಅಂಕಲಗಿಯೊಳಗೆ ।
ವರ ಯಶೋದುಂದುಭಿಯು ನಿರುತಂ
ಹಿರಿಯ ಯೋಗಿಯ ಮೊಳಗುತಿರುವದು
ಹರುಷ ಪಡೆವರು ನಾಮವಾತನ ಕೇಳಿದವರೆಲ್ಲಾ ॥ ೧೨ ॥

ಸ್ವಾಮಿ ಅಡವೀಶ್ವರನ ಭಕ್ತನು
ಪ್ರೇಮ ಪಡೆಕೊಂಡವನು ಗುರುವಿನ
ಕಾಮಿತಾರ್ಥವ ಭಕ್ತರಿಗೆ ತಾಂ ಸಲ್ಲಿಸಿರುವವನು ।
ಹೇಮ-ಭೂಮ್ಯಾದಿಗಳ ಬಯಸದ
ಸ್ವಾಮಿ ಶ್ರೀ ಬಾಳಯ್ಯನವರಾ-
ಧಾಮ ಶಾಂತಿಯದೆಸಿಪ ಮಠವದು ತವಗದಲ್ಲಿಹುದು ॥ ೧೩ ॥

ಇಂತಿರುವ ಶ್ರೀ ಸಿದ್ಧ ಜನಗಳ
ಶಾಂತಿಮಯ ಘನಮಠಗಳಲ್ಲಿ
ಸಂತತವು ಭೋಜನವ ಜನರಿಗೆ ಸಲ್ಲಿಪರು ಬಿಡದೆ ।
ಚಿಂತೆ ದೂರಾಗುವುದು ಕೂಡಲೆ
ಭ್ರಾಂತಿಯಳಿವುದು ತಾನುಮಾಯೆಯು
ಸಂತಸವು ಪೆರ್ಚುವದು ಸರ್ವರ ಮಠಕೆ ಹೋದೊಡನೆ ॥ ೧೪ ॥

ಗಟ್ಟಿ ಬೆಟ್ಟಗಳನ್ನು ಗಣಿಸದೆ
ಗಟ್ಟಿತನದಿಂ ಮುಂದೆ ಸಾಗುತೆ
ಪಟ್ಟು ಸಂತೋಷವನು ನುತ ಕೊಣ್ಣೂರ ಬಳಿಹರಿದು ।
ಬಿಟ್ಟು ಜೀವದ ಹಂಗು ಜಿಗಿದಳು
ಪಟ್ಟು ಧೃತಿಯನು ಕೊಳ್ಳದೊಳಗಾ
ಹುಟ್ಟಿದೊಲು ಮತ್ತಾಯ್ತು ಭರದಿಂ ಸಾಗಿದಳು ಬಳಿಕ ॥ ೧೫ ॥

ಸಾಗಿಹಳು ಕೂಲಂಕಷೆಯು ತಾಂ
ರಾಗದಿಂ ಬಹು ಪತಿಯ ಸದನಕೆ
ಹೋಗುವಂತೆ ಪತಿವ್ರತೆಯು ನಿಜ ಪತಿಯ ಸದನಕ್ಕೆ ।
ಹೋಗುವಾಗಳ್ ಪಥದೊಳಿರುವಾ
ಸಾಗಿರುವ ಪತಿಗೃಹಕೆ ಕೃಷ್ಣೆಯ
ಬೇಗನೇಂ ತಾಂ ಕೂಡಿ ನಡೆದಳು ಘಟ್ಟಸಂಜಾತೆ ॥ ೧೬ ॥

ಘಟ್ಟದೊಳು ಹುಟ್ಟಿರುವ ಕಾರಣ
ಪಟ್ಟು ಘಟ್ಟಪ್ರವಾಹ ನಾಮವ
ದಿಟ್ಟಿಗಾನಂದವನು ಮಾಡುತೆ ಸ್ನಾನಗೈದವರ ।
ಕುಟ್ಟಿಯೋಡಿಸುತಿಹಳು ಪಾಪವ
ಬಿಟ್ಟು ಬಿಡದೇ ಉಭಯ ತಟಗಳ
ಗಟ್ಟಿಗಳು ತೋಯಿಸಿತೆ ಸುಫಲವ ಕೊಡುವಳನುದಿನ ॥ ೧೭ ॥

ಎಸೆವ ಬಂಗಾಲದುಪಜಲಧಿಗೆ
ಪಶುಪತಿಯು ಲಗ್ನವನು ಗೆಯ್ದನು
ಮಿಸುನಿಯಂತಹ ಗುಣದ ಹಲ ನದಿವಧುಗಳಿಗೆ ತಾನು ।
ಅಸಮ ಸುಂದರಿ ಕೃಷ್ಣೆಯನು ಮೇ
ಣೊಸೆದು ಘಟ್ಟಪ್ರವಾಹ್ಹವಿವಳೆಮ್ಮ
ಸುಸಮಯದೊಳಾತ್ಮನೇ ತಾನೆಸಗಿಹನು ಲಗ್ನ ॥ ೧೮ ॥

ಮೀನ ಮೊಸಳೆಗೆ ಕಪ್ಪೆ ಯೇಡಿಗೆ
ತಾನು ಹೊಟ್ಟೆಯೊಳಿಟ್ಟುಕೊಂಡುರೆ
ಪ್ರಾಣದೊಲು ಕಾಪಾಡುತಿರುವಳು ಘಟ್ಟಪ್ರಭೆಯಿವಳು ।
ಮಾನಿನಿಯು ನಿಜ ಸುಧೆಯೊಲಿರುತಿಹ
ಕಾಣೆರ್ಕೆ ಜಲವನ್ನು ಸಲ್ಲಿಸಿ
ಘೂನವಾದಿ ಪ್ರಾಣಗಳ ಪೋಲ್ ಗೆಯ್ವಳು ಪ್ರಕೃತಿಯ ॥ ೧೯ ॥

ಮಲ್ಲಿಗೆಯ ಸಂಪಗೆಯ ಬಕುಲದ
ಬಲ್ಲಿರಾ ಸೇವಂತಿಕೆಯ ಮೇ
ಣೆಲ್ಲ ಬಗೆನರಗಂಪಪೂಗಳ ವೃಕ್ಷ ಲತೆಗಳಿವು ।
ಎಲ್ಲೆಡೆಯೊಳೂ ಶೋಭಿಸವು ಬಹು
ಮಲ್ಲಿಗೆಯ ಪೂ ಲತೆಗಳಡವಿಯ
ಸಲ್ಲಿಸುತ್ತಿವೆ ಶ್ರೇಷ್ಠಗಂಧವನಿತ್ತ ಜನಗಳಿಗೆ ॥ ೨೦ ॥

ಮಾವು ನೇರಲ ಹಲಸು ಪೇರಲ
ತೀವಿರುವವೀ ಸುಫಲ ತರುಗಳು
ತೀವಿಬಿಟ್ಟಿವೆ ಬಾಳೆಬನಗಳು ತೆಂಗಗಿಡಗಳಿವು ।
ಬೇವು ಹುಣಸೆಯ ಮರಗಳೆಸೆವವು
ಭೂಮಿಯಲ್ಲಿಯ ಸುಫಲವೀವುದು
ದೇವರದು ಕೃಪೆಯಧಿಕ ಪಡೆದಿಹರಿತ್ತಲಿನ ಜನರು ॥ ೨೧ ॥

ಗಿಳಿ ನವಿಲು ಕೋಗಿಲೆಗಳಿರುವವು
ಚೆಲುವು ಭಾರದ್ವಾಜವಿರುವವು
ಹಲವು ವಿಧ ಮೇಣ್ ವಿಹಗಳೆಸೆವವು ಬನಗಳೊಳಗಿತ್ತ ।
ಹುಲಿ ಚಿರ್ಚುಗಳಿರುವವಲ್ಲದೆ
ಮೊಲ ಚಿಗರೆಗಳು ತೋಳಗಳು ಬಲು
ನೆಲಸಿರುವವೈ ಇತ್ತಲಿನ ಕಾನನದಿ ಗಿರಿಗಳಲಿ ॥ ೨೨ ॥

ಇನ್ನರಹುವೆವು ತೋಷದಿಂದಂ
ಸನ್ನುತಿಗೆ ಸತ್ಪಾತ್ರರಾಗಿಹ
ಗನ್ನ ಕೀರ್ತಿಯನಾಂತ ಯತಿಗಳ ಜಗದಗುರುವರರ ।
ಚೆನ್ನದಂತಹ ಪೂರ್ವಜರ ನಾಂ
ಮುನ್ನ ವೃತ್ತವ ನಸುವು ಕೇಳ್ವುದು
ಚೆನ್ನ ಮನಸಿನ ಭಕ್ತ ಜನರೇ ಕೊಟ್ಟು ಮನವನ್ನು ॥ ೨೩ ॥

ಕಾಡಸಿದ್ಧನು ಪರಮಸಿದ್ಧನು
ಬೇಡಿದುದ ಭಕ್ತರಿಗೆ ಕೊಡುತಿಹ
ಗಾಢ ಬಲಯುತನಾದ ಸಿದ್ಧನು ನಮ್ಮ ನಾಡಿನಲಿ ।
ಜೋಡಿಯಿರದಿಹ ಕೀರ್ತಿವಂತನು
ನಾಡೊಳೆಲ್ಲೆಡೆ ಗುಡಿ ಮಠಂಗಳ
ನೋಡಿರೈ ಸದ್ಭಕ್ತ ಜನರೇ ಇರುವವಾತನವು ॥ ೨೪ ॥

ಕನ್ನಡದ ನಾಡಲ್ಲಿಯಲ್ಲದೆ
ಗನ್ನ ಮಹಿಮನ ಗುಡಿಗಳಿರುವವು
ಚೆನ್ನವಾದೀ ನಾಡಿನಲ್ಲಿಯು ಮತ್ತೆ ದೂರದಲಿ ।
ಕನ್ನಡದ ನಾಡಲ್ಲಿ ನೈಜವು
ಮನ್ನಣೆಯ ಪೂಜತ್ವವನೊಲು
ನನ್ನಿಯಿದು ಪಡೆದಿರುವರಾರಿಲ್ಲೆಂಬ ಸಂಗತಿಯು ॥ ೨೫ ॥

ಬಂದು ವಾಸಿಸುತಿದ್ದನೈ ಬಹು
ಬಂಧುರನು ಜನಪೀಡೆಗಳೆಯಲು
ಚಂದವಾಗಿಹ ಕ್ಷೇತ್ರ ಕೊಣ್ಣೂರಿನಲಿ ಕೆಲದಿನವು ।
ಮಂದಿ ಬರುತಿರೆ ದೂರ ದೂರಿನ
ಬಂದನೆಂಬುದು ಕೇಳಿ ಸಿದ್ಧನು
ಹೊಂದುತಿದ್ದರು ರೋಗಿಗಳು ತಾವ್ ಗುಣವ ಸತ್ವರವು ॥ ೨೬ ॥

ಮುಖದೆ ಹೇಳಿಯೆ ಕಳೆಯುತ್ತಿದ್ದನು
ಸಕಲ ರುಜೆಗಳ ದೀನತನವನು
ನಿಖಿಲ ಜನಗಳ ಭೂತ ಬಾಧೆಯ ದೂರಮಾಡಿದನು ।
ಅಖಿಲರದು ಬಂಜೆತನ ಶಿವ
ಭಕುತನೀತನು ಕಳೆದುಬಿಟ್ಟನು
ಭಕುತಿ ಬಹಳದರಿಂದೆ ನೆಲಸಿರೆ ಸಿದ್ಧನಲಿ ಜನರ ॥ ೨೭ ॥

ಎಸೆಯುತಿಹ ಕೊಣ್ಣೂರ ಜನಗಳ
ರಸೆಯೊಳಗೆ ಕೀರ್ತಿಸಿದ ಸಿದ್ಧನೊ
ಳಸವಾಗಿತ್ತೆಂದು ಹೇಳುವದೇಕೆ ನಾವಿಲ್ಲಿ ।
ಪಶುಪತಿಯ ಸದ್ಭಕ್ತರಾಗಿಹ
ತುಸು ಜನರ ಜಂಗಮರ ಭಕ್ತಿಯು
ಕುಸುಮತುಲ ಮೃದುಮನದ ಸಿದ್ಧನೊಳಿತ್ತು ತಾನಧಿಕ ॥ ೨೮ ॥

ಹಲವು ವರ್ಷಗಳಾದ ಮೇಲಾ
ತುಲವಿರದ ನುತ ಕಾಡಸಿದ್ಧನು
ಜಲಜಶರಹರನೊಳಗೆ ಕೂಡಿದ ಬಳಿಕ ಜನರೆಲ್ಲಾ ।
ಕಲೆತು ಕೊಣ್ಣೂರಿನಲಿ ಸಿದ್ಧನ
ಚೆಲುವು ಗುಡಿಯನು ಕಟ್ಟಿಬಿಟ್ಟರು
ನೆಲಸಿಬಿಟ್ಟಿತು ಮಠವು ಕೂಡಲೆ ಅರ್ಚಕರಿಗಾಗಿ ॥ ೨೯ ॥

ಬಳಿಕ ಕೆಲ ದಿನಗಳಿದ ಮೇಲಾ
ಚೆಲುಗುಣದ ಮಠದವರ ಮನೆಯಲಿ
ಬಲುಹು ಕೀರ್ತಿಯನಾಂತ ಪುರುಷನು ಜನ್ಮವೆತ್ತಿದನು ।
ಬಲಯುತನು ಕೆಂಪಯ್ಯಸ್ವಾಮಿಯು
ಹಲ ಪವಾಡಗಳೆಸಗಿಪರು ತಾವ್
ಬಲು ಪಸರಿಸಿರೆ ಕೀರ್ತಿಯಿವರದು ಸುತ್ತಲೂ ತಾನು ॥ ೨೦ ॥

ಸಿದ್ಧರಾದುದು ಸ್ವಾಮಿಯವರೀ
ಸಿದ್ಧನೊಬ್ಬನು ಕೊಕಟನೂರಿನೊ
ಳಿದ್ದನೈ ನೆಲಸಿದನು ಕೊಣ್ಣೂರೊಳಗೆ ತಾಂ ಬಂದು ।
ಶುದ್ಧ ಮನಸಿನ ಯೋಗಿವರಗುರು
ಸಿದ್ಧನೆಂಬುದು ನಾಮವಾತನ
ಸಿದ್ಧಿಬಲದಿಂ ಹಲರ ಬಹುಕಲ್ಯಾಣ ಮಾಡಿದನು ॥ ೨೧ ॥

ಸ್ವಾಮಿ ಕೆಂಪಯನವರ ತಾಯಿಯು
ಪ್ರೇಮಮಯ ಗುರಸಿದ್ಧ ಸಿದ್ಧನ
ಪ್ರೇಮದಿಂದಂ ಪೊರೆದ ತಾಯಿಯು ಅಕ್ಕತಂಗಿಯರು ।
ಸೋಮಶೇಖರ ಭಕ್ತ ಸಿದ್ಧನ
ಕಾಮನೋಲಿಪ ತಮ್ಮನಲಿ ನಿಜ
ಸೀಮೆಯಿರದೊಲು ಪ್ರೇಮವಿದ್ದಿತು ಸ್ವಾಮಿ ಕೆಂಪಯಗೆ ॥ ೨೨ ॥

ಹಚ್ಚಿದನು ಯೋಗಗಳ ಮಾಡಲು
ಬಿಚ್ಚು ಮನದಿಂ ಕಲಿಸುತೆಲ್ಲವ
ಮೆಚ್ಚಿದರು ಯೋಗಗಳ ಸೌಖ್ಯಕೆ ಸ್ವಾಮಿ ಕೆಂಪಯರು ।
ಹೆಚ್ಚು ವರ್ಷಗಳಾದ ಮೇಲಾ
ಸ್ವಚ್ಛ ಮನಸಿನ ಸ್ವಾಮಿಗಳಿಗಾ
ಉಚ್ಚತರವಾಗಿರುವ ಸಿದ್ಧಿಗಳೆಲ್ಲ ಲಭಿಸಿದವು ॥ ೨೩ ॥

ಪಲರ ರೋಗಾದಿಗಳ ಕಳೆದರು
ಪಲರ ಬಡತನ ದೂರಗೆಯ್ದರು
ಪಲರಿಗಿತ್ತರು ಸಂತತಿಯ ಕೆಂಪಯ್ಯನವರಿವರು ।
ಪಲರ ಹಿಡಿದಿಹ ಭೂತಗಳ ತ್ವರ
ಬಲಯುತರು ತಾವ್ ಕಳೆದುಬಿಟ್ಟರು
ಬಲುಹು ಕೀರ್ತಿಯ ಪಡೆದರೆಂಬುದು ಹಿಂದೆ ಹೇಳಿಹೆವು. ॥ ೨೪ ॥

ಬರೆದರಿವರು ಗೈದ ಕೃತಿಗಳ
ವರ ಪುರಾಣವು ಜನ್ಮವಡೆವುದು
ಪರಮ ಸಿದ್ಧರು ನೈಜವಿವರಿಗೆ ಶಿಷ್ಯನಿರಲೊಬ್ಬ
ಉಕ್ಕು ಮಮತೆಯಂ ಪಡೆದನಿವರಿಂ
ನೆರೆ ಸುಯೋಗಗಳೆಲ್ಲ ಕಲಿತನು
ಪುರಿಪಿನಿಂದಂ ದುಡಿದು ಸಿದ್ಧಿಗಳೆಲ್ಲ ಗಳಿಸಿದನು ॥ ೨೫ ॥

ಇರಲವಗೆ ಕೆಂಚಪ್ಪನೆಂಬುವ
ಹಿರಿಯರಿಟ್ಟಿಹ ಹೆಸರು ಕೇಳುವ
ದಿರಲವಗೆ ಉಪ್ಪಾರ ಜಾತಿಯ ಪಳಬ ಚಾವಡಿಯು ।
ಪರಸಿ ಜನಗಳ ರೋಗ ಕಳೆದನು
ಪರಸಿ ಬಡತನ ಕಳೆಯುತ್ತಿದ್ದನು
ಬರಲು ಭೂತವು ಹಿಡಿದ ಜನಗಳು ಭೂತಗಳು ತ್ವರದೆ ॥ ೨೬ ॥

ಬಿಟ್ಟು ಜವದಿಂ ಹೋಗುತ್ತಿದ್ದವು
ಕೊಟ್ಟನೈ ಕೆಲ ಬಂಜೆಯರಿಗೀ
ದಿಟ್ಟ ಸಿದ್ಧನು ತಾನು ಸಂತತಿ ಸಿದ್ಧಿ ಬಲದಿಂದೆ ।
ಕಟ್ಟಿಸಿದನೀ ಸಿದ್ಧ ಕೆಂಚಪ
ಗಟ್ಟಿಗನು ಕೊಣ್ಣೂರ ಬಳಿಯಲಿ
ಪಟ್ಟು ಸಂತೋಷವನು ಮಠವನು ನದಿಯ ತಟದಲ್ಲಿ ॥ ೨೭ ॥

ಮಠಕೆ ಗಡ ಕೆಂಪಯ್ಯ ಸ್ವಾಮಿಯೆ
ಪಟು ಸುಗುರುವಿನ ನಾಮವಿಟ್ಟನೆ
ದಿಟವು ಮರಡಿಯೊಳಿದ್ದುದಕ್ಕದು ಮರಡಿ ಮಠವೆಂದು ।
ಸಟಿಹೆಸರು ಗಡ ರೂಢವಾಗಿದೆ
ನಿಟಿಲ ನೇತ್ರನ ಭಕ್ತ ಜನರೇ
ಮಠವಿದುವು ದಾಸೋಹ ಮಠವಿದೆ ಬಿಡದೆ ಸಾಗಿಹುದು ॥ ೩೮ ॥

ಭಕ್ತ ಜನಗಳು ಕೊಟ್ಟ ದಕ್ಷಿಣೆ
ಭಕ್ತರಿತ್ತಿಹ ಹೊಲದ ಲಾಭವ
ಶಕ್ತನೀತನು ಹಿಂದಕಿಡದೇ ಇಟ್ಟು ದಾಸೋಹ ।
ಭಕ್ತ ಜನಗಳಿಗುಣಿಸುತ್ತಿದ್ದನು
ಮುಕ್ತಿದಾಯಕ ಕಾಡಸಿದ್ಧನ
ಭಕ್ತನೀತನು ಕೀರ್ತಿಸಿರುವೆನು ಒಲುವು ತಾನಿತ್ತ ॥ ೩೯ ॥

ಶಿವನೊಳಗೆ ಕೆಂಪಯ್ಯ ಸಿದ್ಧರು
ಭುವನ ನುತರೀ ಬೆರೆದ ಮೇಲಾ
ಶಿವನೊಳಗೆ ತಾಂ ಕೂಡಿಬಿಟ್ಟನು ಸಿದ್ಧಕೆಂಚಪನು ।
ಅವನ ಮಠಕಾಸ್ವಾಮಿಯಾದರು
ಜವದೆ ತಾವ್ ಕೊಣ್ಣೂರಿನೊಳಗಿಹ
ಸುವಿನಯಿಯು ಚರಮೂರ್ತಿಗಳು ವೀರಯ್ಯರೆಂಬವರು ॥ ೪೦ ॥

ಮರಡಿ ಮಠದೊಳಗೆಸೆಯುತಿರುವಾ
ಪರಮ ಸಿದ್ಧನ ಕಾಡದೇವರ
ಹಿರಿಯ ಗುಡಿಯನು ಕಟ್ಟಿಸಿರೆ ವೀರಯ್ಯನವರಿವರು ।
ಮೆರೆವವರು ಸಾನಂದದೊಳು ಬಲು
ಚರಸುಮೂರ್ತಿಗಳಿವರು ಗುರುಗಳು
ಹರನೊಳಗೆ ತಾವ್ ಬೆರೆಯುವುದು ಕೆಲವರ್ಷವಿರುವಾಗೆ ॥ ೪೧ ॥

ಇರುವ ಜಗದೊಳು ಕೀರ್ತಿ ದೇಶದೆ
ಕರುಣೆಯಾ ಕೆಂಪಯ್ಯ ಸ್ವಾಮಿಯ
ಹಿರಿಯ ಮನೆಯದು ಕಾಡಸಿದ್ಧನ ಮಠದ ಸ್ವಾಮಿಗಳ ।
ಮೆರೆಯುವಾ ಮನೆಯಲ್ಲಿ ಜನಿಸಿರೆ
ಸರುವವರಿಗೆ ಪ್ರಿಯರಾದ ಸ್ವಾಮಿಯ
ಪರಮ ಶಾಂತರು ಸತ್ಯಯುತ ಸಿದ್ಧಯ್ಯರೆಂಬುವರು ॥ ೪೨ ॥

ಮಡದಿಯಾತನ ಪಾರ್ವತಮ್ಮನು
ಮೃಡನ ಭಕ್ತಳು ವರ ಪತಿವ್ರತೆ
ಕಡು ಮಮತೆಯಿಂ ಬಾಳ್ವೆನೆಸಗುತೆ ದಂಪತಿಗಳಿವರು ।
ಪೊಡವಿ ಮೇಲೀಸ್ವರ್ಗಸುಖವನು
ಬಿಡದೆ ಭೋಗಿಸುತಿದ್ದರನಿಶಂ
ಜಡಜಶರಹನನತುಲ ದಯದಿಂ ಗರ್ಭ ಧರಿಸಿದಳು ॥ ೪೩ ॥

ಹತ್ತಿದವು ಬಯಕೆಗಳು ಬಳಿಕಾ
ಮೆತ್ತಗಿನ ಮಾನಸದ ಗರತಿಗೆ
ಚಿತ್ತದಲಿ ಶಿವನಾಮ ಭಜನೆಯ ಸತತ ಮಾಡುವೊಲು।
ಮತ್ತೆ ಸತತಂ ಲಿಂಗ ಪೂಜೆಯ
ನುತ್ತಮೆಯು ತಾಂ ಮಾಡುವೊಲುಗಡ
ಹತ್ತಿದವು ಮೇಣ್ ಜನರಿಗನ್ನವನಿಕ್ಕುವೊಲು ಬಯಕೆ ॥ ೪೪ ॥

ನೋಡಿಯಾಕೆಯ ಬಯಕೆ ಸಕಲರು
ಗಾಢ ತೋಷವ ಹೊಂದಿದರು ತಾವ್
ಮೂಡುವನು ದಿಟ ನಮ್ಮ ಮನೆಯಲಿ ವರಪುರುಷನೆಂದು ।
ಕಾಡದೇವರ ಕೃಪೆಯು ತಾನಿದು
ಬೇಡುತ್ತಿದ್ದೆವು ಮಹಿಮನೊಬ್ಬನ
ನೀಡಿದನು ತಾಂ ಸತ್ಯವಿದು ಸತ್ಪುತ್ರ ಜನಿಸುವನು ॥ ೪೫ ॥

ಪುಟ್ಟುವನು ಸತ್ಪುತ್ರನೀಕೆಯ
ಹೊಟ್ಟೆಯಿಂದೆಂದರಿತು ಸರ್ವರು
ಪಟ್ಟು ತೋಷವ ಪ್ರೇಮದಿಂದಂ ಪೊರೆಯುತಾಕೆಯನು ।
ಬಿಟ್ಟುಬಿಡದೇ ವಾಂಛೆಯಾಕೆಯ
ಕೊಟ್ಟು ಮನಮಂ ಪೂರ್ಣಗೊಳಿಸುತೆ
ಗಟ್ಟಿ ಮನಸಿನ ಪಾರ್ವತಮ್ಮನ ಸುಖದೊಳಿರಿಸಿದರು ॥ ೪೬ ॥

ಚೆಲುವೆಯಿರಲಿಲ್ಲಾ ಹೆಚ್ಚಿಗೆ
ಚೆಲುವು ಗುಣಯಾಗಿದ್ದಳಾಕೆಯು
ಸಲೆಯೊಲಿಸಿಕೊಂಡಿರಲು ಪತಿಯನ್ನಾಜ್ಞೆ ತೆರ ಸಾಗಿ ।
ಕಲಹವೇ ಇರಲಿಲ್ಲ ಮನೆಯಲಿ
ಬಲು ಮಮತೆಯಿಂ ಸರ್ವರೊಂದಿಗೆ
ಲಲನೆ ಪಾರ್ವತಿಯಮ್ಮನನಿಶಂ ಸಾಗುವದರಿಂದೆ ॥ ೪೭ ॥

ಕಾಡಸಿದ್ಧನ ಪರಮ ಭಕ್ತನು
ನೋಡಿರೈ ಸಿದ್ದಯ್ಯಸ್ವಾಮಿಯು
ಮಾಡುತಿದ್ದನು ಕಾಡದೇವರ ಪೂಜೆ ಹಿಗ್ಗಿಗ್ಗಿ ।
ಆಡಿದೊಲು ನಡೆವವನು ಸ್ವಾಮಿಯು
ಗಾಢ ಶಾಂತನು ಧೈರ್ಯಶೀಲನು
ನಾಡೆ ಪ್ರೇಮದಿ ಸಾಗುತ್ತಿದ್ದನು ಬಂದು ಜನರೊಡನೆ ॥ ೪೮ ॥

ತುಂಬಿದವು ನವಮಾಸಗಳು ತಾವ್
ಶಂಭುವಿನ ವರ ಕರುಣದಿಂದಂ
ಕಂಬುಕಂಧರೆ ಪಾರ್ವತಮ್ಮನು ರವಿಯುದಿಪ ಮೊದಲು ।
ತುಂದಿದಾನಂದದೊಳು ಹಡೆದಳು
ಕುಂಭಿನೀ ಶರ ವೊಲಿಹ ಪುತ್ರನ
ತುಂಬಿತಾಗಳ್ ಸದನವೆಲ್ಲವು ಕಡುಹರ್ಷದಿಂದೆ ॥ ೪೯ ॥

ಹಚ್ಚಿ ದೀಪಗಳೈದು ಮನೆಯಲಿ
ಹಚ್ಚಿದರು ಶ್ರೀ ಕಾಡಸಿದ್ಧನ
ಹೆಚ್ಚಿನಾನಂದದೊಳು ದೀಪವ ಚೆಲುವು ಗುಡಿಯಲ್ಲಿ ।
ಹಚ್ಚಿ ದೇವರ ಮುಂದೆ ಕಪ್ಪುರ
ಹೆಚ್ಚು ಸಪ್ಪಳವಾಗುವಂದದಿ
ಯುಚ್ಚತರ ದೇವರ ನಗಾರಿಯು ಬಾರಿಸಿದರಾಗ ॥ ೫೦ ॥

ಜನಿಸಿದರು ಶ್ರೀ ಜಗದ ಗುರುಗಳು
ಘನ ಮಹಿಮ ಶ್ರೀ ಗುರುಸಿದ್ಧರಾಜರು
ದಿನವಿರಲು ಗಡವೇಳು ಸಪ್ಟಂಬರದ ತಿಂಗಳಲಿ ।
ಮನುಜ ಜಾತಿಗೆ ಭೂಷರು ಜನ
ಜನಿತ ಸಿದ್ಧರು ಗುರುವರೇಣ್ಯರು
ವಿನುತರೀ ಹದಿನೆಂಟು ನೂರ್ತೊಂಬತ್ತರೆಂಟರಲಿ ॥ ೫೮ ॥

ಮತ್ತೆ ಮುಂದಣ ಸಂಧಿಯೊಳಗೀ
ಉತ್ತಮೋತ್ತಮರಾದ ಶ್ರೀಗಳ
ಚಿತ್ತವೇಧಕವಾದ ಕಥೆಯನ್ನೊರೆಯುವೆವು ನಸುವು ।
ಇತ್ತು ಚಿತ್ತವನಾಲಿಪುದು ಸಲೆ
ಚಿತ್ತಜಾರಿಯ ನಾಮ ನೆನೆಯಿರಿ
ಕುತ್ತು ದೂರಾಗುವವು ನಿಮ್ಮಯ ಕೇಳ್ವ ಸಜ್ಜನರೆ ॥ ೫೨ ॥

ಶಿವಗೆ ಕೈಲಾಸಾದ್ರಿವಾಸಗೆ
ಭವಗೆ ಗೌರೀಪ್ರಾಣನಾಥಗೆ
ದಿವಿಜ ಪತಿಯಿಂ ಪೂಜೆಗೊಂಬುವ ಜಾಹ್ನವೀಧರಗೆ ।
ಅವಿರತವು ಸಂತೋಷದಲ್ಲಿಹ
ಜವನವೈರಿಗೆ ಶೂಲಹಸ್ತಗೆ
ಪವಿಯು ಪಾಪದ ಶೈಲಕಾಗಿಹ ಹರಗೆ ಜಯವಿರಲಿ ॥ ೫೩ ॥

ಮೊದಲನೆಯ ಸಂಧಿ ಮುಗಿದುದು



# ಎರಡನೆಯ ಸಂಧಿ

॥ ಸೂಚನೆ ॥ ಮರಡಿ ಮಠಕಾಸ್ವಾಮಿಯಾದರು
ಕರುಣಿ ಪವಾಡಪ್ಪ ಯತಿಗಳು
ಪರನ ದಯದಿಂದವರು ದ್ವಾದಶ ವರ್ಷದವರಿರಲು ॥

ಶ್ರೀ ಸದಾಶಿವ ವಿಶ್ವಮಂದಿರ
ಪೋಷಕಂ ಮೂಲೋಕವೆಲ್ಲವ
ದಾಸರಂ ಹೆಚ್ಚಾದ ಕರುಣದೆ ಕಾಯ್ವ ಶಂಕರಗೆ ।
ವಾಸವಾನತ ಚರಣಕಮಲಗೆ
ವಾಸುರೆಯ ಭೂಷಣಗೆ ಸಾಂಬಗೆ
ಕೋಶನಾಗಿಹ ಸುಗುಣ ಮಣಿಗಳ ಶಾಂಭವಗೆ ಜಯವು ॥ ೧ ॥

ಮಠದ ಪಾರ್ವತಿಯಮ್ಮ ಪಡೆದಳು
ನಿಟಿಲ ನಯನನ ದಯದಿ ಪುತ್ರನ
ದಿಟವಿದುವು ಸಾಯಾಸವಿಲ್ಲದೆ ಬೆಳಗಿನೊಳಗಿಂದು ।
ಪಟುವು ತಾನಾಗುವುದು ಮಗುವದು
ಸಟೆಯಿದಲ್ಲವು ನಿರುತ ನಗುವದು
ಚಟುಲ ಲೋಚನೆಯವರೆ ನಡೆಯಿರಿ ನೋಡ ಕೂಸಿದನು ॥ ೨ ॥

ಎಂದು ಹೇಳುತ ಕರೆದು ತರುತಿರೆ
ಸುಂದರಿಯರಾ ಊರ ಪೆಣ್ಗಳ
ಬಂದು ಸ್ತ್ರೀಯರು ನಗುವ ಕೂಸಿನ ನೋಡಿ ಮುದವಾಂತು ।
ವಂದನೆಯ ತಾವೆಸಗಿ ದೇವಗೆ
ಮಂದಿಗೆಲ್ಲಾ ಪೇಳುತ್ತಿದ್ದರು
ಚಂದವಿದೆ ಬಲು ಗಂಡು ಮಗುವದು ನೋಡಿಬರಿರೆಂದು ॥ ೩ ॥

ಒಂದೆಸವನೇ ಬರುತಲಿದ್ದರು
ಬಂಧುರೆಯರಾ ಊರ ಸ್ತ್ರೀಯರು
ಹೊಂದಿ ತೋಷವ ನೋಡಿ ಶಿಶುವನು ಹೋಗುತಿರೆ ಮರಳಿ ।
ಮುಂದೆ ದಿನ ಹನ್ನೆರಡು ಕಳೆಯಲು
ಮಂದಿಗುರೆ ಮೃಷ್ಟಾನ್ನ ಭೋಜನ
ನಂದದಿಂದಂ ಸಲ್ಲಿಸಿದರಾ ಮಠದ ಸ್ವಾಮಿಗಳು ॥ ೪ ॥

ಇಟ್ಟರಾದಿನ ಹೆಸರ ಶಿಶುವಿಗೆ
ತೊಟ್ಟಿಲೊಳು ಶಿವಭಕ್ತೆಯರು ತಾ
ವಿಟ್ಟು ಪಾವಾಡಪ್ಪನೆಂಬುವದನ್ನು ಹರ್ಷದಲಿ ।
ದಿಟ್ಟವಿದೆ ಕಡು ಗಂಡುಮಗುವಿದು
ಕೊಟ್ಟನೈ ಶ್ರೀ ಕಾಡಸಿದ್ಧನು
ಗಟ್ಟಿಗನು ಬಹು ದಯದೆ ನಮಗಿವನೆಂದು ನಂಬಿದರು ॥ ೫ ॥

ಕಳೆಯಿತಾ ಬಾಲತ್ವ ಸುಖದೊಳು
ಬಳಿಕ ಪಾವಾಡಪ್ಪ ಸ್ವಾಮಿಯ
ಬಲುಹು ಪುಣ್ಯವ ಪೂರ್ವಜನ್ಮದಿಗೈದ ಕಾರಣದೆ।
ಕಳಿಸಿದಗು ತರುವಾಯ ಶಾಲೆಗೆ
ಕಲಿಯ ಕನ್ನಡ ವೋದ ಬರೆಯಲು
ಕಲಿಯುತ್ತಿದ್ದರು ಕ್ಷಿಪ್ರದಲ್ಲಿಯೆ ಗುರುವು ಕಲಿಸಿದುದು ॥ ೬ ॥

ಬರಿ ಸುಖಕೆ ಹೋಗುವದೆ ಕಾಲವು
ನರರದೆಲ್ಲವು ಧರೆಯ ಮೇಲೀ
ಸರುವರೂ ಸುಖದುಃಖ ಭೋಗಿಸುವಂತೆ ಸನ್ನುತರು ।
ಹಿರಿಯ ದುಃಖಕೆ ಬಿದ್ದುಬಿಟ್ಟರು
ಗರತಿ ಪಾರ್ವತಿಯಮ್ಮ ಜನನಿಯು
ಪರನೊಳಗೆ ತಾಂ ಬೆರೆದುಹೋದಳು ಬಿಟ್ಟು ತಾನಿವರ ॥ ೭ ॥

ಅತ್ತರೈ ಬಹಳಾಗ ಕೋಮಲ
ಚಿತ್ತದೀಕೋಮಲರು ಪೂಜ್ಯರು
ಹೆತ್ತ ತಾಯಿಯು ತೊರೆದು ತಮ್ಮನು ಹೋದ ಕಾರಣದೇ ।
ಅತ್ತರೈ ಜನರೆಲ್ಲ ಹೊರಗಿನ
ಸತ್ತವರದೀಶೋಕ ವೀಕ್ಷಿಸಿ
ಸುತ್ತಲೂ ನೆರೆದಿರುವ ಜನ ಸಂತೈಸುತಿರಲವರ ॥ ೮ ॥

ಇರಲವರು ಚಿಕ್ಕವರು ಕೂಡಾ
ಸರುವರೂ ಬಹು ಭಕ್ತಿಯಿಂದಂ
ಚರಣಕಮಲಕೆ ನಮಿಸುತ್ತಿದ್ದರು ಕಂಡೊಡನೆ ಬಂದು ।
ಧರಿಸಿ ಹಣೆಯಲಿ ಭಸ್ಮವನು ಮೇಣ್
ಧರಿಸಿ ಲಿಂಗವ ಕಂಠದಲ್ಲೀ
ಗುರು ಜನರ ಗುರುವಾದ ಸ್ವಾಮಿಯ ಹೆಚ್ಚಿಗೊಪ್ಪುತಿರೆ ॥ ೯ ॥

ಸುಳ್ಳು ನುಡಿಯನು ನುಡಿಯದಿರದೀ
ತೆಳ್ಳಗಿನ ಮೈಯುಳ್ಳವರು ಮೇಣ್
ಬೆಳ್ಳಗಿನ ತನುವುಳ್ಳ ಬಾಲರು ಪಥದೆ ನಡೆದಾಗೆ ।
ಬಲ್ಲಿರಾ ಎದ್ದೆದ್ದು ಬರುತಿರೆ
ಚೆಲ್ಲೆ ಮಹಿಮರ ಪಾದ ನಮಿಸಲು
ರೆಲ್ಲವೆಲ್ಲೀ ಜಗದಿ ಮನ್ನಣೆ ಪರಮ ರತ್ನಕ್ಕೆ ॥ ೧೦ ॥

ನೋಡಿದವರು ತೋಷ ಪಡುತಿರೆ
ನೋಡಿರೀ ಪಾವಾಡಸ್ವಾಮಿಯ
ಕೂಡಲೇ ಆದರವು ಭಕ್ತಿಯು ಜನಿಸಿ ಬಿಡುತಿತ್ತು ।
ಮಾಡಿರುವ ತಾವ್ ಪೂರ್ವಜನ್ಮದಿ
ಗಾಢ ಪುಣ್ಯದ ಫಲವು ತಾನಿದು
ಕೂಡಿರುವ ನಿರ್ಭೀತ ವೃತ್ತಿಯ ಮಹಿಮರೈ ಇವರು ॥ ೧೧ ॥

ಕೂಡಿಬಿಟ್ಟರು ಶಿವನೊಳಗೆ ಗಡ
ಕಾಡದೇವರ ಭಕ್ತರಾಗಿಷ
ನಾಡೆ ನಡೆ–ನುಡಿಯುಳ್ಳ ಚರಮೂರ್ತಿಗಳು ವೀರಯ್ಯರು
ಕೂಡಲೇ ಆ ಮಠಕೆ ಸ್ವಾಮಿಯ
ಮಾಡಿದರು ಗುರುಸಿದ್ಧ ಸ್ವಾಮಿಯ
ನೋಡಿರೀ ಸುಪುರಾಣದೊಡೆಯರ ಚಿಕ್ಕ ತಂದೆಯನು ॥ ೧೨ ॥

ಮತ್ತೆ ಪಾವಾಡಪ್ಪ ಸ್ವಾಮಿಯು
ಸತ್ತ ಮರು ದು:ಖಾಬ್ಧಿಯಂ ಗಡ
ಚಿತ್ತವಿಸಿರೈ ಶ್ರೋತೃಜನರೆ ಬಿದ್ದರೈ ತಾವು ।
ಹೆತ್ತಿರುವ ಸಿದ್ದಯ್ಯ ತಂದೆಯು
ಚಿತ್ತಜಾರಿಯೊಳೈಕ್ಯವಾದರು
ಮತ್ತೆ ಬಲು ತಾವತ್ತರಾಗಳು ಬಾಲಯತಿವರರು ॥ ೧೩ ॥

ತಂದೆ ತಾಯ್ಗಳ ಕಳೆದುಕೊಂಡಿಹ
ಹೊಂದಿರುವ ಪರದೇಶಿತನವೀ
ಬಂಧುರರ ಕಾಡಯ್ಯ ಅಜ್ಜರು ಪೊರೆದರಿಪರನ್ನು ।
ಕಳೆದವಾ ಮೇಲ್ ವರ್ಷಗಳು ಕೆಲ
ಕಳೆದರೈ ತನು ಮರಡಿ ಮಠದಾ
ತಿಳಿಮನದ ಗುರುಸಿದ್ಧಯತಿ ಪುಟ್ಟಯ್ಯರೇ ನಮ್ಮ ॥ ೧೪ ॥

ವರಗುಣದ ಪಾವಾಡಸ್ವಾಮಿಯ
ವರ ಮಮತೆಯಂ ಮಾಡುತ್ತಿದ್ದರು
ಕರುಣೆಗಳು ಸನ್ಮಾರ್ಗ ಬಿಡದಲೆ ಸಾಗಿದಪರವರು ।
ಗುರುಗಳಿರದಾ ಮಠಕೆ ಮರಡಿಯ
ಗುರುಗಳನು ನೇಮಿಸುವ ಕೆಲಸವು
ಸರುವ ಭಕ್ತರು ಕಲೆತು ನಿಶ್ಚಯ ಮಾಡಿದರು ಮುದದೆ ॥ ೧೫ ॥

ಸರುವ ವಿಧದಿಂ ಯೋಗ್ಯರಾಗಿಪ
ಮೆರೆವ ಕೊಣ್ಣೂರೊಳಗೆ ನೆಲಸಿದ
ವರ ಮಠದ ಪಾವಾಡಸ್ವಾಮಿಯ ಸ್ವಾಮಿಮಾಳ್ಪದನು ।
ಮೆರಸಿ ಪಲ್ಲಕಿಯೊಳಗೆ ಯತಿಗಳ
ಹರುಷದಿಂ ಕೊಣ್ಣೂರ ಕ್ಷೇತ್ರದಿ
ಮರಡಿ ಮಠಕಾಸ್ವಾಮಿಗೈದರು ಭಕ್ತರತಿ ಮುದದೆ ॥ ೧೬ ॥

ಬಹು ಸಮಾರಂಭದೊಳು ಮುಗಿಯಿತು
ತುಹಿನ ಗಿರಿಜಾಪತಿಯ ದಯದಿಂ
ಮಹಿತ ಪಾವಾಡಪ್ಪನವರನು ಸ್ವಾಮಿಮಾಡಿರುವ ।
ವಿಹಿತ ಮಂಗಲ ಕಾರ್ಯದುತ್ಸವ
ಬಹು ಜನಕೆ ಮೃಷ್ಟಾನ್ನ ನೀಡಿಸಿ
ಬಹಳ ತೃಪ್ತಿಯಗೊಳಿಸಿದರು ಮಾಂಗಲ್ಯ ಸಮಯದೊಳು ॥ ೧೭ ॥

ಮಠವದುವು ಕೆಂಪಯ್ಯನವರದು
ಪಟುಗಳೀ ಪಾವಾಡಸ್ವಾಮಿಯು
ಮಠದವರು ತಾವ್ ಕಾಡದೇವರ ಪೂರ್ವಜರು ನಮ್ಮ ।
ಮಠಕೆ ತಾವ್ ಗುರುವಾದ ನಂತರ
ದಿಟದ ನಿಧಿ ಪಾವಾಡಸ್ವಾಮಿಗೆ
ಚಟುಲ ಮನವಿಲ್ಲದಗೆ ಕೆಂಪಯ್ಯರೆಂಬ ನಾಮವನು ॥ ೧೮ ॥

ಇಟ್ಟರೈ ಬಹುಹರ್ಷದಿಂದಂ
ಬಿಟ್ಟು ಮೊದಲಿನ ಹೆಸರನೊರೆವೆವು
ಗಟ್ಟಿಗರಿಗೀ ನಾವು ಕೆಂಪಯ್ಯರೆಂಬ ಹೆಸರನ್ನು ।
ಪಟ್ಟರಾ ಕೆಂಪಯ್ಯ ನಾಮವ
ದಿಟ್ಟ ಮೂರುಳ್ಳವನ ಕರುಣದೆ
ಪುಟ್ಟಿದರು ತಾವೆರಡನೆಯ ಕೆಂಪಯ್ಯಮತ್ತಿವರು ॥ ೧

ಬಾಲನೇತ್ರನ ಭಕ್ತರಾಗಿಹ
ಶೀಲವಂತರೆ ಶ್ರೋತೃಜನರೇ
ಹೇಳುವೆವು ನಾವಿನ್ನು ನವ ಕೆಂಪಯ್ಯಸ್ವಾಮಿಗಳ ।
ಲೀಲೆಗಳ ಬಹು ರಮ್ಯವಾಗಿಹ
ನೀಲಕಂಠನ ಕೃಪೆಯ ಹೆಚ್ಚಿಗೆ
ಕೇಳುವದು ಪಡೆದವರು ನೈಜವು ವೀರಯತಿವರರು ॥ ೨೦ ॥

ಏರಿಬಿಟ್ಟಿತು ಕಳೆಯು ಮಠದಾ
ಧೀರ ಯತಿಗಳು ಸ್ವಾಮಿಯಾಗಲು
ತೀರ ತುಸು ದಿನಗಳಲಿ ಕೇಳಿಸಹತ್ತಿತೈ ಬಿಡದೆ ।
ಕಾರುಣಿಕರದು ಕೀರ್ತಿದುಂದುಭಿ
ತೋರುತ್ತಿದ್ದರು ಭಕ್ತರಿತ್ತಿಹ
ಭೂರಿಹರ್ಷದೆ ಹಣವ ಯತಿಗಳು ಬಡಜನರಿಗಾಗಿ ॥ ೨೧ ॥

ಧನದ ಮೇಲಿರಲಿಲ್ಲ ಲೋಭವು
ಘನಮಹಿಮ ಕೆಂಪಯ್ಯಸ್ವಾಮಿಗೆ
ಜನರಿಗನ್ನದ ಕೊರತೆಯೆಂದೂ ಆಗದಿರೆ ಮಠದಿ ।
ವಿನುತರಲ್ಲಿ ವಾಸಮಾಡಿರೆ
ಜನಿಸಿದಾಗಳೆ ಸಿದ್ಧಿಯೆಲ್ಲವು
ಜನರ ಪೀಡೆಯ ಕಳೆಯುತ್ತಿದ್ದರು ಹರಸಿ ಮುಖದಿಂದೆ ॥ ೨೨ ॥

ಆಗಲಿಲ್ಲವು ಪ್ರಸಿಯು ನುಡಿಯೀ
ಯೋಗಿವರ್ಯರ ಜನರಿಗುಸುರಿದ
ತ್ಯಾಗ ಮೂರ್ತಿಗಳಿವರು ಲೌಕಿಕ ಭೋಗಬಯಸದಿಹ ।
ರಾಗವಿರೆ ಒಡಜನರ ಮೇಲೀ
ನಾಗಭೂಷಣ ಪರಮ ಭಕ್ತರ
ಸಾಗಿಸಿದರೈ ಜನರ ಸೇವೆಯ ಸತತವೂ ತಾವು ॥ ೨೩ ॥

ಹರಡಿಬಿಟ್ಟಿತು ಕೀರ್ತಿಜವದೊಳು
ಪರಮಯತಿ ಕೆಂಪಯ್ಯನವರೀ
ಬರುತಲಿದ್ದರು ಜನರು ನಿರುತಂ ತೆರಪಿರದೇ ಮಠಕೆ ।
ಸರುವರೂ ಯತಿವರರ ದರ್ಶನ
ಹರುಷದಿಂದಂ ಪಡೆದು ಭೋಜನ
ಗುರುಗಳಪ್ಪಣೆಯಂತೆ ಮುಗಿಯಿಸಿ ಸುಖದೆ ಸಾಗುತಿರೆ ॥ ೨೪ ॥

ಪರುಷಪಾಣಿಗಳಿದ್ದರೀ ನುತ
ಪರಮ ಪುರುಷರು ಪರಮಸಿದ್ಧರು
ನಿರುತ ಸಹಜಾನಂದದಲ್ಲಿಯೇ ಮೆರೆಯುವರಿವರು ।
ಅರಿಯಿರಿ ಯತಿ ಚಿಂತೆಯೆಂಬುವ
ದರಿಯಿರೈ ಮೇಣ್ ಭೀತಿಯೆಂಬುದು
ಸರುವ ಕಾಲವ ಶಾಂತತನದಲಿ ಕಳೆಯುತಿರಲವರು ॥ ೨೫ ॥

ನಿಂದಿಸಿದರೂ ದುಷ್ಟಜನಗಳು
ಹಿಂದೆ ತಮ್ಮನು ಘನಮಹಿಮರೀ
ಎಂದಿಗೂ ಸಿಟ್ಟಾಗಲಿಲ್ಲವು ತಾವು ಮೇಲವರ ।
ನಿಂದೆಯಾರದು ಮಾಡಲಿಲ್ಲವು
ತಂದೆ ಒಡವರ ಸಿದ್ಧ ಪುರುಷರು
ಮಂದಿ ಮಾಡುವ ಸ್ತುತಿಗೆ ಕಿವಿಗೊಡಲಿಲ್ಲ ತಾವೆಂದೂ ॥ ೨೬ ॥

ಸರುವರಿಂ ಪೂಜಿತರು ನಮ್ಮೀ
ಮರಡಿ ಮಠಕಾದಾಗ ದೊರೆಗಳು
ಹಿರಿಯ ಗುರುಗಳಿಗಾಗಿರಲು ಹನ್ನೆರಡು ವರ್ಷಗಳು ।
ಹರುಷಗೊಳಿಸಿದರೆಲ್ಲ ಭಕ್ತರ
ಜರಗುತಿಹ ಕೃತಿಯಿಂದೆ ತಮ್ಮಿಂ
ನೆರೆ ವ್ಯವಸ್ಥೆಯ ಸಹಜ ಮಾಡುತ್ತಿದ್ದರೈ ಮಠದ ॥ ೨೭ ॥

ಅಲಸತನವಿರಲಿಲ್ಲವಿವರೊಳು
ಕೆಲಸದಲ್ಲಿಯೇ ಸಮಯವೆಲ್ಲವ
ಕಳೆಯುತ್ತಿದ್ದರು ಕಾಡಸಿದ್ಧನ ಭಕ್ತವರರಿವರು ।
ಉಳಿದ ಕೆಲಸವ ಬಿಟ್ಟು ಮೊದಲೊಳು
ಜಳಕ ತೀರಿಸಿ ಲಿಂಗಪೂಜೆಯ
ಚಲಿಸದಿಹ ಮನದಿಂದ ನಿತ್ಯವೂ ಮಾಡುತಿರಲವರು ॥ ೨೮ ॥

ಇರಲಿ ಮಠದಲ್ಲಡಿಗೆ ತುಸುವೇ
ನೆರೆದರಾಗಳ್ ಮಠದಿ ಜನಗಳು
ಗುರುಗಳೀ ತಾವ್ ನೋಡಿದೊಡನೆಯೆ ಪೊದಲಿನನ್ನವನು ।
ಸರುವರಿಗೆ ಸಾಕಾಗಿ ಬಿಡುತಿರೆ
ವರಪುರುಷವುಳ್ಳವರು ದೃಷ್ಟಿಯ
ಸರುವರೂ ಮನಗಂಡು ಮೇಣ್ ಕಂಡಿರುವರಿದನು. ॥ ೨೯ ॥

ದೃಷ್ಟಿಪರುಷವು ಹಸ್ತಪರುಷವು
ಸೃಷ್ಟಿನಾಯಕ ಕೊಟ್ಟ ಬಿಡದೇ
ಶ್ರೇಷ್ಠವಾಗಿಹ ಪರುಷವಾಣಿಯ ಮತ್ತೆ ಕೊಟ್ಟಿರಲು ।
ಅಷ್ಟವರ ಸಿದ್ಧಿಗಳು ಕೂಡಾ
ಜ್ಯೇಷ್ಠಯತಿಗಳಲಿದ್ದವೆಂದರೆ
ನಿಷ್ಠೆಯವರೊಳಗಿದ್ದ ಜನರಿಗೆ ಸತ್ಯ ತೋರುವದು ॥ ೩೦ ॥

ಇರಲಿ ಗುರುವರರಲ್ಲಿಯೇ ಈ
ಪರುಷದಿಂದಂ ಸುತ್ತುಮುತ್ತಿನ
ತೆರಪಿರದೆ ಜನ ಬರುತಲಿದ್ದಿತು ದರ್ಶನಕ್ಕಿವರ ।
ತ್ವರದೊಳವರಿಗೆ ಹಾಕಿಯೂಟ
ಹರಸಿ ಕಳುಹುತ್ತಿದ್ದರವರನು
ಮರಳಲಿಲ್ಲವು ತಾವು ಭೋಜನ ಮಾಡದಾರಾರೂ ॥ ೩೧ ॥

ಸೋಲಲ್ಲಿವು ಧರ್ಮವಾದದಿ
ಮೇಲುಮತಿಗಳು ಪರರ ಧರ್ಮದ
ಸೋಲಿಸಲು ಬಂದಿರುವ ಜನರಿಗೆ ತಾವು ಜನ್ಮದೊಳು ।
ಸೋಲಿಸಿಯೆ ಬಿಡುತಿದ್ದರವರನು
ಶೀಲ ಸಂಪದದಿಂದೇ ಮೆರೆಯುವ
ಫಾಲನಯನನ ಭಕ್ತರತ್ನರು ಧರ್ಮ ಭೂಷಣರು ॥ ೩೨ ॥

ಇರಲು ಹದಿಮೂರಬ್ದದವರೀ
ಗುರುವರರು ಕೆಂಪಯ್ಯಯತಿಗಳು
ಪರಮ ಪುರುಷರು ಭಿಕ್ಷೆಗಾಗಳು ಗಮಿಸಿದರು ತಾವು ।
ಹರುಷದಿಂ ಹುಲಕುಂದ ಗ್ರಾಮಕೆ
ಸರುವ ಭಕ್ತರು ಭಿಕ್ಷೆಯಿತ್ತರು
ಸರುವ ಹಣವದು ತೂರಿಬಿಟ್ಟರು ಬಡಜನರಿಗಾಗಿ ॥ ೩೩ ॥

ನೋಡಿ ಜನಗಳು ಯತಿಯ ವೃತ್ತಿಯ
ಮಾಡಿ ತಮ್ಮೊಳು ಯೋಚನೆಯ ನುರೆ
ಮಾಡಿಸಿಡಿಸಿದರಿವರ ಕೈಯಲಿ ಹೊನ್ನ ಕಡಗವನು ।
ಮಾಡಿದರು ಬಿನ್ನಪವ ಯತಿಗೀ
ಮಾಡಬಾರದು ದಾನಕಡಗವ
ಮಾಡಿರೈ ನೀವ್ ಮಠಕೆ ಗಮಿಸಿದ ಬಳಿಕ ಬಯಕೆಯೊಲು ॥ ೩೪ ॥

ಒಪ್ಪಿಕೊಂಡರು ಭಕ್ತ ಜನಗಳ
ತೊಪ್ಪನೇ ಬಿನ್ನಪವ ಗುರುವರ
ರಿಪ್ಪ ತಮ್ಮಯ ಹಸ್ತದಲಿ ಬಂಗಾರ ಕಡಗವನು ।
ಒಪ್ಪಿಸಿದರದ ತಮ್ಮ ಜನತೆಯ
ಲಿಪ್ಪ ಸೇವಕ ಜನರ ವಶದೊಳು
ಮುಪ್ಪುರವ ಸುಟ್ಟವನ ಪರತರ ಭಕ್ತರಾದಿವರು ॥ ೩೫ ॥

ಮಳೆಯು ಬೇಕಾಗಿತ್ತು ಜನರಿಗೆ
ಬೆಳೆಗಳೊಣಗುತ್ತಿದ್ದವಾಗಳು
ಬಳಿಗೆ ಬಂದೀ ಯತಿಯ ಕೆಲವರು ವಿನಯಪೂರ್ವಕವು ।
ತಿಳಿಸಿದರು ದುಃಸ್ಥಿತಿಯ ಬೆಳೆಗಳ
ಕಳೆಯಿರೆಂದರು ವಿಪದ ಕರುಣದೆ
ಮುಳೆಯು ತಾನಾಗುವದು ನಾಳೆಗೆ ನಿಮಗೆ ಬೇಕೆನಿತು ॥ ೩೬ ॥

ಮಳೆಯು ಬಿದ್ದುದು ನಾನು ನೋಡಿದ
ಬಳಿಕವೀ ಹುಲಕುಂದ ಬಿಡುವೆನು
ತಳೆಯುವದು ಧೈರ್ಯವನು ಹೀಗುಸುರಿದರು ಸ್ವಾಮಿಗಳು ।
ಮಳೆಯು ಬಿದ್ದಿತು ಸಿದ್ಧರೊರೆದೊಲು
ಕಳೆದು ಹೋಯಿತು ಚಿಂತೆ ಸರ್ವರ
ಮಳೆಯು ಸಾಕೆಮಗೆನಿಸಿಬಿಟ್ಟಿತು ಸಿದ್ಧರೊರೆದಂತೆ ॥ ೩೭ ॥

ಸಕಲರಿಗೆ ಸಾನಂದವಾಯಿತು
ಭಕುತಿಯಿಂದತಿ ಗುರುಗಳಂಘ್ರಿಗೆ
ಸಕಲರೂ ಸಾರಿದರು ನಮಿಸಲು ಬಾಲಕರು ಸಹಿತ ।
ಮುಕುರಿ ಸತಿಪತಿ ಯತಿವರರ ಮೇಲ್
ಕಕುಲತೆಯು ಹೆಚ್ಚಾಗಿ ಜನಗಳು
ಬಕುಲ ಮಲ್ಲಿಗೆ ಹೂಗಳನು ತಲೆ ಮೇಲೆ ಸುರುವಿದರು ॥ ೩೮ ॥

ಮೆರೆಸಿದರು ಗುರುಗಳನು ಕೂಡ್ರಿಸಿ
ಪರುಷದಿಂ ಪಲ್ಲಕ್ಕಿಯೊಳು ಗಡ
ಸರುವ ಗ್ರಾಮದಿ ಕೇರಿಯೊಂದನು ಬಿಡದೇ ಸಂಜೆಯಲಿ ।
ಸುರುವುತಿರೆ ನೀರನ್ನು ಕೊಡದಿಂ
ಮೆರೆವ ಪಲ್ಲಕ್ಕಿ ಮುಂದೆ ಮುದದಿಂ
ಹುರುಪಿನಿಂದಂ ಮುಂದೆ ಕಾಲಿಯ ನೂದುತಿರಲಾಗೆ ॥ ೩೯ ॥

ಹೋಗಲೆಲ್ಲೀ ಸಿದ್ಧಪುರುಷರು
ತ್ಯಾಗವೀರರು ಭಿಕ್ಷೆ ಮಾಡಲಿ
ಕಾಗಳಾ ಊರವರು ಯತಿಗಳೆ ಬಂದು ಕರಕೊಂಡು ।
ಹೋಗುತ್ತಿದ್ದರು ವಾದ್ಯವಾದನ
ರಾಗದಿಂದಂ ಮಾಡಿಸುತ್ತಲೆ
ಹೋಗುತ್ತಿದ್ದರು ಪಲ್ಲಕಿಯೊಳೀಯತಿಯ ವಿಶ್ರಮಿಸಿ ॥ ೪೦ ॥

ಇಂದಿಗೂ ಪುಲಕುಂದ ಗ್ರಾಮದಿ
ಮಂದಿ ತಾವ್ ಮಳೆಯಾಗದಿದ್ದರೆ
ನಂದದಿಂ ಭೋಜನವ ಗುಡಿಯಲಿ ಹಾಕುವರು ಬಿಡದೆ ।
ತಂದೆಯೀ ಕೆಂಪಯ್ಯ ಸ್ವಾಮಿಯ
ಬಂಧುರರ ಗಡ ಹೆಸರಿನಿಂದಂ
ಕುಂದಿರದ ಯತಿವರರು ಗೆಯ್ದುಪಕಾರ ನೆನೆಯುವರು ॥ ೪೧ ॥

ಬಳಿಕ ಹೋದರು ಭಿಕ್ಷೆ ಮಾಡಲು
ಕೆಲ ದಿವಸದಲಿ ಯಾದವಾಡಕೆ
ಬಲು ಸಮರ್ಥರು ಬಾಲಸಿದ್ಧರು ಕೆಂಪಯರು ತಾವು ।
ಬಲುಹು ಮೋದದೆ ಯರು ಕೊಟ್ಟರಲ್ಲಿನ
ಪಲವು ಜನಗಳು ದಕ್ಷಿಣೆಯ ಧನ
ನಿಲಯರಾಗಿಹ ಪುಣ್ಯ ಕಾರ್ಯದ ಗುರುಗಳಿಗೆ ತಾವು ॥ ೪೨ ॥

ಕಂಡು ಸಿದ್ಧರ ಯೋಗ್ಯತೆಯ ಸಲೆ
ಯುಂಡವೊಲು ಸುಖೆಯಾಯ್ತು ಜನರಿಗೆ
ಕೇಡದೊಲು ಪಾವಿತ್ರವಿಹ ಯತಿವರರ ಜತೆಯಲ್ಲಿ ।
ಪಂಡಿತರು ತಾವಾಗಲೆಂದುರೆ
ಗಂಡು ಮನಸಿನ ಕೆಲರು ಹಿರಿಯರು
ಹಿಂಡು ಬಾಲಕರಲ್ಲಿ ಕೆಲವರ ಕಳಿಸಿದರು ತಾವು ॥ ೪೩ ॥

ಕಳಿಸಿದರು ತಾವ್ ಹತ್ತು ಹುಡುಗರ
ನುಳಿಯಲಿಲ್ಲ ಬಹಳ ದಿವಸವು
ಕಲವು ಹುಡುಗರು ತಿರುಗಿ ಹೋದರು ಯಾದವಾಡಕ್ಕೆ ।
ಉಳಿದರಿಬ್ಬರು ಕೊನೆಯವರೆಗೂ
ಬಲು ಭಕುತಿಯಿಂ ಸೇವೆ ಮಾಡುತೆ
ಗೆಲವಿನಲ್ಲಿಯೆ ಕಾಲಕಳೆದಿಹ ವಿರತ ಎರಡಿವರ ॥ ೪೪ ॥

ಇಬ್ಬರಲಿ ಮಡಿವಾಳ ಸ್ವಾಮಿಗ
ಳೊಬ್ಬಗೆ ಸುತ ಬಸವಲಿಂಗಯ
ರೊಬ್ಬರೀ ಮರಿದೇವ ಕರ್ತಾ ಮಠದ ಸ್ವಾಮಿಗಳು ।
ಒಬ್ಬರಿದ್ದರು ಮತ್ತ ಅಡವಯ
ರುಬ್ಬಿನೊಳು ಮೆರೆವವರು ಸಂತತ
ಸಬ್ಬ ಜನರಿಗೆ ಗೊತ್ತಿರುವ ಅರಟ್ಟಿ ಮಠಧವರು ॥ ೪೫ ॥

ಆದರರಡವಪ್ಪನವರಿವರೇ
ಮೋದದಿಂ ಚಿಕ್ಕೋಡಿಯಲ್ಲಿಹ
ಬೋಧಕರು ಚರಮೂರ್ತಿ ಸನ್ಮಾರ್ಗದದಾಣ್ಮರೈ ತಾವು ।
ಆದರದೆ ತಾವ್ ನೀಲಕಂದಪ
ರೀದಯಾಳುಗಳ ಭಿಡೆವಡೆದರು
ಸೋದರದೆ ಕೇಳ್ವವರೆ ನಿಮಗದು ಮುಂದೆ ತಿಳಿಯುವದು ॥ ೪೬ ॥

ಕಳೆದವೈ ಕೆಲ ವರ್ಷಗಳು ತಾವ್
ಚೆಲುವು ಕೆಂಪಯ್ಯನವರ ಮಠದಲಿ
ಬಳಿಕವೀ ಎರಡನೆಯ ಕೆಂಪಯ ಸ್ವಾಮಿಯವರನ್ನು ।
ಕಳಿಸಬೇಕೆಂದೆಣಿಸಿ ಪ್ರಮುಖರು
ಸಲೆ ಮೆರೆವ ಶಿವಯೋಗ ಮಂದಿರ
ದೊಳಗೆ ಯೋಗಾಭ್ಯಾಸ ಮಾಡಲು ಸ್ವಾಮಿಯಿವರನ್ನು ॥ ೪೭ ॥

ಬಂದು ಜನಗಳು ವಿನಯದಿಂ ಬಹು
ವಂದನೆಯ ತಾವ್ ಮಾಡಿ ಕುಳಿತರು
ಮುಂದೆ ಪೇಳ್ದರು ತಂದೆಯೇ ಶಿವಯೋಗಮಂದಿರಕೆ ।
ಹೊಂದುತಿಹ ಶಿವನೊಳಗೆ ಸಮರಸ
ಬಂಧುರಕೆ ಶಿವಯೋಗ ಮಾಡಲು
ನಂದದಿಂದಂ ಹೋಗುತಿದ್ದರೆ ಹೋಗಬಹುದೆಂದು ॥ ೪೮ ॥

ಒಪ್ಪಿಕೊಂಡರು ಹೋಗಲಿಕ್ಕೀ
ಕಪ್ಪುಗೊರಳನ ಶ್ರೇಷ್ಠ ಭಕ್ತರು
ತೊಪ್ಪನೇ ಸಂತೋಷದಿಂದಂ ಘನಮಹಿಮರಿವರು ।
ಒಪ್ಪಿಸಿದರಾ ಮಠವ ಸಾಗಿಸ
ಬಪ್ಪ ಯೋಗ್ಯತೆಯುಳ್ಳವರಿಗೆ ಮಠ
ಒಪ್ಪನೀ ತಾವ್ ಹೋಗಿಬಿಟ್ಟರು ಯೋಗಮಂದಿರಕೆ ॥ ೪೯ ॥

ಹೊಳೆಯ ಮೇಲ್ ಮಳೆಯಾದಪರಿಯಿದು
ಕಳಿಸಿದರು ಯೋಗಗಳ ಕಲಿಯಲು
ತಳೆದಿರಲು ಯೋಗಗಳ ಶಕ್ತಿಯ ಜನನದೊಡನಿವರು ।
ಕಲಿಯ ಬೇಕಿರಲಿಲ್ಲವಾವುದು
ತಿಳಿಯಬಲ್ಲದೆ ಪಾಮರರಿಗದು
ನೆಲದ ಮೇಲ್ ಹುಟ್ಟಿರುವ ದೇವರ ಯೋಗ್ಯತೆಯು ತಾನು ॥ ೫೦ ॥

ಎಸಗಿರಲು ಶಿವಯೋಗಮಂದಿರ
ಕಸಮಯತಿಯೀ ಹೋಹಪೂರ್ವ
ಪಶುಪತಿಯ ಕೃಪೆಯಿಂ ಪವಾಡಗಳೆನಿತೋ ಮತ್ತಿವರು ।
ಪಸರಿಸಿರಲದರಿಂದ ಕೀರ್ತಿಯು
ತುಸು ದಿವಸದಲಿ ಬಾಲ ಯತಿಗಳ
ನೊಸಲ ನಯನನ ದೂತರೆಂಬುವರಿವರು ದಿಟವಿಹುದು ॥ ೫೧ ॥

ಹಾನಗಲ್ಲ ಕುಮಾರ ಗುರುಗಳು
ಜ್ಞಾನಗಳಿಸಲು ವೀರಶೈವರು
ಮಾನಸಿಧಿಗಳು ಸ್ಥಾಪನೆಯನದನೆಸಗಿಬಿಟ್ಟಿಹರು ।
ಕಾಣೆರದು ಬಾದಾಮಿ ಬಳಿಯಿದೆ
ಜಾಣರೇ ಶಿವಯೋಗ ಮಂದಿರ
ದಾನದೊಳಗತ್ಯಧಿಕವಾದುದು ಪರಮ ಕೃತಿಯವರ ॥ ೫೨ ॥

ಹರನು ಕಾಯಲಿ ನಿಮ್ಮನನುದಿನ
ಸರುವ ಶ್ರೋತೃರೆ ಭಕ್ತಜನಕೆ
ಕರುಣದಿಂದಂ ಕೊಡಲಿ ಸುಮತಿಯನವನು ಸಕಲರಿಗೆ ।
ಜರುಗುವೊಲು ಸತ್ಕಾರ್ಯ ನಿಮ್ಮಿಂ
ಪೊರೆಯುವೊಲು ಮೇಣ್ ಶೀಲ ಸಂಪದ
ನಿರುತದಲಿ ಪ್ರೇರಣೆಯ ಮಾಡಲಿ ನಿಮ್ಮೊಳಗೆ ಶಿವನು ॥ ೫೩ ॥

ಎರಡನೆಯ ಸಂಧಿ ಮುಗಿದುದು



# ಮೂರನೆಯ ಸಂಧಿ

॥ ಸೂಚನೆ ॥ ಕಳೆದು ವರ್ಷಗಳೈದು ಯತಿಗಳು
ಬಲು ಸುಖದೆ ಶಿವಯೋಗ ಭವನದಿ
ಬಳಿಕ ಬಂದರು ತಮ್ಮ ಮರಡಿಯ ಮಠದಿ ವಾಸಿಸಲು ।

ಶ್ರೀ ಹಿಮಾಚಲ ಸುತೆಯನಾಥನು
ಮೋಹ ಮಾಯಾ ಜಯಿಸಿದಾತನು
ಸ್ನೇಹದಿಂದಂ ವಿಶ್ವವೆಲ್ಲವ ಸಲುಹುತಿರುವವನು
ದೇಹ ಕಾಮನ ಸುಟ್ಟುವವನಿನೆ
ದೇಹ ರಹಿತನ ಮಾಡಿ ಪೊರೆಯುವ
ಗೇಹಗಿರಿಯೇ ಮಾಡಿಕೊಂಡಿಹ ಶಿವನು ರಕ್ಷಿಸಲಿ ॥೧॥

ಮರಡಿ ಮಠದಿಂ ಹೋದನಂತರ
ವೆರಡನೆಯ ಕೆಂಪಯ್ಯನವರೀ
ಹರುಷದಿಂ ವಾಸಿಸಲು ಶ್ರೀ ಶಿವಯೋಗ ಮಂದಿರಕೆ ।
ಸರುವರಿಗೆ ಬಹು ದುಃಖವಾಯಿತು
ಗುರುಗಳಿಲ್ಲದ ಮಠವು ತಾನದು
ಕೆರೆಯು ನೀರಿರದಾಗೆ ತೋರುವ ಹಾಗೆ ತೋರುತಿರೆ ॥೨॥

ಭಕ್ತರಿಗೆ ಬೇಕಾದುದೆಲ್ಲವ
ಶಕ್ತಯತಿಯೀ ಕೊಡುತಲಿದ್ದರು
ಭಕ್ತರದರಿಂ ಸೌಖ್ಯದೊಳು ಬಹುಕಾಲಗಳೆಯುತಿರೆ ।
ಮುಕ್ತಗೈದರು ಪಲರ ರುಜೆಯಿಂ
ಮುಕ್ತಗೈದರು ಜನರ ದೈನ್ಯದಿಂ
ಮುಕ್ತರಾದರು ಬಂಜೆಯರಾಗದ ಮಕ್ಕಳಿಂ ತಾವು ॥೩॥

ಜನರಿಗೆನಿಸಿತು ಕಲ್ಪವೃಕ್ಷವೆ
ಘನಮಹಿಮ ಕೆಂಪಯ್ಯ ಗುರುಗಳು
ವಿನುತರಿವರಿಲ್ಲಾದ ಮೇಲಾ ಮಠಕೆ ಬಂದವರು ।
ಮನದೊಳಗೆ ಬಲು ಮರುಗುತಿದ್ದರು
ನೆನೆಸಿಯವರನು ರುದಿಸುತ್ತಿದ್ದರು
ಕನಸು ಮನಸಿನೊಳವರ ಸ್ಮರಣವ ಮಾಡುತಿರಲವರು ॥೪॥

ಬರುವರೆಂದೋ ಮರಡಿ ಮಠಕಾ
ಸರುವರಿಗೆ ಬಹು ಪೂಜ್ಯರಾಗಿಹ
ಪರಮಯತಿಗಳು ತಂದೆಗಳು ಕೆಂಪಯ್ಯ ಸ್ವಾಮಿಗಳು ।
ಹರಣ ಚಿಹ್ನನ ಬರುವಿಕೆಯನಾ
ತುರದೇ ನೋಡುವವೊಲು ಚಕೋರವು
ಮರಡಿ ಮಠದಾ ಸ್ವಾಮಿ ಮಾರ್ಗವ ನೋಡುತಿರೆ ಜನ ॥೫॥

ಕಳೆಯುತಿರೆ ಶಿವಯೋಗ ಮಂದಿರ
ದೊಳಗೆ ಕಾಲವ ಹರುಷದಲ್ಲೀ
ಚಲಿಸದಿಹ ಮಾನಸದ ಕೆಂಪಯ ಸ್ವಾಮಿಗಳು ತಾವು ।
ಕಲಿಸುತಿಹ ಯೋಗಗಳ ಮಾಡಲು
ಚೆಲು ಮನದ ಯೋಗಿಗಳ ಪ್ರೀತಿಯ
ಗಳಿಸಿ ಕೊಂಡರು ತೀವ್ರದಲ್ಲಿಯೆ ಸತತ ದುಡಿಯುತ್ತೆ ॥೬॥

ಯೋಗದಭ್ಯಾಸವನು ಮಾಡುತೆ
ರಾಗದಿಂ ಸಂಸ್ಕೃತವ ಕಲಿತರು
ತ್ಯಾಗಿಗಳು ಕೆಂಪಯ್ಯಸಿದ್ಧರು ಪುಣಿತರಾದಿವರು ।
ಭೋಗಿಸದ ಸುಖ ವಿಡದ ತಾವ್ ಶಿವ
ಯೋಗ ಮಂದಿರದಲಿ ಜನರಿಗೆ
ನಾಗಭೂಷಣ ಭಕ್ತರೀ ಬೇಕಾಗಿರಲು ತಾವು ॥೭॥

ಹಾನಗಲ್ಲ ಕುಮಾರ ಯತಿಗಳು
ಪ್ರಾಣದೊಲು ಪ್ರೀತಿಸುತಲಿದ್ದರು
ಕಾಣಿರ್ಪ ಕೆಂಪಯ್ಯಸ್ವಾಮಿಯ ಯೋಗ್ಯತೆಯ ತಿಳಿದು ।
ಸಾನುರಾಗದೆ ಜತೆಯರೊಂದಿಗೆ
ದೀನ ಜನರುದ್ಧಾರಿಗಳು ಸುರ
ಧೇನುವಾಗಿಹ ಭಕ್ತ ಜನರೇ ಯತಿಯು ಸಾಗುತಿರೆ ॥೮॥

ಸ್ಮರಣವಾಗುತ್ತಿತ್ತು ತಮ್ಮನು
ಮರಡಿಮಠವದು ಸ್ವಾಮಿಗಳಿಗೀ
ಕರುಣೆಗಳ ಮನದಲ್ಲಿ ಬಿಡದೇ ತಾನು ನಡುನಡುವೆ ।
ಜರುಗುವುದು ದಾಸೋಹವೆಂತೋ
ಸರುವರ ಭಕ್ತರು ಸುಖದೊಳಿರ್ಪರೊ
ಹಿರಿಯ ಚಿಂತೆಯು ಜನಿಸುತಿದ್ದಿತು ಮತ್ತವರ ಮನದಿ ॥೯॥

ಇರುವನಲ್ಲೇ ಕಾಡಸಿದ್ಧನು
ಸರುವವನು ತಾಂ ನೋಡಿಕೊಳ್ವನು
ಹಿರಿಯ ನಮ್ಮಯ ಸಿದ್ಧ ಕೆಂಪಯನಿರುವನ್ಯೆ ಅಲ್ಲೇ ।
ಇರುವದಾಮಠವವರದೇ ನಾಂ
ಬರಿದೆ ಚಿಂತೆಯ ಮಾಳ್ಪುದೇತಕೆ
ವರಸಮರ್ಥರು ದ್ವಯರು ತಾವೇ ಸಾಗಿಸುವರದನು ॥೧೦॥

ಇಂತೆಸಗಿ ಸುವಿವೇಕ ಮನದಲಿ
ಶಾಂತರಾಗುತ್ತಿರಲು ಕೂಡಲೆ
ಸಂತಸದ ನಿಧಿಯಾದ ಕೆಂಪಯವರಿವರು
ಕಂತುಹರ ಶಾಂಭವನು ಜವದೊಳ
ಗಾಂತು ಕೃಪೆಯಂ ಯಶವ ಕೊಡಲೀ
ಸ್ವಂತ ನಾಂ ಪಿಡಿದಿರುವ ಕಾರ್ಯಕ್ಕೆಂದು ಬೇಡುತಿರೆ ॥೧೧॥

ನೆನೆಸುತಿದ್ದರು ಗ್ರಾಮ ತಮ್ಮಯ
ಮನದೊಳಾ ಕೊಣ್ಣೂರ ಮತ್ತೆ
ನೆನೆಸುತ್ತಿದ್ದರು ತಮ್ಮ ಸನಿಹದ ಜನರನ್ನು ।
ಮನದೊಳಿಗೆ ಸಲೆ ನಿಂದುಬಿಡುತಿರೆ
ಘನಮಹಿಮ ಸುತ ಕಾಡದೇವರ
ವಿನುತ ಗುರು ಕೆಂಪಯ್ಯನವರಾ ಚೆನ್ನಗುಡಿಗಳಲಿ ॥೧೨॥

ನದಿಯ ತೀರದಿ ನೆಲಸಿದಂತಹ
ಪದುಳಗೊಳಿಸುವ ಮರಡಿಮಠದಲಿ
ವಿಧುಧರನ ಸಮನಾದ ಶ್ರೀ ಕಾಡೀಶ್ವರನ ಗುಡಿಯು ।
ಮುದವನೀಯುವ ದುಃಖಿತಾಗೂ
ಪದುಳ ತುಂಬಿದ ಭದ್ರಭೂವಿಯು
ಚದುರರಾದೀ ಯತಿಗೆ ಬಿಡದೆ ಸ್ಮರಣವಾಗುತಿರೆ ॥೧೩॥

ಇರುವದಾ ಕೆಂಪಯ್ಯ ಸ್ವಾಮಿಯ
ವರ ಮಠಕೆ ಮೇಣ್ ಮರಡಿ ಮಠಮೀ
ನೆರೆ ಹೆಸರು ತಾನೆಂಬುದನು ನಾವ್ ಪಿಂತೆಹೇಳಿಹೆವು ।
ಮರೆತವರಿಗದು ವಿದಿತವಾಗಲಿ
ವಿರತಪುಣೆಯೀ ಮಮತೆಯಿದ್ದಿ
ಸರುವರೊಲು ಗಡ ತಾವು ಜತುನಿಸಿದ ಮನೆಯ ಜನರೆಲ್ಲ ॥೧೪॥

ಹಾನಗಲ್ಲದ ಸ್ವಾಮಿಗಳು ತಾವ್
ಜ್ಞಾನ ಪರಡಲು ಧರ್ಮತತ್ವವ
ಸಾನುರಾಗದೆ ಸ್ವಾಮಿಗಳ ಫಲರನ್ನು ಕರಕೊಂಡು ।
ಮಾನಿಗಳು ಚಿಕ್ಕೋಡಿಯೂರಿಗೆ
ಕಾಣಿರೈ ಬಂದಿರುವ ಸಮಯದಿ
ದೀನ ಜನಗಳ ಜನಕರೀ ಕೆಂಪಯ್ಯಸ್ವಾಮಿಗಳು ॥೧೫॥

ಬಂದಿರಲು ತಾವವರ ಸಂಗಡ
ತಂದೆಗಳು ನೆರೆ ನೆರೆದ ಸಭೆಯಲಿ
ಒಂದು ವ್ಯಾಖ್ಯಾನವನು ಕೊಟ್ಟರು ನವ ತರುಣರಿವರು ।
ಮಂದಿಗೆಲ್ಲಾ ಹರ್ಷವಾಯಿತು
ಸುಂದರರ ಭಾಷಣವನಾಲಿಸಿ
ಬಂದಿರಲು ಹತ್ತೊಂಬತ್ತರ ಹದಿನಾರು ವರುಷದಲಿ ॥೧೬॥

ಬಂದುದುದು ಕೊಣ್ಣೂರ ಸ್ವಾಮಿಯು
ಮಂದಿಗೆಲ್ಲಾ ತಿಳಿದ ಕೂಡಲೆ
ಹೊಂದಿ ಸಂತೋಷವನು ಬಂದರು ದರ್ಶನಕೆ ತಾವು ।
ಬಂದ ಜನರಿಗೆ ಹರಿಸಿ ತೋಷದೆ
ಮುಂದೆ ಕೆಲದಿನ ಚರಿಸಿ ಸುತ್ತಲು
ನಂದದಿಂ ಗಮಿಸಿದರು ಸರ್ವರು ಯೋಗಮಂದಿರಕೆ ॥೧೭॥

ಕಳಿದರೈ ಶಿವಯೋಗ ಮಂದಿರ
ದೊಳಗೆ ವರ್ಷಗಳೈದು ಪ್ರಣುತರು
ಸಲೆ ಶ್ರಮವ ಗೈಯುತ್ತೆ ಯೋಗಾಭ್ಯಾಸದೊಳು ತಾವು ।
ಬಳಿಕ ತಮ್ಮಯ ಮಠಕೆ ಬರಲಿಕೆ
ಬಲು ಹರುಷದಿಂ ಹೊರಡುವಾಗಳು
ಕುಲವಿರದಿಹ ಕುಮಾರಗುರುಗಳಿಗೆರಗಿದರು ಮುದದೆ ॥೧೮॥

ಬಂದು ಬಿಟ್ಟರು ಮರಡಿ ಮಠಕಾ
ನಂದದಿಂ ಕೆಂಪಯ್ಯ ಗುರುಗಳು
ಬಂದರೈ ದರ್ಶನಕೆ ಕೂಡಲೆ ಭಕ್ತ ಜನರೆಲ್ಲಾ ।
ಬಂದರಾಗಳು ಬಂಧು ಜನಗಳು
ಹೊಂದಿ ತೋಷವ ಕ್ಷಿಪ್ರದಲಿ ತಾವ್
ಬಂದರೈ ಕೊಣ್ಣೂರ ವಾಸಿಗಳೆಲ್ಲರೂ ಬಿಡದೆ ॥೧೯॥

ಹರುಷವಾಯಿತು ಸರ್ವಜನರಿಗೆ
ಹರುಷವಾಯಿತು ಯೋಗಿಗಳಿಗೀ
ನಿರುಕಿಸಿದ ಮೇಲೊಬ್ಬರೊಬ್ಬರ ಮುಖಗಳನು ತಾವು ।
ಹರುಷವದಕೆ ಸಮಾನವಿಲ್ಲವು
ಬರುತಲಿದ್ದರು ಮತ್ತೆ ದೂರಿನ
ಸರುವ ಭಕುತರು ಸ್ವಾಮಿ ಬಂದುದು ಕೇಳಿ ಹಿಗ್ಗಿಗ್ಗಿ ॥೨೦॥

ಕಳೆದವೀ ಪರಿತೋಷದೊಳು ದಿನ
ಕೆಲವು ತದನಂತರದಿ ಸಾಗಿತು
ಚೆಲುವು ಮಠದಾ ಕಾರ್ಯ ಬಹು ಸಂತೋಷದಲಿ ತಾನು ।
ತಿಳಿಸಿರುವದಿದು ಘನಮಹಿಮರೀ
ಹಲವು ತಾವು ಪವಾಡವೆಸಗಿರೆ
ನೆಲಸ ಹೋಗುವ ಮೊದಲಿವರು ಶಿವಯೋಗ ಮಂದಿರಕೆ ॥೨೧॥

ಬಿಟ್ಟು ನಾವುಗಳವನು ಹೇಳದೆ
ಕೊಟ್ಟು ಮನವನು ಕೇಳಿರಿತ್ತಿನ
ಶ್ರೇಷ್ಠ ಸಿದ್ಧರು ಲೀಲೆಗಳ ಕೆಲವನ್ನು ಹೇಳುವೆವು ।
ಇಟ್ಟು ಭಕ್ತಿಯ ಶಿವನ ಪಾದದಿ
ಕೊಟ್ಟು ಮನವನು ನಾಮವಾತನ
ಬಿಟ್ಟುಬಿಡದೇ ಸ್ಮರಣೆಗೈದರೆ ಶಾಂತಿ ಲಭಿಸುವದು ॥೨೨॥

ಸಾವಿರಾರು ಪವಾಡ ಗೈದರು
ದೇವರಂತಹ ಸ್ವಾಮಿವರ್ಯರು
ತಾವು ತಮ್ಮಯ ಜನ್ಮದಲ್ಲವನೆಲ್ಲ ಹೇಳುವದು ।
ನಾವು ಬಿಡುವೆವು ಸಾಧ್ಯವಿರದಕೆ
ಕಾವನಂತಿಹ ನಮ್ಮ ಸ್ವಾಮಿಯ
ನೀವು ಕೇಳ್ವದು ಕೆಲವೆ ಪೇಳ್ವೆವು ಲೀಲೆಯಿತ್ತಲಿಸ ॥೨೩॥

ಭವಸದಾಶಿವ ವಿಶ್ವಪಾಲಕ
ಭುವನಪೂಜಿತ ಸರ್ವಮಂಗಳ
ದಿವಿಜಪತಿನತ ಪಾದಪಂಕಜ ತಾರಗಿರಿಧಾಮ ।
ರವಿಸುಧಾಕರ ವಹ್ನಿಲೋಚನ
ಶಿವ ಜಟಾಧರ ನೀಲಕಂಧರ
ಪವಿ ದುರಿತಗಿರಿ ನಾಮವಾತನ ಮನದಿ ಸ್ಮರಿಸುವದು ॥೨೪॥

ಸುಮತ ಸೆಟ್ಟರ ಶ್ರೀ ಶಿವಪ್ಪನ
ಮಮತೆಯಾತ್ಮಜನಾದ ಲಿಂಗಪ
ವಿಮಲ ಮನದೀ ಭಾಲಕಂಗೈವರ್ಷವಾದಾಗೆ ।
ಉಮೆಯ ಪತಿಯವಕೃಪೆಯ ದೆಸೆಯಿಂ
ಸುಮತಿ ಬಾಲಗೆ ರೋಗವಾಯಿತು
ಕ್ರಮದೆ ನಿತ್ಯವು ರುದಿಸುತ್ತಿದ್ದನು ರಾತ್ರಿಯಲ್ಲೆದ್ದು ॥೨೫॥

ಎನಿತವನಿಗೌಷಧವ ಕೊಟ್ಟರು
ಗುಣವು ಬಾರದೆ ಹೋಯ್ತು ಕಡೆಯಲಿ
ತನಯನವನಂ ತಂದನೈ ತಾಂ ಮಠಡಿ ಶ್ರೀ ಮಠಕೆ ।
ವಿನಯಸಾಗರ ವಿನುತ ಮೂರ್ತಿಗೆ
ವಿನಯದಿಂದಂ ನಮನ ಗೈದನು
ಸುಮತ ಸೆಟ್ಟಿಯು ಪೇಳಿದನು ಗಡ ಮಗನ ಬೇನೆಯನ ॥೨೭॥

ಹೇಳಿದರು ಘನಮಹಿಮರಾ ಮೇಲ್
ಬಾಲಕಗೆ ನೀವ್ ತೀರ್ಥ ಹಾಕಿರಿ
ಶೀಲಯುತರೆ ಕಾಡದೇವರ ತೀರ್ಥವೊಯ್ಯುವುದು ।
ಹಾಳುಮಾಡದು ಬೇಷಜಕೆ ಹಣ
ಗಾಳಿಯಾಗಿದೆ ನಿಮ್ಮ ಮಗನಿಗೆ
ಕೇಳಿರೈ ಜವ ಹೋಗಿಬಿಡುವುದು ತೀರ್ಥದಿಂದುವು ॥೨೮॥

ಬಾಳುವನು ಸುಖದಿಂದ ಬಾಲನು
ತಾಳಿಯಾರೋಗ್ಯವನು ಕೂಡಲೆ
ಕೇಳಿ ಸ್ವಾಮಿಯ ಮಾತು ತಾವ್ ಚಿಕ್ಕೋಡಿ ಗೈದಿದನು ।
ಹೇಳಿದೊಲು ಗುಣವಾಗಿಬಿಟ್ಟಿತು
ಬಾಲ ಲಿಂಗಪ್ಪನಿಗೆ ಕೂಡಲೆ
ಬಾಳುವನು ಯತಿವಚನದೊಲು ಲಿಂಗಪ್ಪ ಸುಖವಾಗಿ ॥೨೯॥

ಮತ್ತೆ ಸೆಟ್ಟರ ಮಡದಿ ಬಿದ್ದಳು
ಕುತ್ತಿನೊಳು ಕಾಶವ್ವನೀಕೆಯು
ಮತ್ತಗಿನ ಚೇತಸ್ಸಿನ ಬಲೆಗೆ ಭ್ರಮೆಯು ತಾನಾಯ್ತು ।
ಇತ್ತರಾಕೆಗೆ ಕೆಲವರೌಷಧ
ಚಿತ್ತ ಸುಸ್ಥಿರವಾಗಲಿಲ್ಲವು
ಮತ್ತೆ ರುಜೆ ಹೆಚ್ಚಾಯ್ತು ವ್ಯರ್ಥವೆ ಹಣವು ಹಾಳಾಯ್ತು ॥೩೦॥

ಬಿಟ್ಟು ಮದ್ದನಾ ಕೊಡುವ ಹಾದಿಯ
ಗಟ್ಟಿ ಮನಸಿನ ಸುಮತ ಸೆಟ್ಟನು
ಪಟ್ಟು ಪೋದವ ಹೇಳಹೋದನು ಸ್ವಾಮಿಕೆಂಪಯಗೆ ।
ದಿಟ್ಟ ಮೂರುಳ್ಳವನ ದಯದಿಂ
ಸುಟ್ಟು ಕಾಮನ ಸುತಿಯು ಬಂದರೆ
ಸೆಟ್ಟರಾ ಚಿಕ್ಕೋಡಿಯೂರಲ್ಲಿ ಮಠದೊಳಗೆ ತಾವು ॥೨೦॥

ಉಳಿದಿರಲು ಚರಮೂರ್ತಿ ಮಠಧಲಿ
ತುಲವಿರದ ವರ ಪುಣ್ಯಗಾತ್ರರು
ಗಳಿಸಿರುವ ಬಹು ಕೀರ್ತಿ ಜಗದಲಿ ಪ್ರಸುತ ಗುರುವರರು ।
ಘಳಿಲನೇ ದರ್ಶನಕೆ ಪೋದನು
ಚಲಿಸದಿಹ ಮಾನಸದ ಸೆಟ್ಟನು
ಬಳಿನೊಳಿಹ ಕಾಯಿಕಪ್ಪುರವಿಟ್ಟು ನಮಿಸಿದನು ॥೨೧॥

ನಮಿಸಿದನು ಸಾಷ್ಟಾಂಗದಿಂದಂ
ಸುಪನ ಸಮಮೃದು ಮನದ ಗುರುವಿಗೆ
ವಿಮಲ ಚಿತ್ತದ ಶಾಂತಮೂರ್ತಿಗೆ ಪೇಳಿದನು ಬಳಿಕ ।
ಸುಮತಿಗಳೆ ಮಮ ಪತ್ನಿ ಚಿತ್ತಕೆ
ಭ್ರಮೆಯು ತಾನಾಗಿಪುದು ಮತ್ರ್ಯದ
ಸುಮನ ಶರಹರರಾದ ವಂದ್ಯರೆ ಕೃಪೆಯ ಮಾಡುವದು ॥೨೨॥

ಅರಹಿದರು ತರುವಾಯ ಯತಿಗಳು
ತ್ವರಿತದೊಳು ಗುಣವಾಗಲಾರದು
ಬರುಬರುತೆ ಗುಣವಾಗಿಬಿಡುವದು ಹೆದರದಿರಿ ನೀವು ।
ಹರಸಿಯಾ ಸೆಟ್ಟರಿಗೆ ಕೊಟ್ಟರು
ಕರುಣೆಗಳು ತೀರ್ಥ ಪ್ರಸಾದವ
ವರ ಪುರುಷದೊರೆದಂತೆ ಸತಿಗಾ ಪೂರ್ಣಗುಣವಾಯ್ತು ॥೨೩॥

ಇರುವವನಾ ಚಿಕ್ಕೋಡಿಯೂರಲಿ
ಕಿರಿಯ ಬಂಧು ಶಿವಪ್ಪ ಶೆಟ್ಟನ
ಹರುಷದಿಂ ಬಾಳಿವೆಯ ಮಾಡುತೆ ಜನಕೆ ಬೇಕಾಗಿ ।
ಇರುವದೈ ಬಾಬಣ್ಣ ನಾಮವು
ತರಳ ಗಂಗಾಧರನು ಜ್ವರದಿಂ
ಮರೆತು ದೇಹದ ಭಾನಮಂ ಮಲಗಿರಲು ಮನೆಯಲ್ಲಿ ॥೩೪॥

ಜಾಣ ಡಾಕ್ಟರನೊಬ್ಬ ಬಹುದಿನ
ಕಾಣರೈ ಔಷಧವ ಕೊಡುತಿರೆ
ಬೇನೆ ಹೋಗದೆ ದಿನದಿನಕ್ಕೂದು ವರ್ಧನವೆ ಆಯ್ತು ।
ಕಾಣಲಾರದೆ ಗುಣದ ಲಕ್ಷಣ
ತಾನು ಪೇಳ್ದನು ಸುಮತ ಸೆಟ್ಟಿಗೆ
ನಾನು ಮಾಡುವಯತ್ನ ಮುಗಿಯಿತು ನಿಮ್ಮ ಮಗನಿವನು ॥೩೫॥

ಬದುಕಲಾರನು ಬಿಡಿರಿಯಾಶೆಯ
ಚದುರರೇ ಬಾಬಣ್ಣ ಸೆಟ್ಟರೆ
ವಿಧುಧರನ ಸಂಕಲ್ಪದೊಲು ಘಟಿಸುವದು ಜಗದಲ್ಲಿ ।
ರುದಿಸಿದರು ಮನೆಯ ಮಂದಿಯೆಲ್ಲಾ
ಇದನು ಕೇಳಿದ ಕೂಡಲೇ ತಾವ್
ರುದಿಸಬೇಡಿರಿ ಯೆನುತ ಡಾಕ್ಟರ ಬಿಟ್ಟನೈ ಹೋಗಿ ॥೩೬॥

ಆ ದಿನವೆ ಚಿಕ್ಕೋಡಿಯೂರಿಗೆ
ಸೋದರರು ಬಡ ಜನರಿಗಾಗಿಹ
ಭೂಧರರದ ಪರಿಚಲಿಸದಿಹ ಧೃತಿಯುತ್ತ ಕೆಂಪಯರು ।
ಮೋದದಿಂ ಬಂದುಳಿದುಕೊಂಡರೆ
ಹೋದನಾ ಸದ್ವಾರ್ತೆಯಾಲಿಸಿ
ಪಾದ ದರ್ಶನಕಾಗಿ ಗುರುಗಳ ಮದಕೆ ಬಾಬಣ್ಣನು ॥೩೭॥

ನೋಡಿ ಶ್ರೀಗಳ ದಿವ್ಯ ಮೂರ್ತಿಯ
ಗಾಢ ಸಂತೋಷವನು ಪಡೆದನು
ಮಾಡಿದನು ಸಾಷ್ಟಾಂಗ ವಂದನೆ ಸೆಟ್ಟಿ ತರುವಾಯ ।
ಆಡಿದನು ಬಾಬಣ್ಣ ಸೆಟ್ಟಿಯು
ಕೂಡಲೇ ಯಾ ಭೂ ಶಿವಗೆ ತಾಂ
ಮಾಡಿರೈ ಮಮ ಪುತ್ರನಿಗೆ ಗುಣ ಸಾಯಲಾಗಿಹನು ॥೩೮॥

ಮಲಗಿಹನು ಜ್ವರಬಂದು ಬಹುದಿನ
ನಿಲಯದಲಿ ಮಮ ಪುತ್ರ ಮಮತೆಯು
ಚೆಲುವು ಡಾಕ್ಟರನಿಂದೆ ಭೇಷಜ ಬಿಡದೆ ಕೊಡಿಸಿದೆವು ।
ಇಳಿಯದಿರುವದು ಜ್ವರವು ಸ್ವಲ್ಪವು
ತಿಳಿಸಿದರು ತಾವಿಂದು ಡಾಕ್ಟರ
ನುಳಿಯಲಾರನು ನಿಮ್ಮ ಮಗನಿವನೆಂದು ನಮ್ಮೆದುರು ॥೩೯॥

ಕೇಳಿ ಸೆಟ್ಟಿಯ ಮಾತು ಸಿದ್ಧರು
ಹೇಳಿದರು ನಸುನಗುತೆ ಕೂಡಲೆ
ಬಾಳುವನು ತಾಂ ಮಗನು ನಿಮ್ಮಯ ಬೇನೆಯುಳಿಯುವದು ।
ತಾಳಿರೈ ಧೃತಿ ತೀರ್ಥ ಹಾಕಿರಿ
ಕಾಲಕಾಲನ ನಾಮ ನೆನೆಯುತೆ
ಕೇಳಿರೀ ದಿನ ನಿಂತು ಬಿಡುವವು ಜ್ವರವು ಸಂಜೆಯಲಿ ॥೪೦॥

ಹರುಷವಾಯಿತು ಬಹಳ ಸೆಟ್ಟಿಗೆ
ಗುರುವರರ ಶುಭ ವಚನವಾಲಿಸಿ
ತ್ವರದಿ ತೀರ್ಥವನೊಯ್ದು ಪುತ್ರನ ಮುಖದಿ ಹಾಕಿದನು ।
ಜ್ವರವು ನಿಂತವು ಸಂಜೆಯಾಗಲು
ವರಪುರುಷ ಕೆಂಪಯ್ಯ ಸ್ವಾಮಿ
ಒರೆದ ತೆರದೊಳು: ಭಕ್ತ ಜನರೇ ಕೇಳಿರೈ ನೀವು ॥೪೧॥

ಮುತ್ತೆ ತಾವಾವಾಗ ಪೇಳ್ದರೆ
ಸತ್ತ ಮರು ಬಾಬಣ್ಣ ಸೆಟ್ಟಿಗೆ
ಬಿತ್ತರವ ಬಿಡಬೇಡಿರೈ ನೀವ್ ನಿಮ್ಮ ಪುತ್ರನಿಗೆ ।
ಮತ್ತೆ ಕೆಲದಿನ ಪೀಡಿಪ್ಪುದು ರುಜೆ
ಕುತ್ತು ತಾನದು ಮೆಲ್ಲ ಮೆಲ್ಲನೆ
ಚಿತ್ತವಿಸಿರೈ ಹೋಗಿ ಬಿಡುವದು ಮಗನು ಬದುಕುವನು ॥೪೨॥

ಮರುದಿವಸ ತಾಂ ಬರುವ ಹೊತ್ತಿಗೆ
ಕರುಣೆ ಡಾಕ್ಟರ ಬಂದ ಹೆದರು
ತ್ವೊರಗಿರುವ ತಾಂ ದೋಗಿ ಕೋಣೆಗೆ ಹೋಗಿ ನೋಡಿದನು ।
ಜ್ವರವೆ ಇರಲಿಲ್ಲವನ ಮೈಯಲಿ
ತರಳ ಬಂದಿರೆ ಶುದ್ಧಿಯಲ್ಲದು
ಬೆರಗುಬಟ್ಟನು ಕಂಡು ಡಾಕ್ಟರ ಬಳಿಕ ಬಾಬಣಗೆ ॥೪೩॥

ಕೇಳಿದನು ಡಾಕ್ಟರನು ಸೋಜಿಗ
ತಾಳಿ ನಿಮ್ಮಯ ಮಗನ ಪ್ರಕೃತಿಯು
ಹೇಗೆ ಚಲುವಾಯ್ತುಹುದು ಹೇಳಿರಿ ನೀವು ಸತ್ಯವನು ।
ಹೇಳಿದನು ತರುವಾಯ ಸೆಟ್ಟಿಯು
ಲೀಲೆಯಿದು ಶ್ರೀ ಗುರುಗಳೆಮ್ಮಯ
ಕೇಳಿ ಹುಡುಗನ ಸ್ಥಿತಿಯ ಕೊಟ್ಟರು ತೀರ್ಥ ಹಾಕಲಿಕೆ ॥೪೪॥

ತಂದು ಹಾಕಲು ತೀರ್ಥವಿವನಿಗೆ
ತಂದೆಯವ ಮೊರೆದಂತೆ ಸಂಜೆಗೆ
ನಿಂದುಬಿಟ್ಟವು ಜ್ವರವು ಬಾಲನು ಬಂದನೆಚ್ಚರಕೆ ।
ಹೊಂದಿದನು ಸಂತೋಷ ಡಾಕ್ಟರ
ಬಂಧುರರ ಸಾಮರ್ಥ್ಯವೀಕ್ಷಿಸಿ
ನಂದದಿಂ ಹೊಗಳುತ್ತೆ ಮಹಿಮರತಗಮಿಸಿದನು ತಾನು ॥ ೪೫ ॥

ಬಂದು ಹೆಚ್ಚಿಗೆ ಜ್ವರವು ಮಲಗಿರೆ
ಕಂಡನೊಬ್ಬನು ಹಾಲ ಬಾವಿಯ
ಹೊಂದಿದಂತಹ ಕೀರ್ತಿಯನು ಬಹು ವೀರಭದ್ರಪನ ।
ಬಂಧುರನು ಚಿಕ್ಕೋಡಿಯಲ್ಲಿರೆ
ಹೊಂದಿ ಸಬ್‌ಜಜ್ಜನ ಸುಕಾರ್ಯವ
ನಂದದಿಂ ತಾಂ ಮಾಡುತ್ತಿದ್ದನು ನ್ಯಾಯನಿಷ್ಠುರನು ॥ ೪೬ ॥

ಪ್ಲೇಗವಾಗಿರಲಾಗಳೊದೊಳು
ಹೋಗಿ ನಿಂತಿರೆಲೂರ ಹೊರಗಡೆ
ಸಾಗಿ ಬಂದವು ಜ್ವರವು ಮಗನಿಗೆ ಪ್ಲೇಗವಲ್ಲದುವು ।
ನೀಗುವನು ಮಗು ಜೀವವನು ತಾಂ
ಹೀಗೆ ಸ್ಥಿತಿಯಾಗಿರಲು ಬಾಲನ
ಹೋಗಲಿಲ್ಲವು ಬೇನೆ ಡಾಕ್ಟರನಿತ್ತ ಭೇಷಜಕೆ ॥ ೪೭ ॥

ಇದ್ದರೈ ಆವಾಗ ಯತಿಗಳು
ಬುದ್ಧಿನಿಧಿಗಳು ತಾವು ಮಠದಲಿ
ಸುದ್ದಿ ಹತ್ತಿತು ಹಾಲಬಾವಿಯ ವೀರ ಬಹುಪಗೆ ।
ಬಿದ್ದು ಸಂತೋಷಾಬ್ಧಿಯಲ್ಲುರೆ
ಬುದ್ಧಿವಂತನು ದರ್ಶನಕೆ ಗಡ
ಪದ್ಧತಿಯ ತೆರ ಕಾಯಿ ಕಪ್ಪುರ ತಾಸು ತಕ್ಕೊಂಡು ॥ ೪೮ ॥

ಹೋಗಿಯಾ ಚರಮೂರ್ತಿ ಮಠದಲಿ
ಬಾಗಿದನು ಯತಿ ಪಾದಕಮಲಕೆ
ಬೇಗದೊಳು ಹೇಳಿದನು ಪುತ್ರನ ಸ್ಥಿತಿಯ ಸಿದ್ಧರಿಗೆ ।
ಭೋ ಗುರುವೆ ಕಾಪಾಡಿರೆನ್ನಯ
ಹೋಗ ಹತ್ತಿದೆ ಜೀವ ಬಾಲನ
ಸಾಗರರು ತಾವ್ ದಯೆಯ ಮಹಿಮರೆ ರಕ್ಷಿಸಿರಿ ಸುತನ ॥ ೪೯ ॥

ಸ್ವಾಮಿಗಳು ಹೇಳಿದರು ಕೂಡಲೆ
ಕಾಮಸಂಹರ ಶಿವನು ಪೊರೆವನು
ಸೀಮೆಯಿಲ್ಲದ ಕರುಣೆಯಾತನು ನಿಮ್ಮ ಪುತ್ರನನು ।
ಭೀಮ ರುಜೆಯದು ಬಿಟ್ಟು ಹೋಹುದು
ಪ್ರೇಮದಿಂ ಶಿವನಾಮ ನೆನೆಯುತೆ
ಕೋಮಲಗೆ ನೀವ್ ತೀರ್ಥ ಹಾಕಿರಿ ವಾಸಿಯಾಗುವದು ॥ ೫೦ ॥

ಯತಿಮಣಿಗಳವದೊರೆದ ತೆರದೊಳು
ಗತಿಸಿಬಿಟ್ಟಿತು ಬೇನೆ ಕೂಡಲೆ
ಸುತನು ಬಳಿಕಾ ಹಾಲಬಾವಿಯ ವೀರಭದ್ರಪನ ।
ಪೃಥಿವಿಯೊಳಗೀ ಒದುಕಿ ಬಾಳನು
ಸತತ ಜನಗಳ ದುಃಖ ಹರಣವ
ಶಿಲೆಗೆಳನಸಮವಾದ ಯೋಗಿಗಳೆ ನಗುತ್ತಿರೆ ಬಿದರೆ ॥ ೫೧ ॥

ಹೋಗಿರಲು ಚಿಕ್ಕೋಡಿಯ ಬಳಿಯಿಹ
ಯೋಗಿಗಳು ಉಮರಾಣಿಯುರಿಗೆ
ಹೋಗಿ ಕುಳಿತಿರೆ ಭಕ್ತರಲಿ ಕಾಷ್ಠಾಸನದ ಮೇಲೆ ।
ಆಗಳಿಟ್ಟರು ದೀಪದಾರತಿ
ರಾಗದಿಂ ಕೆಂಪಯರ ಮುಂಗಡೆ
ಹೋಗಿಬಿಟ್ಟವು ದೀಪ ಕೂಡಲೆ ಗಾಳಿಯೊಡತಕ್ಕೆ ॥೫೨॥

ಹೆದರಿದರು ಮನೆಮಂದಿ ಮನದೊಳು
ಗಿದುವು ಕೆಡಕಾಯ್ತೆನುತೆ ಬಹಳೇ
ಚದುರ ಯತಿಗಳು ತಿಳಿದದನು ಗಡ ತಮ್ಮ ಸೇವಕಗೆ ।
ಮುದದೆ ಪೇಳ್ದರು ನೀನು ಕೈಹಿಡಿ
ಒದಿಯೊಳಾರತಿಯೊಂದು ಮಗ್ಗಲು
ಚದುರದೊರೆದೊಲು ಮಾಡೆ ಸೇವಕ ದೀಪ ಹತ್ತಿದವು ॥೫೩॥

ನೋಡಿ ಗುರುಗಳ ಲೀಲೆಯಾಗಳು
ಕೂಡಿರುವ ಜನರೆಲ್ಲ ಬೆರಗನು
ನಾಡೆ ತಾವ್ ಹೋದಿದರು ಹರುಷದೆ ಸಿದ್ಧವರರನ್ನು ।
ಮಾಡಿದರು ಸ್ತುತಿ ಬಿಡದೆ ಸರ್ವರು
ಮೂಡಿರುವಿರೀ ನರಗ ರೂಪದೆ
ಮಾಡಲಿಕೆ ಕಲ್ಯಾಣ ಮನುಜರ ದೇವರೇ ನೀವು ॥೫೪॥

ನಡೆಸಿದಿರಿ ನೀವಿಂದು ಸತ್ತೆಯ
ಬಿಡದೆ ಯಗ್ನಿಯ ಮೇಲೆ ಮಹಿಮರೆ
ಕೊಡುವಿರೈ ಮಕ್ಕಳನು ಕರುಣದೆ ಬಂಜೆಯರಿಗೆಲ್ಲಾ ।
ಒಡತನವ ಜವಕಳೆಯುತಿರುವಿರಿ
ಬಿಡದೆ ಬೇನೆಯ ನಷ್ಟ ಮಾಡ್ವಿರಿ
ಹಿಡಿದ ಭೂತ ಪಿಶಾಚಿಯೆಲ್ಲವನೋಡಿಸುತ್ತೆ ಹಿರಿ ॥೫೫॥

ವಿನಯ ರೂಪರು ಶಾಂತಿ ಸದನರು
ಕನಿಕರದ ನಿಧಿ ದೀನವತ್ಸಲ
ಘನ ಮನಸಿನವರಾದ ಮಡಿದುರೆ ಪ್ರಣುತ ಗುರುವರರೆ ।
ವಿನುತ ಶಿವಮತ ಶರಧಿಚಂದ್ರರು
ಮನುಜ ರೂಪವ ತಾಳ್ದ ದೇವರು
ಜನನಿ ಜನಕರು ನೀವು ನಿಮ್ಮಯ ಜಯ ಜಯವು ನಿಮಗೆ ॥೫೬॥

ಎಂದು ಸರ್ವರು ಭಕ್ತಿಪರವಶ
ದಿಂದ ಸ್ತೋತ್ರವಗೈದರಾಗಳು
ಮುಂದೆಯವರಲಿ ಭೋಜನವ ಮುದದಿಂದೆ ಮುಗಿಸಿದರು ।
ಬಂಧುವಾಗಿಪ ಜಡಜನರಿಗೀ
ಕುಂದಿರದ ಚಾರಿತ್ರ್ಯಯುತರಿಗೆ
ಮಂದಿಯೆಲ್ಲಾ ಸಲ್ಲಿಸಿದರುರು ಮುದದೆ ದಕ್ಷಿಣೆಯ ॥೫೭॥

ಇರುವನೊಬ್ಬನು ಭಕ್ತನಿವರಿಗೆ
ಮೆರೆಯುತಿಹ ಒಡಕುಂದ್ರಿ ಗ್ರಾಮದಿ
ನರನಿಗಾಗಿರೆ ಶಿಕ್ಷೆ ಕಡೆಗೂ ಸೆರೆವನೆಯೊಳಿರುವ ।
ಅರಹಿ ಹಿರಿಯಧಿಕಾರಿಗಳಿಗಿದು
ನಿರಪರಾಧಿಯು ನಾನು ದೊರೆಗಳೆ
ಬರಿದೆ ಶಿಕ್ಷೆಯ ನನಗೆ ಕೊಟ್ಟಿಹರೆಂದು ತಾಂಬರೆದು ॥೫೮॥

ಸ್ಮರಣ ಮಾಡುತೆ ಮಲಗಿಬಿಟ್ಟನು
ಗುರುಗಳೀ ಕೆಂಪಯ್ಯ ಸ್ವಾಮಿಯ
ಕರುಣೆಗಳು ತಾವವನ ಸ್ವಪ್ನದಿ ಹೋಗಿ ಹೇಳಿದರು ।
ತೊರೆಯು ಚಿಂತೆಯ ಭಕ್ತನೆ ನೀ
ತ್ವರದೆ ನಿನ್ನನು ಬಿಟ್ಟುಬಿಡುವರು
ಮರುದಿವಸವೀ ಸ್ವಾಮಿಯೊರೆದೊಲುವ ಬಿಟ್ಟರಾತನನು ॥೫೯॥

ಬಂದನಾತನು ಮರಡಿ ಮಠಕಾ
ಹೊಂದಿತಾನತ್ಯಂತ ತೋಷವ
ವಂದನೆಯು ಸಾಸ್ಟಾಂಗದಿಂದಗೈದು ಸಿದ್ಧರಿಗೆ ।
ತಂದೆಗಳೇ ನೀವ್ ನನ್ನ ಸ್ವಪ್ನದಿ
ಬಂದು ಹೇಳಿದ ತೆರದೊಳಾದೆನು
ಕಂದ ನಿಮ್ಮಯ ದೋಷಮುಕ್ತನು ನಿಮ್ಮ ದರ್ಶನಕೆ ॥೬೦॥

ನಾನು ಬಂದೆನು ನಿಮಗೆ ತಿಳಿಸಲು
ಜ್ಞಾನ ನಿಧಿಗಳೆ—ಹೊಲವ ನನ್ನದು
ದಾನ ಮಾಳ್ಪೆನು ನಿಮಗೆ ಮೋದದೆ ತೆಗೆದುಕೊಳ್ಳುವದು ।
ತಾನು ಪೇಳೀ ಪರಿಯು ಸ್ವಾಮಿಗೆ
ಜಾಣ ಭಕ್ತನ ದಕ್ಷಿಣೆಯ ಹಣ
ಮೇಣು ಶ್ರೀಫಲ ಪುಷ್ಪಗಳ ಮುಂದಿಟ್ಟು ನಮಿಸಿದನು ॥೬೧॥

ಮರುದಿವಸವಾ ಮರಡಿಮಠದಲಿ
ಗುರುಗಳಪ್ಪಣೆ ಪಡೆದು ಹಲರಿಗೆ
ಹರುಷದಿಂ ಮಿಷ್ಟಾನ್ನ ಭೋಜನವವನು ಹಾಕಿದನು ।
ಎರಗುತ್ತಿದ್ದನು ಸ್ವಾಮಿ ಚರಣಕೆ
ತೆರಪಿರದೆ ಸದ್ಭಕ್ತನಾತನು
ಪರಮ ಸಿದ್ಧರ ಬಳಿಕ ಹರಕೆಯ ಪಡೆದು ತೆರಳಿದನು ॥೬೨॥

ಬಿಡದೆ ಪತಿಪತ್ನಿಯರ ವ್ರತಗಳ
ಕಡು ಸುಖದ ಘನರಾಜ ಮಾರ್ಗವ
ಕಡು ಮಮತೆಯಿಂ ನಡೆಯಿರೆಲ್ಲಾ ಜನರೊಡನೆ ನೀವು ।
ಇಡಿರಿ ಶಿವನಂಘ್ರಿಯೊಳು ಭಕ್ತಿಯ
ದುಡಿಯುವದು ಪರಹಿತದ ಕಾರ್ಯದಿ
ಕೆಡಕು ದಾರಿಯ ತುಳಿಯಬೇಡಿರಿ ಭಕ್ತರೇನೀವು ॥೬೩॥

ಗೌರವಲ್ಲಭ ಲೋಕನಾಯಕ
ಮಾರಸಂಹರ ವಿಶ್ವಪಾಲಕ
ಸಾರಗುಣಮಣಿ ಸದನ ಶಾಂಭವ ಫಾಲಲೋಚನಗೆ ।
ಭೂರಿ ಕರುಣಾ ಹೃದಯ ಶಂಕರ
ತಾರಗಿರಿ ಮಂದಿರಗೆ ಶಿವನಿಗೆ
ಧಾರುಣಿಯ ರಥ ಮಾಡಿಕೊಂಡಿಹ ಹರಗೆ ಜಯಜಯವು ॥೬೪॥

( ಮೂರನೆಯ ಸಂಧಿ ಮುಗಿದುದು )



# ನಾಲ್ಕನೆಯ ಸಂಧಿ

॥ ಸೂಚನೆ ॥ ಬಂಜೆತನವನು ಕಳೆದು ಹಲವರ
ಪುಣ್ಯ ವಡೆದರು ಮಂಜುಲಾಂಗರು
ವಂಜನುಂಡಿಪ ಶಿವನ ಪರತರದಾಸದಾದಿವಳು ।

ಶ್ರೀ ಗಜವದನಗುಹರ ಜನನು
ಭೋಗಿ ಭೂಷನು ವ್ಯೋಮ ಕೇಶನು
ಯೋಗಿಗಳ ಹೃತ್ಸದನಮಣಿದೀಪಕನು ಶಶಿಧರನು ।
ರಾಗದಿಂದಂ ವಿಶ್ವ ಸಲಹುವ
ಸಾಗರ ಸಮ ವಿಶಾಲಕರುಣೆಯ
ನಾಗಜಾ ಪತಿಯಾದ ಸಾಂಬನು ಪೊರೆಯಲೆಮ್ಮನು ॥೧॥

ಬರುತಲಿದ್ದರು ಬಿಡದೆ ವರ್ಷಕೆ
ಗುರುಗಳೀ ಕೆಂಪಯ್ಯ ಸಿದ್ಧರು
ಪರುಷದಿಂ ಚಿಕ್ಕೋಡಿ ಭಾಗಕೆ ಭಿಕ್ಷೆ ಮಾಡಲಿಕೆ ।
ಗುರುಗಳಾಗಲು ಹೋಗುವನಣ
ಮೆರೆವ ಪುಬ್ಬಳ್ಳಿ ಮೂರುಸಾವಿರ
ವರ ಮಠಕೆ ತಾವ್ ಯೋಗಿವರ್ಯರು ಘನಮಹಿಮರಿವರು ॥೨॥

ಆದನಂತರ ಮರಡಿಮಠಕೀ
ಮೋದರೂಪರು ಗುರುವರೇಣ್ಯರು
ಸೋದರರು ಒಡಜನರ ಪರಮೋದಾರ ಹೃದಯಿಗಳು
ವ್ಯಾಧಿಗಳ ಪಲ ಜನರ ಕಳೆದರು
ಬಾಧಿಸುತ್ತಿಹ ಭೂತಗಳ ತ್ವರ
ಹಾದಿ ಹಿಡಿಸುತ್ತಿರಲು ತಮ್ಮಯ ಸಿದ್ಧಿ ಬಲದಿಂದೆ ॥೩॥

ಒಡತನದಿ ಕಡು ಬಳಲುತಿರುವರ
ಒಡತನವ ತಾವ್ ಕಳೆದುಬಿಟ್ಟರು
ಬಿಡದೆ ಮಕ್ಕಳ ಕೊಡುತಲಿದ್ದರು ಬಂಜೆಯವರಿಗೆಲ್ಲಾ ।
ಪಡೆಯದೇ ತಾವ್ ದುಡಿದು ಸಿದ್ಧಿಯ
ಪಡೆದಿರಲು ವರ ಸಿದ್ಧಿ ಶಕ್ತಿಯ
ಮೃಡನು ತಾನಿಟ್ಟಂತೆ ತೋರ್ಪುದು ಯತಿಯಲಾ ಒಲವ ॥೪॥

ಇಲ್ಲವಾದರೆ ಕಾಡಸಿದ್ಧನು
ಮೆಲ್ಲದೆಯರೀ ಯತಿಯ ಮೈಯಲಿ
ನಿಲ್ಲದೇಂ ತಾಂ ಸೇರಿಯಿವರಿಂದೀಥ ಕಾರ್ಯಗಳ ।
ಎಲ್ಲ ಮಾಡಿಸುತ್ತಿದ್ದನೇನೋ
ಇಲ್ಲವೇ ಯತಿಮಣಿಯ ಪೂರ್ವಜ
ಒಲ್ಲಿದನು ಕೆಂಪಯ್ಯಸ್ವಾಮಿಯು ಮತ್ತೆ ಜನಿಸಿದನೋ ॥೫॥

ತಾನು ತನ್ನಯ ವಂಶದವರಲಿ
ಕಾಣರೈ ಎರಡನೆಯ ಕೆಂಪಯ
ಮಾನನಿಧಿ ತಾನಾಗಿ ಬಂದನು ಜನರ ದುಃಖವನ ।
ಮಾಣದೇ ಪರಿಹಾರ ಮಾಡಲು
ಸಾನುರಾಗದೆ ತಾನು ಜನ್ಮಿಸಿ
ದೀನರೈ ನಾವ್ ಬುದ್ಧಿಯಲಿ ನಮಗೇನು ತಿಳಿಯುವದು ॥೬॥

ಆಗಿರಲು ಪನ್ನೆರಡು ವತ್ಸರ
ವಾಗಲಾಗಿರೆ ಮಠಕೆ ಸ್ವಾಮಿಯು
ತ್ಯಾಗಮೂರ್ತಿಗಳಿವರು ಜನಗಳ ದುಃಖಗಳೆಯುವಲಿ ।
ಸಾಗಿಸಿದರುರೆ ಕಾರ್ಯಬಿಡದೆ
ಭೋಗಿ ಭೂಷಣನೊಳಡಗು ವನಕಾ
ರಾಗದಿಂದಂ ಲೋಕಕಲ್ಯಾಣವನೆ ಮಾಡಿದರು ॥೭॥

ಮತ್ತೆ ನಮ್ಮೀ ಪೂಜ್ಯಪಾದರು
ಚಿತ್ತವಿಸಿರೈ ಲೀಲೆಗಳ ಹಾ
ವುತ್ತಮರೆ ನಾವೊರೆಯುವೆವು ಮುಂದೀ ಪುರಾಣದಲಿ ।
ಸತ್ತಮರು ಕೆಂಪಯ್ಯ ಸದ್ಗುರು
ಮುತ್ತಿನೊಲು ಬಲು ಸ್ವಚ್ಛ ಹೃದಯರು
ಕುತ್ತು ದೂರಾಗುವವು ನೆನೆದರೆ ನಾಮವನ್ನವರ ॥೮॥

ಬೇಸರವೇ ಇರಲಿಲ್ಲ ಯತಿಗೀ
ಭೂಪರು ದಿಟ ಮನುಜ ಜಾತಿಗೆ
ಭೂಷರು ಶ್ರೀ ವೀರಶೈವರ ಧರ್ಮಕಿವರು ನಿಜ ।
ಆಸೆಯೇ ಇರಲಿಲ್ಲವಾವದು
ಕುಸುಮಗಳ ತೆರ ಮೃದುಲ ಹೃದಯರು
ಕೂಸುಗಳ ಬಲು ಮಮತೆ ಮಾಡುತಲಿದ್ದರೈ ಇವರು ॥೯॥

ಭಕ್ತಿ ಪಾಪ್ಟಾಪುರದಳೊಬ್ಬಳು
ಭಕ್ತಿಯಿಂದಂ ದಾನಗೈಯಲು
ಶಕ್ತರಾಗಿಪ ಪೂಜ್ಯ ಕೆಂಪಯನವರ ಬಳಿ ಬಂದು ।
ಮುಕ್ತಿಸತಿ ವಲ್ಲಭನೆ ಕೊಡುವೆನು
ಯುಕ್ತವಾಗಿಪ ಹರುಪದಿ ಬಪು
ಯುಕ್ತಿಯಿಂದೆಲ್ಲರನು ಪೊರೆಯುವ ಪ್ರಣತ ಗುರುವರರೇ ॥೧೧॥

ನನ್ನ ಹಣವಿಪುದೇಳು ಸಾವಿರ
ಸನ್ನುತರ ನಾಂ ದಾನ ಮಾಳ್ಪೆನು
ಮನ್ನಿಸೆನ್ನಯ ವಚನ ಕರುಣದೆ ಸ್ವೀಕರಿಸಿರಿದನು ।
ಚೆನ್ನೆಯಾಕೆಯ ಹಣವ ಗುರುಗಳು
ಗನ್ನ ಮಹಿಮರು ತೆಗೆದುಕೊಂಡರು
ಮನ್ನೆಯಾಕೆಯು ಬಸವಲಿಂಗವ ಗಾಣಗಾರತಿಯು ॥೧೮॥

ಗಾಣಗಿತ್ತಿಯು ದಾನ ಮಾಡಿದ
ಮಾನಸಾಗರವಿವರು ಧನವದ
ಕಾಣರೈ ಶ್ರೀ ಕಾಡದೇವರ ಗುಡಿಯ ಬೆಳೆಸುವಲಿ ।
ಸಾನುರಾಗದೆ ವ್ಯಯವ ಗೈದರು
ಮಾಣದೆ ಧನ ವೇಳು ಸಾವಿರ
ಜ್ಞಾಣ ಯತಿಯುಗಳು ಪರಮಭಕ್ತರು ಕಾಡದೇವರರು ॥೧೨॥

ಜಂಗಮರ ವಂಶಾಬ್ಧಿ ಚಂದ್ರರು
ಜಂಗಮರ ಕುಲದೊಳಗೆ ಜನಿತರು
ಜಂಗಮರು ವಿದ್ಯಾ ವಿಭೂಷಿತರಾಗಬೇಕೆಂದು ।
ಅಂಗಜನ ಹಾಗೆಸೆವ ಯತಿಗಳು
ಮಂಗಲರು ಸಲೆ ಬಯಸುತ್ತಿದ್ದರು
ಪಂಗು ದೊರೆದಾ ಅಂಥದಕೆ ಹಣ ವ್ಯಯುಪ ಮಾಡಿದರು ॥೧೩॥

ಎಸೆವ ಮಿಗೆ ನಿಡಸೋಸಿ ಕ್ಷೇತ್ರದೊ
ಳೆಸೆವ ದುರದುಂಡೀಶ್ವರಸಿದ್ಧನ
ಯಶವನಾಂತಿಪ ಜಗದಗುರುಗಳ ಘನಮಠಕ್ಕೊಮ್ಮೆ ।
ಮಿಸುನಿಯಂತಪ ಗುಣದಯತಿಗಳು
ಶಶಿಯಸನ್ನಿಭ ವದನಯುಕ್ತರು
ಕುಸುಮ ಕೋಮಲ ಹೃದಯಿಗಳು ಬಂದು ಬಿಟ್ಟಿರಲು ॥೧೪॥

ಬಂದಿರಲು ನಿಡಸೋಸಿ ಶ್ರೀಗಳ
ನಂದದಿಂ ಭಿನ್ನಪವ ಮನ್ನಿಸಿ
ಬಂದು ಕೂಡಿರೆ ಹಲವು ಜನಗಳು ಮಠದೊಳಾವಾಗೆ ।
ತಂದೆಯೀ ಕೆಂಪಯ್ಯಯತಿಪದ
ಬಂದನೈ ದರ್ಶನಕೆ ವಿನಯದೆ
ಮಂದಹಾಸಿತ ಮುಖದೆ ಕಣಗಲೆ ಧನಿಕ ಬಾಬಣನು ॥೧೫॥

ಇಟ್ಟು ನಾರೀಕೇಳಗಳ ದ್ವಯ
ವಿಟ್ಟು ಚರಣದ ಮೇಲೆ ಮಸ್ತಕ
ಹುಟ್ಟಿಮನದೊಳು ಭಕ್ತಿ ಬಹುವಂದನೆಯ ಮಾಡಿದನು ।
ಮೆಟ್ಟಿರುವ ಷಡ್ರಿಪುಗಳನ್ನುರೆ
ಗಟ್ಟಿಗರೆ ಘನಮಹಿಮರೇ ತಾವ್
ಹೊಟ್ಟೆಯಲಿ ಸಂತಾನವಿಲ್ಲವು ಕೃಪೆಯ ಮಾಡುವುದು ॥೧೬॥

ಹೇಳಿದರು ತರುವಾಯ ಯತಿಗಳು
ಕೇಳು ಭಕ್ತನೆ ಈ ಮಠದೊಳಾ
ಮೇಲು ಗುರುಗಳಿಗಿಹುದು ಹರಕೆಯ ನೀಯುವಧಿಕಾರ ।
ತಾಳಿ ನಂಬಿಕೆ ಹರಕೆಯಂ ಪಡೆ
ಕಾಲಕಾಲನ ರೂಪರವರಿಂ
ಬಾಲ ಬಾಲಿಕೆಯವರು ಜನಿಪರು ಹೆದರದಿರುನೀನು ॥೧೭॥

ಯತಿಗಳಪ್ಪಣೆಯಂತೆ ಕೂಡಲೆ
ಚತುರ ಬಾಬಣ ಸೆಟ್ಟಿಗೈದನು
ಮತಿಯು ಗೈಯುತೆ ಶ್ರೀಫಲಂಗಳ ದ್ವಯವನಾವಾಗೆ ।
ಅತಿಮುದದೆ ತಾನಿಟ್ಟು ಮುಂಗಡೆ
ಕಥಿಸಿದನು ಸಂತತಿಯ ಕೊಡಿರೈ
ಸ್ಮಿತವ ಗೆಯ್ಯುತೆ ಪರಕೆ ಕೊಟ್ಟರು ಸಂಸತಿಯು ನಿನಗೆ ॥೧೮॥

ಆಗುವುದು ಜವ ಧೈರ್ಯಬಿಡದಿರು
ಯೋಗಿವರರ ದುರದುಂಡಿ ಸಿದ್ಧರ
ಮೇಲೆ ನಂಬಿಗೆಯಿರಲಿನಿನ್ನದು ನಿನ್ನ ಕಾಮುಸಿಯು ।
ಬೇಗನೇ ನೆರವೇರಿ ಬಿಡುವುದು
ಹೀಗುಸುರಿ ತಾವ್ ಶ್ರೀಫಲಂಗಳ
ತ್ಯಾಗಮೂರ್ತಿಗಳವರು ಹಾಕಿದರವನ ಪದರಿನಲಿ ॥೧೯॥

ಉಭಯ ಸನ್ಮತ ಯೋಗಿವರ್ಯರ
ಶುಭವಚನದೊಲು ಮಕ್ಕಳಾದವು
ಪ್ರಭಲ ಭಕ್ತಿಯ ಯೋಗದಿಂ ಬಾಬಣ್ಣಕಣಗಲೆಗೆ ।
ಅಭಯ ಪುತ್ಥಳಿಯಾದ ಕೆಂಪಯ
ಸುಬಲಸಿದ್ಧರು ಬಂದರಲ್ಲಿಂ
ಪ್ರಭುವಿನನು ಸ್ಮರಿಸುತ್ತೆ ತಮ್ಮಯ ಮರಡಿ ಘನಮಠಕೆ ॥೨೦॥

ಕಳೆಯೆ ಕೆಲಮಾಸಗಳು ಬಂದರು
ಬಲುಲ್ಲಾದದೆ ಚಿಕ್ಕೋಡಿಯೂರಿಗೆ
ತಿಳಿಮನಸಿನೀ ಸಿದ್ಧ ಪುರುಷರು ಸ್ವಾಮಿ ಕೆಂಪಯರು ।
ಕಳೆದು ವಿಧ ವಿಧ ದುಃಖ. ಜನಗಳ
ಗಳಿಸಿದರು ಬಹು ಕೀರ್ತಿ ವೈಭವ
ಇಳೆಯ ಮೇಲಿನ ಸಾಂಬರಾಗಿಹ ಸ್ವಾಮಿಮಣಿಯಿವರು ॥೨೧॥

ಮಾಡಿ ಚಿಕ್ಕೋಡಿಯಲಿ ಭಿಕ್ಷೆಯ
ಮಾಡಲಿಕೆಗಮಿಸಿದರು ತದುಪರ
ನಾಡಿನಲಿ ಕೀರ್ತಿಸಿದ ಯತಿಗಳು ಹಳ್ಳಿಗಳಿಗೆಲ್ಲಾ ।
ಕಾಡುತಿಹ ಭೂತಗಳ ನೋಡಿಸಿ
ಕಾಡುತಿಹ ಬೇನೆಗಳ ಕಳೆಯುತೆ
ನಾಡೆ ಪರಹಿತ ಗೆಯ್ಯುವಲ್ಲಿಯೇ ಹೊತ್ತುಹಾಕಿದರು ॥೨೨॥

ಹರುಷದಿಂ ಹಣವನ್ನು ಕೊಟ್ಟರು
ಹಿರಿಯ ಸ್ವಾಮಿಗೆ ಹಳ್ಳಿ ಮಂದಿಯು
ಗುರುಗಳಿದ್ದರು ನಾಲ್ಕು ತಿಂಗಳು ತಾವು ಹಳ್ಳಿಯೊಳು ।
ದೊರೆದವ್ಯ ಇಪ್ಪತ್ತು ಸಾವಿರ
ವರ ಯತಿಗೆ ರೂಪಾಯಿ ದಕ್ಷಿಣೆ
ಹೊರಟು ಬಂದರು ತಮ್ಮ ಮರಡಿಯ ಮಠಕೆ ಒಳಿಕಿವರು ॥೨೩॥

ಆಗ ಕೊಡುತ್ತಿತ್ತು ಕೇಳ್ವದು
ತ್ಯಾಗಿಗಳಿಗೀ ಪ್ರತಿವರುಷವೂ
ಹಾಗೆಯೇ ಇಪ್ಪತ್ತು ಸಾವಿರ ಹಣವು ತಪ್ಪದಲೇ ।
ಹೋಗುತ್ತಿದ್ದರೂ ಪ್ರತಿವರುಷವೂ
ಹೋಗುತಿರೆ ಚಿಕ್ಕೋಡಿ ಕಡೆಗಾ
ಹೋಗುತ್ತಿದ್ದರು ಹೋಗುವನಕಾ ತಾವು ಹುಬ್ಬಳ್ಳಿಗೆ ॥೨೪॥

ಒಂದು ಹಳ್ಳಿಯ ಜನಗಳಾರೂ
ಬಂದ ಭಿಕ್ಷೆಗೆ ಸ್ವಾಮಿ ಜನರಿಗೆ
ಬಂಧುರರು ಹಣ ನೀಡದಿದ್ದರು ತಾವು ಹೆಜ್ಜೆಗೆ ।
ಮುಂದೆ ಹೋದರು ಸ್ವಾಮಿವರೀ
ನಂದದಿಂದಾ ಹಳ್ಳಿಯೂರಿಗೆ
ಕುಂದಿರದ ವರಚರಿತರಿವರಿಗೆ ಹಳ್ಳಿಯವರವರೇ ॥೨೫॥

ಎರಡುಸಾವಿರ ಹಣವ ಕೊಟ್ಟರು
ಹರುಷದಿಂ ಪ್ರತಿ ವರ್ಷ ಬರಲಿಕೆ
ಸರುವರೂ ಬಹು ಭಕ್ತಿಯಿಂದಂಗುರುವಿಗರುಹಿದರು ।
ಮೆರೆವ ಚಂದ್ರನ ಬೆಳಕಿರುವದೇ
ಇರುವವಿನಿತೋ ಚಿಕ್ಕೆಗಳಿಗಾ
ಹರನ ಯೋಗ್ಯತೆ ಬರುವದೇ ತಾನುಳಿದ ದೇವರಿಗೆ ॥೧೩॥

ಕುದುರೆ ಯೇರಲು ನಿಪುಣರಿದ್ದರು
ಸುಧವಲಯಶೋಭೂಷ ಯತಿಗಳು
ಕುದುರೆಯ ಪರೀಕ್ಷೆಯಲಿ ಬಲ್ಲವರಿದ್ದರೈ ಮತ್ತೆ ।
ಕುದುರೆಯಿದ್ದಿತು ದುರ್ಗುಣದಬಹು
ಸದಯರಾಗಿಹ ಕರ್ತೃಯವರಲಿ
ವಿಧಿವಶದೆ ತಾಂ ಧನಿಕರಿವರಲಿ ಬಾಗೆವಾಡಿಯಲಿ ॥೧೪॥

ಏರುಗೊಡುತ್ತಿರಲಿಲ್ಲ ಯಾರ
ನ್ನೇರುತ್ತಿದ್ದನು ನೋಕರನುಗಡ
ಭೂರಿಧೀರನು ಬೇಡರವನಾ ಕುದುರೆಯನು ತಾನು ।
ವೀರಯತಿಗಳು ಕುದುರೆಯನೇರಲು
ಶೂರರಿಹನೆಂಬುದನಾಲಿಸಿ
ತೋರ ಹಯವನು ಕಟ್ಟಿ ಹೋದರು ಮಠಡಿಮಠದಲ್ಲಿ ॥೧೫॥

ಏರಿ ಕುದುರೆಯ ನದನು ಯತಿಗಳು
ನೀರ ಸುರಿವೋಲಿಪರ ಮೈಯಿಂ
ದೂರ ತನಕಾ ಓಡಿಸುತ್ತಲೆ ಹೋಗಿ ಬರುತಿರಲು ।
ಏರುವಲಿ ಕುದುರೆಯನು ಗುರುಗಳು
ಭೂರಿ ತಾವ್ ಸಂಪ್ರೀತಿಯುಕ್ತರು
ಕಾರುಣಿಕರಲಿ ಮಮತೆಯಿದ್ದಿತು ಪಶುಗಳಲ್ಲಧಿಕ ॥೧೬॥

ಭೋಗಿ ಭೂಷನ ಪರಮಭಕ್ತರು
ತ್ಯಾಗಿಗಳು ಕೆಂಪಯ್ಯನವರೀ
ಹೋಗಿರಲು ಭಿಕ್ಷೆಯನು ಮಾಡಲಿ ಕಂಕಲಿಗೆ ತಾವು ।
ಆಗಳಲ್ಲಿಯ ದೊರೆಗಳವಗದು
ಹೋಗುತ್ತಿದ್ದಿತು ರಥವು ಪಥದಿಂ
ಹೋಗುತ್ತಿದ್ದರು ಸಿದ್ಧರೂ ತಾವದುಪೆ ಪಥದಿಂದೆ ॥೨೦॥

ಇದ್ದರಾಗಳು ಯತಿಯ ಜತೆಯಲಿ
ಶುದ್ಧ ಮನಸಿನ ಕೆಲವು ಭಕ್ತರು
ಬುಧಿವಂತನು ರಥವ ಸಾಗಿಪ ದೊರೆಯ ಸೇವಕನು ।
ಬಿದ್ದನೈ ತಾಂ ಬಂದು ಪಾದಕೆ
ಸಿದ್ಧ ಪುರುಷರು ಗುರುವರೇಣ್ಯರು
ಮುದ್ದಿನಿಂದಂ ಹರಸಿಯವನಿಗೆ ಹೇಳಿದರು ತಾವು ॥೨೧॥

ಅತಿಸುಲಕ್ಷಣವುಳ್ಳವುಗಳೀ
ರಥಕೆ ಹೂಡಿದ ಕುದುರೆಯೆರಡೂ
ಪೃಥುಲವಾಗಿವೆ ಚೆನ್ನವಾಗಿವೆ ನೋಡಿನನಗಾಯ್ತು ।
ಅತಿಮುದವು ತಾಂ ಕೇಳಿಕೊಳ್ವದು
ರಥದೊಳಗೆ ದೇಸಾಯಿ ಇರುತಿರೆ
ಕಥಿಸಿದನು ತಾಂ ಹೋಗಿ ಸೇವಕ ತಮ್ಮ ದೊರೆಗಳಿಗೆ ॥೨೨॥

ಇರುವದಾ ಅಂಕಲಿಯ ಗ್ರಾಮವು
ಮೆರೆವ ಚಿಕ್ಕೋಡಿ ಸಮೀಪವು
ದೊರೆಗಳವರು ಮರಾಠಿಯರು ದೇಸಾಯಿಗಳುತಾವು ।
ಇರುವದುಪನಾಮವು ಶಿತೋಳೆ
ಸರುವರಿಗೆ ಪ್ರೀತಿಯರಾಗಿರುವರುರು
ಗುರುಗಳಲಿ ಮೇಣ್ ಸಾಧುಜನರಲಿ ಭಕ್ತಿಯುಳ್ಳವರು ॥೨೩॥

ಕೇಳಿಯಾಸೇವಕನ ಮಾತನು
ತಾಳಿದರು ಸಂತೋಷ ದೊರೆಗಳು
ಹೇಳಿದರು ಸಾರಿಥಿಗನಂತರ ಕುದುರೆಗಳನೆರಡು ।
ಶೀಲಭೂಷಿತ ಸಿದ್ಧ ಪುರುಷಗೆ
ವ್ಯಾಲ ಭೂಷನ ಪರಮ ಭಕ್ತಗೆ
ತಾಳಿ ಸಂತೋಷವನು ಕೊಡುವೆನು ಹೇಳಿಬಾ ಹೋಗು ॥೩೪॥

ಮತ್ತೆ ದೇಸಾಯಿಗಳು ಪೇಳ್ದರು
ಪತ್ತಮರಿಗಾ ಹಯಗಳಲ್ಲದೆ
ಮತ್ತೆ ರಥ ಬೇಕಾದರವರಿಗೆ ಬಹಳ ಹರ್ಷದಲಿ ।
ಇತ್ತುಬಿಡುವೆನು ಯೋಗಪಾತ್ರಕೆ
ಹತ್ತುವದು ಬಹು ಪುಣ್ಯವದರಿಂ
ಬಿತ್ತರದ ನಿಧಿಯವರು ತದುಪರಿಮೌನದಾಳಿದರು ॥೩೫॥

ಬಂದು ಸಾರಥಿ ಸ್ವಾಮಿಗಳಿಗಭಿ
ವಂದಿಸಿದನೈ ಬಳಿಕ ದೊರೆಗಳು
ನಂದದಿಂ ದೊರೆಗಳು ಹೇಳಿರುವ ಮಾತುಗಳೆಲ್ಲ ತಿಳಿಸಿದನು ।
ಹೊಂದಿದರು ಸಂತೋಷ ಸಿದ್ಧರು
ಬಂಧುರರು ಹೇಳಿದ ನಂತರ
ಹೋದಲೈ ದೇಸಾಯಿಗಳು ಬಹು ಸೌಖ್ಯಶಾಂತಿಗಳ ॥೩೬॥

ನುಡಿದು ಪರಿಯೀ ಸ್ವಾಮಿಗಳು ತಾವ್
ಕಡುಮುದದೆ ಸೇವಕನಿಗೊರೆದರು
ಕೊಡಲಿ ದೇಸಾಯಿಗಳು ದ್ವಯಹಯ ರಥವು ಜಾಡೆಂದು ।
ನುಡಿದವೋಲ್ ಕೆಂಪಯ್ಯಗುರುಗಳು
ಗಡನೆ ಹಯಗಳ ಕೊಟ್ಟು ಹೋದರು
ದೃಢ ಮನದ ದೇಸಾಯಿಗಳು ಅಂಕಲಿಯ ದೊರೆಯವರು ॥೩೭॥

ರಥವು ಬೇಡೆಂದುದಕೆ ಯತಿಗಳು
ಸ್ತುತಿಸಿದ್ದರು ತಾವವರ ದೊರೆಗಳು
ಯತಿಗಳವರಾ ತ್ಯಾಗಬುದ್ಧಿಯ ಹೃದಯಪೂರ್ವಕವು ।
ಚತುರ ಭಕ್ತರೆ ನೀವು ಕೇಳಿರಿ
ಪೃಥುಲವಾದಾ ಕುದುರೆಯಿದೂದು
ರಥಿಸುವರು ಪ್ರತ್ಯೇಕ ತುರುಗಳು ದ್ವಯಸಪಪ್ರದವು ॥೩೮॥

ಹಿಡಿದುಕೊಂಡಿರೆ ಗೇಡು ಭೂತವು
ಬಿಡದೆ ಪೀಡಿಸುತಿತ್ತು ಬಹುದಿನ
ನಡೆಯದುವು ಕಿರುಚಿಟ್ಟಿದೊಳು ಬ್ರಾಹ್ಮಣರ ತರುಣಿಯನು ।
ನಡೆಯಲಿಲ್ಲವು ಮಂತ್ರಗಾರರು
ಬಿಡದೆ ಮಾಡಿದ ಯತ್ನವಾವವು
ಕಡಗೆ ಸಿದ್ಧರ ಬಳಿಗೆ ಬಂದರು ಸ್ತ್ರೀಯಕರಕೊಂಡು ॥೩೯॥

ಯರಗಿ ಯತಿಗಳ ಚರಣಕಮಲಕೆ
ಸರುವ ವೃತ್ತವನರುಹಿಬಿಟ್ಟರು
ಗುರುಗಳಿಗೆ ಬಹು ವಿನಯದಿಂದಂ ಬೇಡಿದರು ತಾವು ।
ಪರಮ ಸಿದ್ಧರೆ ದೂರಮಾಡಿರಿ
ಕರುಣದಿಂ ಪೆಣ್ಮಗಳ ಪೀಡೆಯ
ಧರೆಯಮೇಲಣ ಶಿವನು ನೀವೇ ದಯವಮಾಡುವುದು ॥೪೦॥

ಹೇಳಿದರು ಕೆಂಪಯ್ಯಯತಿಗಳು
ತಾಳಿ ವಿಶ್ವಾಸವನು ಬರಲೀ
ಬಾಲೆತಾಂ ಶ್ರೀ ಕಾಡದೇವರ ದರ್ಶನಕ್ಕಿಲ್ಲಿ ।
ಕೇಳಿರೈ ಐಸೋಮವಾರವು
ಶೀಲವತಿಯೀ ತೀರ್ಥ ಸೇವಿಸ
ನೀಲಕಂಠನ ನಾಮ ಭಜಿಸುತೆ ಹೋಗಲೈಮನೆಗೆ ॥೪೧॥

ಬರಲಿಕೊಪ್ಪದು ಭೂತವಿಲ್ಲಿಗೆ
ತೆರಪಿರದೆ ಪೀಡಿಪ್ಪದುನಿಮ್ಮನು
ಕರೆದುಕೊಂಡೇ ಹೆಣ್ಣುಮಗಳನು ಬನ್ನಿರೈನೀವು ।
ಪರೆಯದಿಪುದಾ ಭೂತ ಕೇಳಿರಿ
ಪರಮನಾಗಿಪ ಕಾಡಸಿದ್ಧನ
ಕರುಣದಿಂದದು ಹೋಗಿಬಿಡುವುದು ಹೆದರದಿರಿನೀವು ॥೪೨॥

ಸ್ವಾಮಿಗಳು ಹೇಳಿರುವ ತೆರದೊಳು
ನೇಮದಿಂದ್ಯೆ ಸೋಮವಾರವು
ಕೋಮಲೆಯನಾ ಕರೆದುತಂದರು ದೇವದರ್ಶನಕೆ ।
ಭೀಮವಾಗಿಪ ಪುರುಷಭೂತವು
ಕಾಮಿನಿಯನಾ ಬಿಟ್ಟುಹೋಯಿತು
ವ್ಯೋಮಕೇಶನ ಭಕ್ತರತ್ನರ ವಚನ ತಪ್ಪುವದೆ ॥೪೩॥

ಆಗಲಿಲ್ಲವು ಸುತರುವಯದ
ಲ್ಲಾಗೆ ಚಿಂತಾನಲದಿ ಬಿದ್ದನು
ಸಾಗಿರುವ ಸನ್ಮಾರ್ಗದಿಂ ಕಾಡಪ್ಪನೆಂಬವನು ।
ಯೋಗಿಗಳಿಗೀಮಾತು ಪೇಳ್ದನು
ತ್ಯಾಗವೀರರೆ ಕೊಡಿರಿ ಮಕ್ಕಳ
ಬೇಗ ನಮ್ಮಯ ಚಿಂತೆಗಳೆಯಿರಿ ಭೂಶಿನರು ನೀವು ॥೪೪॥

ಇದ್ದನೈ ಬಡಕುಂದ್ರಿ ಗ್ರಾಮದಿ
ಮುದ್ದಿನಿಂ ಸತಿಯೊಡನೆ ನಡೆಯು
ತ್ತಿದ್ದ ಲಿಂಗಾಯತರ ಧರ್ಮದಿ ಜನಿತಕಾಡಪನು ।
ಬುದ್ಧಿಗಳು ಕೆಂಪಯ್ಯಗುರುಗಳು
ಸಿದ್ಧಪುರುಷರು ಮೃದುಲಹೃದಯರು
ಗೆದ್ದವರು ಮೋಹವನು ಪೇಳ್ದರು ಭಕ್ತಕಾಡಪಗೆ ॥೪೫॥

ಬಿಡದೆ ಪತಿಪತ್ನಿಯರು ಬನ್ನಿರಿ
ಗಡ ಅಮವಾಸೆಯ ದಿನವುಮಿಲ್ಲಿಗೆ
ಕಡು ಭಕುತಿಯಿಂ ಕಾಡದೇವರ ದರ್ಶನಕೆವರ್ಷ ।
ನಡೆದುಕೊಂಡರೆ ಹಾಗೆತದುಪರಿ
ಪಡೆದುಕೊಂಡಿರಿ ನೀವು ಮಕ್ಕಳ
ನ್ನಡೆದರದರೊಲು ಸತಿಪತಿಗಳಾಬಳಿಕ ಯತಿವರರು ॥೪೭॥

ಹೇಳಿದಂದದಿ ಮಕ್ಕಳಾದವು
ತಾಳಿ ಸಂತೋಷವನು ಬಂದರು
ಶೀಲಯುತರಾ ಗಂಡಹೆಂಡತಿ ಕೂಸನೆತಿಕೊಂಡು ।
ಕಾಲುಬಿದ್ದರು ಸ್ವಾಮಿವರ್ಯರ
ಕಾಲುಗಳಮೇಲಿಟ್ಟು ಕೂಸನ
ಹ್ಹೇಳಿದೊಲು ನೀವಾಯ್ತು ಸಂತತಿಯಿದುವುಗುರುವರರೆ ॥೪೭॥

ಹೇಳಿಯೀಪರಿ ದಕ್ಷಿಣೆಯಹಣ
ತಾಳಿಮೋದವ ಕೊಟ್ಟು ಗುರುವಿಗೆ
ಕೇಳಿರೈ ಗಮಿಸಿದರು ನಂತರ ತಮ್ಮ ಗ್ರಾಮಕ್ಕೆ ।
ವ್ಯಾಲಭೂಷನ ಭಕ್ತಮಣಿಗಳು
ಹೇಳಿದಂದದಿ ಮತ್ತೆ ಪಡೆದರು
ಶೀಲವಂತರು ವಿನಯಿಗಳು ಒಡಕುಂದ್ರಿಯವರವರು ॥೪೮॥

ಮತ್ತೆ ಮುಂದಿನ ಸಂಧಿಯೊಳಗಾ
ಉತ್ತಮರ ಲೀಲೆಗಳ ಪೇಳ್ವೆವು
ಚಿತ್ತಸರೈ ಶ್ರೋತ್ರಜನರೇ ಮುದದೆ ಕೇಳುವುದು ।
ಹೆತ್ತವರನೀ ಯೋಗಿರಾಜರ
ಸತ್ತಮರು ಬಹು ಧನ್ಯರೈನಿಜ
ಗೊತ್ತಿಹುದೆ ಸಿದ್ದಯ್ಯ ಸ್ವಾಮಿಯ ಪಾರ್ವತಿದೇವಿ ॥೪೯॥

ಭಕ್ತವತ್ಸಲ ಪಾರ್ವತೀಶ್ವರ
ಮುಕ್ತಿಸತಿ ಸೀಮಂತ ಮಣಿಶಿವ
ಶುಕ್ರಿಜದ ಪರಿಥಮ್ಮೃತನುವಿನ ಪಂಚಮುಖದವಗೆ
ಯುಕ್ತಿಸಾಗರ ಮೂಜಗದಪಿತ
ಶಕ್ತನಾಗಿರುವ ವಿಶ್ವದಿ
ರಕ್ತದೊಲು ಕೆಂಪಾದ ಜಡೆಯಾಮ್ಮೃಡಗೆ ಜಯವಿರಲಿ ॥೫೦॥

ನಾಲ್ಕನೆಯ ಸಂಧಿ ಮುಗಿದುದು



# ಐದನೆಯ ಸಂಧಿ

ಸೂಚನೆ:– ಬೋಧಗೈದರು ಲಿಂಗಯುತರಿಗೆ
ಮೋದದಿಂ ಕೆಂಪಯ್ಯಸಿದ್ಧರು
ಹಾದಿ ಬಿಡದೇ ಹೋಗುವದುಪೂರ್ವಜರನೀವೇದು ।

ಶ್ರೀ ಸುಧಾಕರನು ಶಂಭುವು
ವಾಸಿಸುವ ತಾಂ ತಾರಗಿರಿಯೊಳು
ಲೇಸನೇ ಬಲು ಭಕ್ತ ಜನಗಳಗೆಯ್ವ ಶಂಕರನು ।
ವಾಸವಾನತ ಪಾದಕಮಲನು
ಪೋಷಿಸುವ ಮೂಲೋಕ ಸರ್ವವ
ಮಾಕ್ಷಕನ ಏರಿಪನ ಜನಕನ ಪಾಲಿಸಲಿನಮ್ಮ ॥೧॥

ಇರುವವೈ ಮೇಣಾರು ಸ್ಥಲಗಳು
ಹಿರಿಯುವವು ಸೋಪಾನವಾಗಿವೆ
ಪರನೊಳಗೆ ಜೀವವನ್ನು ಕಡೆಯಲ್ಲಿ ಬೆರೆಸಲಿಕ್ಕಿಹವು ।
ಒರೆಯುವದು ಶಿವಧರ್ಮ ನಮ್ಮದು
ಪರನು ಜೀವವು ಭಿನ್ನವಾಗಿವೆ
ಪರನೊಳಗೆ ಜೀವವನ್ನು ಕೊನೆಯಲಿ ಬೆರೆಸುರುತಿಹುದು ॥೧೮॥

ಪಾರಮಾರ್ಥಿಕ ಮತವಿರುವದೀ
ವೀರಶೈವರ ಶ್ರೇಷ್ಠ ಧರ್ಮದ
ಸಾರ ಶಕ್ತಿ ವಿಶಿಷ್ಟವಾದ ದ್ವೈತವಾದುದು ।
ಚಾರು ಶಿವ ಧರ್ಮಿಗಳೆ ಕೇಳಿರಿ
ಬೇರೆ ಮತಮೇಣ್ ಧರ್ಮಬೇರೆ
ವೀರಶೈವ ಸುಧರ್ಮ ನಮ್ಮದು ಸರ್ವವಿಷಯದಲ್ಲಿ ॥೧೯॥

ಆಗಿರುವದು ಸ್ವತಂತ್ರವದರಿಂ
ನಾಗಭೂಷಣ ಭಕ್ತ ಜನರೇ
ಹೇಗಿಹವೊ ಬ್ರಾಹ್ಮಣರ ಜೈನರ ಧರ್ಮವದರಂತೆ ।
ತ್ಯಾಗಿಗಳೆ ಲಿಂಗಾಯತರದಿದು
ಹಾಗೆಯೇ ತಾಂ ಧರ್ಮವಾಗಿದೆ
ಹಾಗೆ ಹೇಳಿರಿ ಲಿಂಗವಂತರ ಧರ್ಮವೆಂದಿದನು ॥೨೦॥

ಇರುವವೀ ಧರ್ಮಕ್ಕೆ ಮತ್ತೂ
ನೆರೆ ಹೆಸರುಗಳು ಕೇಳಿಕೊಳ್ಳಿರಿ
ಹರುಷದಿಂ ನೀವ್ ವೀರಶೈವವು ಶಿವಧರ್ಮವೆಂದು ।
ಪರಮಧರ್ಮವು ಜಗದೊಳಿದುವೆ
ತೊರೆದಿಹುದು ಸೂತಕಗಳೆಲ್ಲವ
ಸರ್ವರನು ಸಮನಾಗಿ ಗಣಿಪುದು ಸತ್ಯಧರ್ಮವಿದು ॥೨೧॥

ತಮ್ಮಯುನ್ನತಿ ಮಾಡಿಕೊಳ್ಳಲು
ನಮ್ಮ ಧರ್ಮದಿ ಸರಳ ಪಥವಿರೆ
ನಿಮ್ಮಗಳಿಗೆಲ್ಲರಿಗೆ ಬರುವದು ಬೆರೆಯ ಶಿವನಲ್ಲಿ ।
ಸುಮ್ಮನೇ ನೀವು ಹೊತ್ತುಗಳೆಯದೆ
ನಿಮ್ಮ ಧರ್ಮವನರಿತು ನಡೆಯಿರಿ
ನಿಮ್ಮ ಜನ್ಮವ ಸಫಲಗೊಳಿಸಿರಿ ಪರಮಜನ್ಮವಿದು ॥೨೨॥

ಶಿವನೊಳಗೆ ಜೀವವನು ಬೆರೆಸಲು
ತವೆ ಬರುವರಿಗೆ ನಾಮ ಲಭಿಪುದು
ಭುವನದೊಳು ಶಿವಯೋಗಿಯೆಂಬುವ ತಿಳಿದುಕೊಳ್ಳುವುದು ।
ಶಿವನ ಭಕ್ತರೆ ಅಂಥ ಸ್ಥಿತಿಯನು
ಶಿವನ ಧರ್ಮಿಗಳೆಲ್ಲ ಜನರಿಗೆ
ಭುವನದೊಳಗೀ ಪಡೆಯಲಿಕ್ಕಧಿಕಾರ ತಾನಿಹುದು ॥೨೩॥

ನಾನು ಶಿವನಾಗಿರುವನೆಂಬುವ
ಜ್ಞಾನದನುಭವಕ್ಕೆನ್ನುತಿರುವರು
ಜ್ಞಾನಿ ಜನರು ಶಿವಾನುಭವವೆಂದದಕೆ ಕೇಳಿದಿರಾ ।
ಜಾಣರೇ ನೀವಂಥ ಸ್ಥಿತಿಯನು
ಮಾಣದೇ ಸಲೆ ಪಡೆದುಕೊಳ್ಳಿರಿ
ಹೀನದೆಸೆಯೊಳು ಗುಳಿಯ ಬೇಡಿರಿ ಧರ್ಮ ಬಂಧುಗಳೆ ॥೨೪॥

ಭೋಗಿಪರು ಸುಖದುಃಖವೆರಡನು
ಭೋಗಿಭೂಷನ ಲೋಕದಲೀ
ಸಾಗರವನೀ ಭವದ ದಾಂಟುವ ಸಮಯದಲಿ ನರರು ।
ಹೋಗುವದು ಹೆಚ್ಚಾಗಿ ದುಃಖದೊ-
ಳೀಗಭೀರ ಭವದೊಳಗಾಯುವು
ಹೇಗಿಹುದು ತಾಂ ಮೃತ್ಯುಲೋಕದ ಸ್ಥಿತಿಯ ನಿಶ್ಚಲವು ॥೨೫॥

ತೊರೆದು ನರಜನ್ಮವನು ಜಾಣರೆ
ಸ್ಥಿರವಿರುವ ಸುಖ ಭೋಗಿಸುವದಕೆ
ಪರನೊಳಗೆ ನೀವ್ ಕೂಡಿ ಪರನೇ ಆಗಿ ಹೋಗುವದು ।
ಪರುಷವಡೆವಿರಿ ಸಾಟಿಯಿಲ್ಲದ
ನರರ ಲೋಕದಿ ದೊರೆಯಲಾರದ
ಹಿರಿಯ ನೃಪರಿಗೆ ಸಹಿತ ಪಂತರವಾದ ಸೌಖ್ಯವದು ॥೨೬॥

ಬೆರೆವ ಪರನೊಳು ಸುಲಭ ಮಾರ್ಗವ
ಕರವಿಡಿದು ತೋರಿಸುವುದೆಮ್ಮಯ
ಪರಮ ಲಿಂಗಾಯತರ ಧರ್ಮವು ಸರ್ವರಿಗೆ ತಾನು ।
ಅರಿತು ನಡೆಯಿರಿ ಧರ್ಮದೊಲು ನೀವ್
ಪರಮ ಗುರುಬಸವಾದಿ ಮಹಿಮರು
ಪರನೊಳಗೆ ಸಲೆ ಕೂಡಿ ಸಮರಸವಾಗಿ ಹೋಗಿಹರು ॥೨೭॥

ಬೆರೆದು ಹೋದರು ವೀರಶೈವರು
ಪರನೊಳಗೆ ಬಹು ಸಂಖ್ಯೆ ಜನಗಳು
ಧರೆಯೊಳೆಮ್ಮಯ ಶ್ರೇಷ್ಠ ಧರ್ಮದ ಹಾಗೆ ನಡೆದವರು ।
ಸುರುತರುವಿನೆಡೆಯಲ್ಲಿ ಕುಳಿತಿಹ
ನರನು ತಾನುಪವಾಸವಿರುವೊಲು
ಹಿರಿಯ ಧರ್ಮದ ಲಾಭವಡೆಯದೆ ದುಃಖಭೋಗಿಪಿರಿ ॥೨೮॥

ಸಾಗರದಿ ಸೇರಿರುವ ನದಿಗಳು
ಸಾಗರವೆ ತಾವಾಗುವಂದದಿ
ಹೋಗಿ ಜೀವವು ಕೂಡಿ ಶಿವನೊಳು ಶಿವನೆ ಆಗುವುದು ।
ಸಾಗರದಿ ಕೂಡಿರುವ ನದಿಗಳು
ಹೇಗೆ ಬಾರವೊ ಮರಳಿಯದರೊಲು
ಹೋಗಿ ಕೂಡಿದ ಜೀವ ಶಿವನೊಳು ತಿರುಗದೆಂದೆಂದೂ ॥೨೯॥

ತಮ್ಮಯುನ್ನತಿ ಮಾಡಿಕೊಳ್ಳಲು
ನಮ್ಮ ಧರ್ಮದಿ ಸರಳ ಪಥವಿರೆ
ನಿಮ್ಮಗಳಿಗೆಲ್ಲರಿಗೆ ಬರುವದು ಬೆರೆಯ ಶಿವನಲ್ಲಿ ।
ಸುಮ್ಮನೇ ನೀವು ಹೊತ್ತುಗಳೆಯದೆ
ನಿಮ್ಮ ಧರ್ಮವನರಿತು ನಡೆಯಿರಿ
ನಿಮ್ಮ ಜನ್ಮವ ಸಫಲಗೊಳಿಸಿರಿ ಪರಮಜನ್ಮವಿದು ॥೨೨॥

ಶಿವನೊಳಗೆ ಜೀವವನು ಬೆರೆಸಲು
ತವೆ ಬರುವರಿಗೆ ನಾಮ ಲಭಿಪುದು
ಭುವನದೊಳು ಶಿವಯೋಗಿಯೆಂಬುವ ತಿಳಿದುಕೊಳ್ಳುವುದು ।
ಶಿವನ ಭಕ್ತರೆ ಅಂಥ ಸ್ಥಿತಿಯನು
ಶಿವನ ಧರ್ಮಿಗಳೆಲ್ಲ ಜನರಿಗೆ
ಭುವನದೊಳಗೀ ಪಡೆಯಲಿಕ್ಕಧಿಕಾರ ತಾನಿಹುದು ॥೨೩॥

ನಾನು ಶಿವನಾಗಿರುವನೆಂಬುವ
ಜ್ಞಾನದನುಭವಕ್ಕೆನ್ನುತಿರುವರು
ಜ್ಞಾನಿ ಜನರು ಶಿವಾನುಭವವೆಂದದಕೆ ಕೇಳಿದಿರಾ ।
ಜಾಣರೇ ನೀವಂಥ ಸ್ಥಿತಿಯನು
ಮಾಣದೇ ಸಲೆ ಪಡೆದುಕೊಳ್ಳಿರಿ
ಹೀನದೆಸೆಯೊಳು ಗುಳಿಯ ಬೇಡಿರಿ ಧರ್ಮ ಬಂಧುಗಳೆ ॥೨೪॥

ಭೋಗಿಪರು ಸುಖದುಃಖವೆರಡನು
ಭೋಗಿಭೂಷನ ಲೋಕದಲೀ
ಸಾಗರವನೀ ಭವದ ದಾಂಟುವ ಸಮಯದಲಿ ನರರು ।
ಹೋಗುವದು ಹೆಚ್ಚಾಗಿ ದುಃಖದೊ-
ಳೀಗಭೀರ ಭವದೊಳಗಾಯುವು
ಹೇಗಿವುದು ತಾಂ ಮೃತ್ಯುಲೋಕದ ಸ್ಥಿತಿಯ ನಿಶ್ಚಲವು ॥೨೫॥

ತೊರೆದು ನರಜನ್ಮವನು ಜಾಣರೆ
ಸ್ಥಿರವಿರುವ ಸುಖ ಭೋಗಿಸುವದಕೆ
ಪರನೊಳಗೆ ನೀವ್ ಕೂಡಿ ಪರನೇ ಆಗಿ ಹೋಗುಪದು ।
ಪರುಷಪಡೆವಿರಿ ಸಾಟಿಯಿಲ್ಲದ
ನರರ ಲೋಕದಿ ದೊರೆಯಲಾರದ
ಹಿರಿಯ ನೃಪರಿಗೆ ಸಹಿತ ಪಂತರವಾದ ಸೌಖ್ಯವದು ॥೨೬॥

ಬೆರೆವ ಪರನೊಳು ಸುಲಭ ಮಾರ್ಗವ
ಕರವಿಡಿದು ತೋರಿಸುವುದೆಮ್ಮಯ
ಪರಮ ಲಿಂಗಾಯತರ ಧರ್ಮವು ಸರ್ವರಿಗೆ ತಾನು ।
ಅರಿತು ನಡೆಯಿರಿ ಧರ್ಮದೊಲು ನೀವ್
ಪರಮ ಗುರುಬಸವಾದಿ ಮಹಿಮರು
ಪರನೊಳಗೆ ಸಲೆ ಕೂಡಿ ಸಮರಸವಾಗಿ ಹೋಗಿಹರು ॥೨೭॥

ಬೆರೆದು ಹೋದರು ವೀರಶೈವರು
ಪರನೊಳಗೆ ಬಹು ಸಂಖ್ಯೆ ಜನಗಳು
ಧರೆಯೊಳೆಮ್ಮಯ ಶ್ರೇಷ್ಠ ಧರ್ಮದ ಹಾಗೆ ನಡೆದವರು ।
ಸುರುತರುವಿನೆಡೆಯಲ್ಲಿ ಕುಳಿತಿಹ
ನರನು ತಾನುಪವಾಸವಿರುವೊಲು
ಹಿರಿಯ ಧರ್ಮದ ಲಾಭವಡೆಯದೆ ದುಃಖಭೋಗಿಪಿರಿ ॥೨೮॥

ಸಾಗರದಿ ಸೇರಿರುವ ನದಿಗಳು
ಸಾಗರವೆ ತಾವಾಗುವಂದದಿ
ಹೋಗಿ ಜೀವವು ಕೂಡಿ ಶಿವನೊಳು ಶಿವನೆ ಆಗುವುದು ।
ಸಾಗರದಿ ಕೂಡಿರುವ ನದಿಗಳು
ಹೇಗೆ ಬಾರವೊ ಮರಳಿಯದರೊಲು
ಹೋಗಿ ಕೂಡಿದ ಜೀವ ಶಿವನೊಳು ತಿರುಗದೆಂದೆಂದೂ ॥೨೯॥

ತೊರೆಯದೇ ಎಂಟಾವರಣಗಳ
ಸರುವರೂ ನೀವ್ ಬಂಧು ಜನರೇ
ಪರುಷದಂತೇರುವದು ನೀವಾ ಪುಟ್ಟಲನ್ನಾರು ।
ಪರನೊಳಗೆ ಗಡ ಬೆರೆದು ಹೋಗಿರಿ
ನರರ ಜನ್ಮವ ಸಫಲಗೊಳಿಸಿರಿ
ಧರೆಯೊಳೀ ಶಿವಧರ್ಮ ಕೀರ್ತಿಸಧಿಕ ವರ್ಧಿಸಿರಿ ॥೨೦॥

ಅರುಹಿದೊಲು ನಾಂ ನಿಮಗೆ ಪ್ರಥಮದಿ
ಧರಿಸಿಕೊಳ್ಳಿರಿ ಲಿಂಗ ಕೊರಳಲಿ
ಧರಿಸಿರೆಲ್ಲರು ಹೆಣ್ಣುಮಕ್ಕಳು ಬಾಲಕರು ಸಹಿತ ।
ಬರೆಯುವೆನು ನಾಂ ಮತ್ತೆ ನಮ್ಮಯ
ಹಿರಿಯ ಧರ್ಮದ ಮಾತು ಮಿಕ್ಕವು
ಗುರುವರೇಣ್ಯರು ಹೇಳಿಯಿದರೊಲು ಮಾತು ಮುಗಿಸಿದರು ॥೨೦॥

ಸಿದ್ಧರೀ ಕೆಂಪಯ್ಯ ಯತಿಗಳು
ಬುದ್ಧಿಗಳು ಮಾಡಿರುವ ಬೋಧದ
ಶುದ್ಧ ಮನಸಿನ ಪಲರಮೇಲ್ ಪರಿಣಾಮತಾನಾಯ್ತು ।
ತಿದ್ದಿಕೊಂಡರು ತಮ್ಮ ನಡತೆಯ
ಮುದ್ದಿನಿಂ ಮೇಣ್ ಭಕ್ತಿಯಿಂದಂ
ಪದ್ಧತಿಯ ತೆರ ಲಿಂಗಧಾರಣ ಮಾಡಿದರು ಜನರು ॥೨೨॥

ಐದುವರ್ಷದ ವರೆಗೆ ಗೈಯ್ದರು
ಬೋಧವನು ಜನಗಳಿಗೆ ಯತಿಗಳು
ಮೋದರೂಪರು ಧರ್ಮಸೇವೆಯ ಮಾಡಿದರು ಬಿಡದೆ ।
ಹಾದಿಹಿಡಿದರು ಧರ್ಮದೂರಿನ
ಸೋದರರು ಶಿವಧರ್ಮಿಗಳುಹು
ಸಾದರದೆ ತಾವ್ ಲಿಂಗಪೂಜೆಯಗೈಯ್ಯಹತ್ತಿದರು ॥೨೩॥

ವಾಸಿಸಿದ ಗಡಹಿಂಗ್ಲಜದಿತಾಂ
ಲೇಸುಮನಸಿನ ವೀರಶೈವನು
ಬೇಸರಾಗದ ಜನಕೆ ದಡ್ಡೀಗಿರಿಯಮಲ್ಲಪನು ।
ನಾಪವಾಯಿತು ತೋಷವಾತನ
ವಾಸ ಮಾಡಿತು ಚಿಂತೆಯವನ
ಲ್ಲೀಶನವಕೃಪೆಯಿಂದ ಮಕ್ಕಳು ಹುಟ್ಟದಕ್ಕಾಗಿ ॥೨॥

ಬಂದನೈ ಸತಿಸಹಿತ ಶುಭದಿನ
ವಂದಿಸಲು ಗುರುಪಾದ ಕಮಲಕೆ
ನಂದದಿಂ ಗಿರಿಮಲ್ಲಪನು ಕೆಂಪಯ್ಯಗಳ ಮಠಕೆ ।
ಹೊಂದಿದರು ಮುದಕಂಡು ಗುರುಗಳ
ನಿಂದುಸನ್ನಿಭ ಶಾಂತರಿರುವರ
ವಂದನೆಯ ಮಾಡಿದರು ಪೇಳ್ದರು ಬಂದ ಕಾರಣವ ॥೩॥

ಮಕ್ಕಳಾಗಿಲ್ಲಮಗೆ ಗುರುಗಳೆ
ಚೊಕ್ಕ ಚರಿತರೆ ಸ್ವಾಮಿರತ್ನರೆ
ಮಕ್ಕಳನು ದಯದಿಂದೆ ಕೊಡುವುದು ಸದಯ ಮೂರ್ತಿಗಳೆ ।
ದುಃಖಿಗಳ ಕಳೆವರೆ ಭಕ್ತರ
ಕಕ್ಕುಲತೆಯಾ ನಿಧಿಯ ರೂಪರೆ
ಸೊಕ್ಕರಿಯದಿಹ ಶ್ರೇಷ್ಠವಿರತರೆ ಶರಣು ಬಂದಿಹೆವು ॥೪॥

ಕೇಳಿ ಗಿರಿಮಲ್ಲಪನ ಬಿನ್ನಪ
ಹೇಳಿದರು ಕೆಂಪಯ್ಯಸಿದ್ಧರು
ಬಾಲಕನು ಜನಿಸುವನು ವರ್ಷವು ತುಂಬುವದರೊಳಗೆ ।
ಪಾಲಿಸುವದೀ ವ್ರತವ ತಪ್ಪದೆ
ಶೀಲಯುತರಾದೈದುಮುಂದಿಗೆ
ಶೂಲಿಯೆನಿಸುವ ಮೃತ್ಯುಲೋಕದ ಜಂಗಮರಿಗೆಗಡ ॥೫॥

ಭೋಜನಕೆ ಕರೆಯುವದು ಪ್ರೇಮದೆ
ನೈಜಭಕ್ತಿಯ ಭಾವದಿಂದಂ
ರಾಜಿಸುವ ಸತಿ ಸೋಮವಾರವು ತಿಂಗಳೊಳಗೊಪ್ಪೆ ।
ಸಾಜವೀವ್ರತ ವರ್ಷಮಾಡಿರಿ
ಮೂಜಗದ ಪತಿರೇವನ ದಯದಿಂ
ದೀ ಜಗದಿ ಬಹುಸೌಖ್ಯವಡೆವಿರಿ ಮಕ್ಕಳನು ಪಡೆದು ॥೬॥

ಮಗನು ಹುಟ್ಟಿದನವಗೆ ಮೊದಲೊಳು
ಸುಗುಣಗಿರಿಮಲ್ಲಪಗೆ ಚಲುವನು
ಮಿಗೆ ಕರುಣದಿಂ ಯತಿಗಳೊರೆದೊಲು ವರ್ಷದೊಳಗಾಗಿ ।
ನಗುನಗುತೆ ತಾಂ ಬಂದು ಮರಡಿಯ
ಮಿಗಿಲು ಸಿದ್ಧರ ಮಠಕೆ ಶುಭ ದಿನ
ಜಗದಿ ಸನ್ನುತರಾದ ಕೆಂಪಯನವರಿಗೆರಗಿದನು ॥೭॥

ಹೇಳಿದನು ಸಾನಂದ ವಾರ್ತೆಯ
ಮೇಲು ಸದ್ಗುರುಗಳಿಗೆ ವಿನಯದೆ
ಹೇಳಿದೊಲು ತಾವ್ ಪುತ್ರರತ್ನವು ಪ್ರಾಪ್ತವಾಯ್ತೆಮಗೆ ।
ಹೇಳಿಯೀಪರಿ ಸುರುವಿದನು ಹಣ
ಶೂಲಿಸನ್ನಿಭ ಯತಿಯ ಸನ್ನಿಧಿ
ತಾಳಿ ಹರ್ಷವ ಭೋಜನವ ಮಠದಲ್ಲಿ ಹಾಕಿದನು ॥೮॥

ಕೊಟ್ಟರೈ ಮಕ್ಕಳನು ಚಿರಳಿಯ
ದಿಟ್ಟರಾಗಿಹ ಗೌಡರವರಿಗೆ
ಕೊಟ್ಟರೈ ತಾವ್ ಮತ್ತೆ ಮಕ್ಕಳ ಆ ಜಡೆಯೊಳಿರುವ ।
ಶೆಟ್ಟಿ ಶಿವರುದ್ರಪ್ಪನವನಿಗೆ
ಪಟ್ಟಿರುವ ಭೂಸಾರೆಯೆಂಬುವ
ಗಟ್ಟಿಗನು ತಾನಡ್ಡ ಹೆಸರಾಧನಿಗೆ ಸ್ವಾಮಿಗಳು ॥೯॥

ಮತ್ತೆ ಸಂತತಿಯಿರದ ಪಲವರಿ
ಗುತ್ತಮೋತ್ತಮರಾದ ಸಿದ್ಧರು
ಚಿತ್ತವಿಸಿರೈ ಶ್ರೋತೃಜನರೆ ಮಕ್ಕಳಿತ್ತಿಪರು ।
ಗೊತ್ತಿರುವ ಕೆಲ ಮಾತು ಪೇಳ್ದಪು
ಮತ್ತೆ ಗೊತ್ತಾದಂತೆ ತದುಪರಿ
ಬಿತ್ತರಿಸಿ ಪೇಳುವೆವು ಬಿಡದಲೆ ಸತ್ಯವಿದ್ದುದನು ॥೧೦॥

ಹೇಳಬೇಕಾಗಿಹುದು ನಿಮಗೀ
ಮೇಲು ಗುರುಗಳು ಗೈದ ಕಾರ್ಯವ
ಕೇಳಿರೈ ತಾವ್ ಮರಡಿಮಠದೊಳಗಿರುವ ಕಾಲದಲಿ ।
ತಾಳಿ ಪುರುಷನು ಬೋಧಗೈದರು
ಬಾಲಲೋಚನ ಭಕ್ತಸಿದ್ಧರು
ಶೀಲಭೂಷರು ಲಿಂಗವಂತರು ಧರ್ಮನೀತಿಗಳ ॥೧೧॥

ಹೋದ ಕಾಲಕೆ ಭಿಕ್ಷೆ ಮಾಡಲು
ಪೋದರೂಪರು ಪಳ್ಳಿಪಳ್ಳಿಗೆ
ಸೋದರರು ಒಡಜನರು ಬಿಡದೇ ಮಾಡುತಿರಲಿದನು ।
ಈ ದಯಾಮಯರಿದ್ದರೈ ತಾವ್
ಬೋಧಗೆಯ್ವಲಿ ಬಹಳ ಜಾಣರು
ಬೋಧಕರು ಕೆಂಪಯ್ಯನವರೀ ವಾಗ್ಮಿಯಾಗಿರಲು ॥೧೨॥

ಪೇಳುತ್ತಿದ್ದರು ಲಿಂಗಯುತರಿಗೆ
ಕೇಳುವದು ಮನು ವಚನವೆಲ್ಲರು
ತಾಳಿಹಿರಿ ಜನ್ಮವನು ಸನ್ನುತ ವೀರಶೈವರಲಿ ।
ಕೇಳಿರೈ ಬಹು ಪುಣ್ಯವರದಿಂ
ಹೇಳಿದೊಲು ಧರ್ಮದಲಿ ಸಾಗಿರಿ
ಬಾಳಿ ಸುಖದಿಂದಿಹದಿ ಕಡೆಯಲಿ ಶಿವನೆ ಆಗುವಿರಿ ॥೧೩॥

ಲಿಂಗಧರಿಸದೆ ಹಲವರಿರುವಿರಿ
ಲಿಂಗಯುತರಿಹೆವೆಂದು ಪೇಳ್ವಿರಿ
ಲಿಂಗವಿಲ್ಲದ ಜನರಿಗೆಂಬರು ಭವಿಗಳವರೆಂದು ।
ಲಿಂಗ ಧರಿಸದೆ ಇರುವದುಂಟೆ
ಲಿಂಗ ಧರಿಸಲೆ ಬೇಕು ಸರ್ವರು
ಲಿಂಗಧರಿಸಲು ಬೇಕು ಸ್ತ್ರೀಯರು ಕೂಸುಗಳು ಸಹಿತ ॥೧೪॥

ಹೀಗೆ ಪೇಳ್ವದು ನಮ್ಮ ಧರ್ಮವು
ಹಾಗೆ ನಡೆಯಿರಿ ಲಿಂಗಧರಿಸಿರಿ
ಹಾಗೆಯೇ ಭಸ್ಮವನು ರುದ್ರಾಕ್ಷಿಗಳ ಧರಿಸುವದು ।
ಬಾಗಿರೈ ಜಂಗಮರ ಗುರುಗಳ
ರಾಗದಿಂ ಪಾದಕ್ಕೆ ಮೇಣನು
ರಾಗದಿಂದೆ ಪ್ರಸಾದ ಪಾದೋದಕವ ಸೇವಿಪುದು ॥೧೫॥

ಮತ್ತೆ ಮುಖದಿಂ ಮಂತ್ರ ನುಡಿಯಿರಿ
ಚಿತ್ತವಿಸಿರೈ ಕೇಳಿ ಗುರುವಿಂ
ಸತ್ತಮವು ತಾವಿರುವದೆಂಟಾವರಣಗಳು ಹೀಗೆ ।
ಮುತ್ತಿನಂತಹ ಧರ್ಮ ನಮ್ಮದು
ಚಿತ್ತ ಜನರಿಪು ನಿಮ್ಮಗೆಯ್ವದು
ಚಿತ್ತಸಲೆ ನೀವಿಟ್ಟು ಕೇಳಿರಿ ನನ್ನ ಮಾತುಗಳ ॥೧೬॥

ಎಲ್ಲವಷ್ಟಾವರಣವಿರುವವವು
ಬಲ್ಲಿರಾ ಬಲು ಶ್ರೇಷ್ಠವಾಗಿರು
ವೆಲ್ಲವೂ ಭವ ಜಲಧಿಸುಖದಿಂ ದಾಟಿಸುತ್ತಿಹವು ।
ಗೆಲ್ಲಪಡೆವಿರಿ ಭವದ ಯುದ್ಧದಿ
ನಿಲ್ಲದೇ ಅಷ್ಟಾವರಣಗಳ
ದೆಲ್ಲವನು ಪಾಲಿಸಿದರೇನೇ ಭಕ್ತ ಜನರುಗಳೇ ॥೧೭॥

ಎಸೆಯುತಿಹ ಹುಬ್ಬಳ್ಳಿ ನಗರದಿ
ಹೆಸರುಗೊಂಡಿಹ ವಿರತಮಠವಿದೆ
ಹೆಸರವಕೆ ತಾಂ ಮೂರುಸಾವಿರವೆಂದು ಬಿದ್ದಿಹುದು ।
ಹಸನ ಮನಸಿನ ಗುರುಗಳೆನಿತೋ
ವಿಷಮನೇತ್ರನ ದಯದೊಳಾಳ್ವರು
ಮಿಸುನಿಯಂಥ ಬೃಹನ್ಮಠವನು ಬಳಿಕ ಕಷೆಯಲ್ಲಿ ॥೩೪॥

ವಿನುತ ಮಠಕಾ ಗುರುಗಳಾದರು
ಘನವಿಬುಧ ಸಂಸ್ಕೃತದೊಳಾಗಿಹ
ಜನಜನಿತ ಗಂಗಾಧರಾಹ್ವಯ ಜಗದ ಗುರುವರರು ।
ಜನಕೆ ಬಲು ಪ್ರಾಯರಾಗಿ ಬಿಟ್ಟರೆ
ವಿನಯರೂಪರು ಮಠದ ಗೌರವ
ವನು ಸಲುಹಿದರು ಹುಟ್ಟುವಳಿಯನು ಮತ್ತೆ ಬೆಳಸಿದರು ॥೩೫॥

ಕೂಡಿವರು ಶಿವನಲ್ಲಿ ಗುರುಗಳು
ನಾಡೆ ಕೀರ್ತಿಯ ಗಳಿಸಿ ಜಗದಲಿ
ಮಾಡದೇ ತಾವ್ ಮುಂದಿನವರನು ಮಠಕೆ ಗುಗುಗಳನು ।
ಮಾಡಿದರು ಮಠದಾಳ್ಕೆ ಕೆಲ ದಿನ
ನೋಡಿತಾ ಪಟ್ಟಣದ ಭಕ್ತರೆ
ಮಾಡದೇ ನಿರ್ವಾಹವಿಲ್ಲದುದಕೆ ತಾವುಗಳು ॥೩೬॥

ಹುಡುಕುತಿದ್ದರು ಸುತ್ತಲೆಲ್ಲವು
ಬಿಡದೆ ಪ್ರತಿದಿನ ಯೋಗ್ಯ ಗುರುಗಳ
ಪಡೆಯದೇ ಅಂತಹರನೆಲ್ಲಿಯೂ ಕೊನೆಗೆ ನಿಶ್ಚಯಿಸಿ ।
ಕಡುಸುಕೀರ್ತಿಯವಡೆದ ಯತಿಮಣಿ
ದೃಢ ಮನದ ಕೆಂಪಯ್ಯಸ್ವಾಮಿಯ
ಗಡವವರುಗಳ ಸ್ವಾಮಿಮಾಳ್ಪುದು ತಾವು ಮನದಲ್ಲಿ ॥೩೭॥

ಗದಗ ಹುಬ್ಬಳ್ಳಿ ಧಾರವಾಡದ
ಚದುರ ಭಕ್ತರು ಸುಪ್ರತಿಷ್ಠಿತ
ಸದಮಲಾತ್ಮರು ಮಠದ ಬಹ್ವಭಿಮಾನಿಗಳು ಕಲೆತು ।
ವಿಧುದರನ ಪ್ರೇರಣೆಯ ತೆರದೊಳು
ಮುದದೆ ಕರೆತರಲಿಕ್ಕೆ ಹೋದರು
ನಿಧಿಯು ತಾನಾಗಿರ್ದ ಜ್ಞಾನದ ಪರಮ ಗುರುಗಳನು ॥೩೮॥

ಹಾನಗಲ್ಲದಿ ವಾಸವೆಸಗಿಹ
ಪ್ರಾಣದೋಲಿಹ ವೀರಶೈವರ
ಯಾನ ಜಲಧಿ ಕುಮಾರಯತಿವರರಿಗದನರುಹಿ ।
ಸಾನುರಾಗದೊಳವರ ಸಹಿತಂ
ಜಾಣರಾಗಿಹ ಹಿರಿಯ ಜನಗಳು
ದೀನ ಜನಗಳ ಜನಕ ಕೆಂಪಯನವರು ವಾಸಿಸಿದ ॥೩೯॥

ಮರಡಿಮಠಕಾಗಮನಗೆಯ್ದರು
ಪರಮಯತಿ ಕೆಂಪಯ್ಯಸ್ವಾಮಿಯು
ಬರುವದಂ ದೂರೀದ ಕಂಡು ಕುಮಾರಯತಿಗಳನು ।
ತ್ವರದೆ ತಾವೆದುರೆದ್ದು ಹೋದರು
ಹರುಷದಿಂದಂ ಹಾನಗಲ್ಲದ
ಗುರುಗಳಂಘ್ರಿಪಯೋಜಯುಗ್ಮಕ್ಕೆ ಭಕ್ತಿ ಭಾವದೊಳು ॥೪೦॥

ಎರಗಿದರು ಸಾಷ್ಟಾಂಗದಿಂದಂ
ಸುರಿಯುತಿರೆ ಹರ್ಷಾಶ್ರು ಕಣಿಂ
ಕರುಣೆ ಕೆಂಪಯನವರಿಗಾಗಳು ತೆರಪಿರದೆ ತಾವು
ಪರಮ ಯತಿ ಕೆಂಪಯ್ಯನವರಿಗೆ
ಹರಕೆಯಂ ಕೈಯೆತ್ತಿ ಕೊಟ್ಟರು
ಗುರುವರರುನುತ ಹಾನಗಲ್ಲದ ಪರಮಯೋಗಿಗಳು ॥೪೧॥

ವಂದಿಸಿದರು ಕೆಂಪಯ್ಯನವರಿಗೆ
ಬಂದ ಭಕ್ತರು ಹಾನಗಲ್ಲದ
ಕುಂದಿರದ ಚಾರಿತ್ರ್ಯಯತಿಗಳ ಜತೆಯೊಳಿದ್ದವರು ।
ಮುಂದೆ ಸರ್ವರು ಹೋಗಿ ಕುಳಿತರು
ಚಂದವಾಗಿಹ ಸಿದ್ಧಮಠದೊಳು
ತಂದೆಯೆಂತಿಹ ಹಾನಗಲ್ಲದ ಗುರುವರೇಣ್ಯರಿಗೆ ॥೪೨॥

ಗದ್ದುಗೆಯ ಮೇಲ್ ಕುಳಿತುಕೊಳ್ಳಲು
ಬುದ್ಧಿಗಳು ಕೆಂಗಯ್ಯ ಸಿದ್ಧರು
ಶುದ್ಧ ಭಕ್ತಿಯ ಭಾವದಿಂ ಬಿನ್ನಪವ ಮಾಡಿದರು ।
ಮುದ್ದಿನಿಂ ಶ್ರೀಪ್ಮಾಸನದಮೇಲ್
ಗೆದ್ದ ಕಾಮನ ಗುರು ಶಶಾಲಕರು
ಸಿದ್ಧ ಕೆಂಪಯ್ಯವರ ಬಿನ್ನಪ ಮಾನ್ಯ ಮಾಡಿದರು ॥೪೩॥

ಕೂತ ಮೇಲೆ ಕುಮಾರ ಯತಿಗಳು
ಪೂತಕೃತಿಯುತ ನಿಂ ಸುತಕೆಂಪಯ
ಪ್ರೀತಿಯಿಂ ಮೇಣ್ ಭಕ್ತಿಯಿಂ ಸಾಷ್ಟಾಂಗ ನಮಿಸಿದರು ।
ಸಾತಿಶಯ ಸಂತೋಷದಿಂದಂ
ಮಾತುಗಳ ತಾವಿತ್ತಲಿತ್ತಿನ
ನೀತಿ ಭೂಷಿತ ಯತಿಗಳಿಬ್ಬರು ಬಳಿಕ ಮಾಡಿದರು ॥೪೪॥

ಮಾಡಿಕೊಟ್ಟರು ಬಂದ ಭಕ್ತರ
ನಾಡೆ ಪರಿಚಯ ಹಾನಗಲ್ಲದ
ನಾಡಿನೊಳು ಬಹುಕೀರ್ತಿವಡೆದ ಕುಮಾರಯತಿವರರು ।
ಬೇಡಿದುದು ಭಕ್ತರಿಗೆ ಕೊಡುತಿಹ
ಬೀಡು ಕರುಣೆಯದಾದ ಕೆಂಪಯ
ಬೇಡಿಕೊಂಡರು ಸ್ನಾನ ಮಾಡಲು ಸಮಯವಾಗಿರಲು ॥೪೫॥

ಹೋದರೈ ತಾವೆದ್ದು ಸಕಲರು
ಹೋದದಿಂ ಶಿವಪೂಜೆ ಮುಗಿಯಿಸಿ
ಸಾದರದೆ ತಾವ್ ಭೋಜನವ ತಣಿವಂತೆ ಮಾಡಿದರು ।
ಆದ ಮೇಲಾ ವಿಧಿಯು ತದುಪರಿ
ಬೋಧಕರು ಮೇಣ್ ಮಾನ್ಯ ಭಕ್ತರು
ಹೋದರೈ ವಿಶ್ರಾಮ ಭವನಕೆ ಕೂತುಕೊಳ್ಳಲಿಕೆ ॥೪೬॥

ಪೇಳುವೆವು ಮುಂದಿನ್ನು ಮೂದಣ
ಕೇಳಿರೈ ಸಂಧಿಯೊಳು ಚರಿತೆಯ
ಮೇಲು ಶ್ರೀ ಕೆಂಪಯ್ಯಸ್ವಾಮಿಯ ಭಕ್ತಿಯಿಂ ನಾವು ।
ಆಲಿಸಲು ಬರಬೇಕು ದಿನದೊಲು
ಶೂಲಿ ಭಕ್ತರೆ ಜಾಣ ಜನರೇ
ಕೇಳಿದವರಿಗೆ ಭಾಗ್ಯ ವೃದ್ಧಿಯು ನಿಜದೊಳಾಗುವದು ॥೪೭॥

ರಜತ ಗಿರಿಯೊಳು ವಾಸಗೆಯ್ಯುವ
ಸುಜನರನು ಬಹುದಯದೆ ಪೊರೆಯುವ
ಕುಜನರನು ಶಿಕ್ಷಿಸುವ ಹಿಮಕರನನ್ನು ಧರಿಸಿರುವ ।
ತ್ಯಜಿಸಿರುವ ವೈಭವವನೆಲ್ಲವ
ನಜ ಹರಿಗಳಿಂ ಪೂಜೆಗೊಂಬುವ
ಗಜ ವದನ ಗುಹಜನಕನಾಗಿಹ ಶಿವಗೆ ಜಯಜಯವು ॥೪೮॥

( ಐದನೆಯ ಸಂಧಿ ಮುಗಿದುದು )



# ಆರನೆಯ ಸಂಧಿ

ಸೂಚನೆ:– ಮೂರುಸಾವಿರ ಮಠಕೆ ಹುಬ್ಬಳಿ
ವೀರಯತಿ ಕೆಂಪಯ್ಯನವರ
ಕುಮಾರ ಗುರುಗಳು ಕರೆಯ ಬಂದರು ಸ್ವಾಮಿಯಾಗಲಿಕೆ ।

ಶ್ರೀ ಸುಮಂಗಲ ರೂಪಶಾಂಭವ
ವಾಸುಕಿ ವಿಭೂಷಣ ಸದಾಶಿವ
ಮೂಷಕವನೇರಿಹನ ಜನಕ ಸುಹಾಸ್ಯ ಮುಖದವನು ।
ಪೋಷಕನು ಮೂಲೋಕವೆಲ್ಲವ
ದೋಷರಹಿತನು ಹರನು ವಿಶ್ವಾ
ಧೀಶನಾಗಿಹ ಪಾಲಚಕ್ಷುವು ಪೊರೆಯಲ್ಯೆ ನಮ್ಮ ॥೧॥

ಬಳಿಕ ನುತ ಕೆಂಪಯ್ಯನವರಿಗೆ
ತಿಳಿಸಿದರು ಬಹು ಮಮತೆಯಿಂದಂ
ಗೆಲೆದ ಮಾರನ ಹಾನಗಲ್ಲ ಕುಮಾರಗುರುವರರು ।
ತಿಳಿಸ ಬಂದೆವು ನಿಮಗೆ ಕೇಳಿರಿ
ಬಲುವು ಮಂಗಲವಾದ ವೃತ್ತಾಪ
ಬೆಳೆಯುವದು ಜಗದಲ್ಲಿ ಕೀರ್ತಿಯು ನಿಮ್ಮ ಹೆಚ್ಚಾಗಿ ॥೨॥

ಮಾಡ ಬಂದೆವು ಜಗದ ಗುರುಗಳ
ನಾಡಿನಲಿ ಹೆಸರಾದ ಹುಬ್ಬಳಿ
ನೋಡಿರೈನುತ ಮೂರುಸಾವಿರ ಮಠಕೆ ನಿಮ್ಮನ್ನು ।
ಕಾಡದೇವರ ಭಕ್ತ ರತ್ನರೆ
ಮಾಡಿಹರು ನಿಶ್ಚಯವ ಭಕ್ತರು
ಗಾಢ ತೋಷದೆ ತಮ್ಮ ಮನದೊಳು ನಿಖಿಲರೂ ಕೂಡಿ ॥೩॥

ನೀಡುವುದು ಒಪ್ಪಿಗೆಯ ಜವದಲಿ
ಮಾಡುವುದು ಮಮ ವಚನ ಮಾನ್ಯವ
ನೋಡಿರೈ ಆಗುವದು ಬಹು ಸಂತೋಷ ನಿಜವೆನಗೆ ।
ಮಾಡಿದರು ಕೈಮುಗಿದು ಬಿನ್ನಪ
ಕೂಡಲೇ ಆ ಸಭ್ಯ ಭಕ್ತರು
ಮಾಡಿರೈ ನೀವ್ ಗುರುಗಳಾಜ್ಞೆಯ ಪೂಜ್ಯರೇ ಮಾನ್ಯ ॥೪॥

ಮಾಡಿದರು ಸುವಿವೇಕ ಮನದಲಿ
ನಾಡೆನುತ ಕೆಂಪಯ್ಯ ಸಿದ್ಧರು
ಕೂಡಲೇ ಹೇಳಿದರು ಪೂಜ್ಯಕುಮಾರ ಯತಿಗಳಿಗೆ ।
ಗಾಢ ತೋಷದೊಳಿರುವೆ ನಾನೀ
ಕಾಡದೇವರ ಕರುಣದಿಂದಂ
ಬೀಡು ಹಿಗ್ಗಿನದಾಗಿರುವದೀಸಿದ್ಧ ಮಠವೆನಗೆ ॥೫॥

ಕೊರತೆಯೇ ಇಲ್ಲೆನಗೆ ಯಾವುದು
ಸರುವ ಭಕ್ತರು ಪ್ರೇಮದಿಂದಂ
ನಿರುತ ವರ್ತಿಸುತಿಹರು ನನ್ನನು ಪ್ರಾಣ್‌ದೋಲ್‌ವರು ।
ಪೊರೆಯುತಿರುವರು ಪೂರ್ಣವಿರುವದು
ಗುರುವರರೆ ಸ್ವಾತಂತ್ರ್ಯವೆನಗೀ
ಪರಮ ಮಠದಲಿ ಪ್ರೀತಿಯಿರುಪದಸಾತಿಶಯ ನನ್ನ ॥೬॥

ಆಸೆಯೇ ಇಲ್ಲೆನಗೆ ಹೆಚ್ಚಿನ
ಬೇಸರೆನಗಿದೆ ಭೋಗಭಾಗ್ಯದ
ಭೂಪರೆ ಲಿಂಗಾಯತರ ಧರ್ಮಕ್ಕೆ ನಿಮ್ಮಡಿಯ ।
ದಾಸನಾಗಿಹ ನನ್ನ ಬಿನ್ನಪ
ತೋಷದಿಂದಂ ಮಾನ್ಯಮಾಡಿರಿ
ಕೂಸು ನಿಮ್ಮಯ ನಾನು ಕರುಣದೆ ನೋಡಿರೆನ್ನನ್ನು ॥೭॥

ಬಳಿಕ ನಸುಮುಳಿಸಿಂದೆ ನುಡಿದರು
ನಿಲಯರಾಗಿಹ ಶಾಂತಿ ಸದ್ಗುಣ
ಬಲುಹಿತವ ನೀವ್ ನೋಡದೊಬ್ಬರ ನೆರೆ ಸಮಾಜ ಹಿತ ।
ಸಲೆಮಲೆಯುತರೆ ನೋಳ್ಪುದುಚಿತವು
ತಿಳಿಯಿರಿದು ಕೆಂಪಯ್ಯನವರೇ
ಒಳಿತು ತಾನಾಗುವದು ಲಿಂಗಾಯತರ ನಿಮ್ಮಿಂದೆ ॥೮॥

ನೀವು ಮಠಕಾ ಗುರುಗಳಾದರೆ
ಕೋವಿದರೆ ಲಿಂಗಾಯತರ ಹಿತ
ಭುವಿಯೊಳು ಚೆನ್ನಾಗಿಯಾಗುವದು ಎಂದು ಮನಗಂಡು ।
ನಾವಿದಕೆ ಸಾರ್ತಂದೆವಿಲ್ಲಿಗೆ
ನೀವು ನಮ್ಮಯ ಮಾತು ಕೇಳಿರಿ
ದೇವರೇ ಮಾಡಿಹನು ಪ್ರೇರಣೆಯಿಂತು ನಮ್ಮೊಳಗೆ ॥೯॥

ಕೇಳಿ ಗುರುಗಳ ಮಾತು ಸಿದ್ಧರು
ತಾಳಿ ಶಾಂತಿಯ ಹೀಗೆ ನುಡಿದರು
ಹೇಳಿದೊಳು ತಾವ್ ಕೇಳಿ ನಡೆವೆನು ನಿಮ್ಮ ಬೆಸವನ್ನು ।
ಆಲಿಸಿರಿ ನಾಂ ಮೀರೆನೆಂದಿಗು
ಹೇಳಿಕೊಡೆನು ನನ್ನ ಚಿನ್ನಪ
ಮೇಲು ನಮ್ಮ ಸಮಾಜ ಹಿತ ನೋಡುವದು ನಿಜವಾಗಿ ॥೯೦॥

ಆಯಿತೆಂದರು ಲಿಂಗವಂತರ
ನಾಯಕರು ಗುರು ಹಾನಗಲ್ಲದ
ಕಾಯ ಜನ ಗೆದ್ದವರು ಪ್ರಮುಖರು ನಿಖಿಲ ಗುರು ಜನರ ।
ಆಯಿತೆಂದರು ಬಂದ ಭಕ್ತರು
ಕಾಯ ಜನ ಹಾಗಿರುವ ಮೇಣ್ ಹೊಸ
ಪ್ರಾಯದಿಂದಂ ಮೆರೆವ ಯತಿಪದ ಮತ್ತೆ ನಮಿಸಿದರು ॥೯೧॥

ಹರಡಿ ಬಿಟ್ಟಿತು ಸುದ್ದಿ ಸುತ್ತಲು
ಮರಡಿ ಮಠದಾ ವಿನುತ ಗುರುಗಳ
ಕರೆಯಲಿಕೆ ಬಂದಿಹರು ಹುಬ್ಬಳಿ ಪುರವವರು ಕೆಲರು ।
ಗುರುಗಳನು ಗಡ ಮೂರುಸಾವಿರ
ಪರ ಮಠಕೆ ತಾವ್ ಮಾಡಲವರನು
ಹಿರಿಯ ಸ್ವಾಮಿಯು ಹಾನಗಲ್ಲದ ತಾವು ಬಂದಿಹರು ॥೯೨॥

ಕೇಳಿ ವೃತ್ತವನಿದನು ಬಂದರು
ಕೇಳಿರೈ ಹಲವೂರ ಜನಗಳು
ತಾಳಿರೋಷವ ಬಂದು ಬಿಟ್ಟರು ಮಠಕೆ ಕೆಂಪಯರ ।
ತಾಳಿರಲು ಕೆಲ ಜನ ಕೈಯಲಿ
ಕೋಲುಗಳ ಕುಡುಗೋಲು ಕೊಡಲಿಯ
ಬಾಲೆಯರು ಹಲಜನರು ಬಂದರೆ ರೋಷವನ್ನಾಂತು ॥೯೩॥

ಬಿಡೆವು ನಮ್ಮಯ ಸ್ವಾಮಿಯವರನು
ಕಡುಕರುಣೆಯನು ಗುರುಗಳಾಗಲು
ಗಡವೆರಡನೆಯ ಮಠಕೆ ಕೇಳಿರಿ ಪ್ರಾಣವಿರುವನಕಾ।
ಬಿಡುವೆವೈ ನಾವ್ ಕಡಿದು ಚೆಲ್ಲಿಯೆ
ತಡೆಯದೇ ಕರೆ ಬಂದ ಜನರನು
ಕೊಡಲಿಯಿಂ ಕುಡುಗೋಲಿನಿಂದಂ ಕೇಳಿವಾರನ್ನು ॥೧೪॥

ಕೂಡಿ ಬಿಟ್ಟಿರೆ ನಾಲ್ಕು ಸಾವಿರ
ನೋಡಿರಾಗಳು ಮಠದ ಜನಗಳು
ಮಾಡುತ್ತಿದ್ದರು ಘೋರಗರ್ಜನೆ ಕೋಪದಿಂದವರು।
ಓಡಿ ಹೋಗಿರಿ ಬವದೊಳಲ್ಲಿಂ
ದೋಡದಿದ್ದರೆ ಕೊಲೆಯ ಮಾಳ್ಪೆವು
ಮಾಡಿ ಮನದಿ ವಿಚಾರ ಶೀಘ್ರದಿ ಹೋಗಿಬಿಡಿರೆಂದು ॥೧೫॥

ಕೊರತೆಯಿಲ್ಲೇನಿರುವದವರಿಗೆ
ತೊರೆದು ಮಠವೆರಡನೆಯ ಮಠ
ಗುರುಗಳಾಗಲು ಹೋಗಲಿಕೆ ಕೆಂಪಯ್ಯ ಗುರುಗಳಿಗೆ।
ಪರುಷದೊಳು ನಾವಿರುವೆವವರಿಂ
ಹಿರಿಯ ಸಿದ್ಧರು ವಿರತ ರತ್ನರು
ಹರನೇ ತಾವಾಗಿಹರು ಮರ್ತ್ಯದ ಸ್ವಾಮಿ ಕೆಂಪಯರು ॥೧೬॥

ಹೋಗಿರೈ ಜವ ನಮ್ಮೆದುರು ನೀವ್
ಹೋಗದಿದ್ದರೆ ಕಳೆದುಕೊಳ್ವಿರಿ
ಬೇಗನೆಲ್ಲರ ಪ್ರಾಣಗಳ ನಾವ್ ಸತ್ಯ ಪೇಳುವೆವು।
ಕೂಗುತೆಲ್ಲರು ಹೇಳುತ್ತಿದ್ದರು
ನೀಗಿ ಕೆಲವರು ಹಂಗು ಜೀವದ
ಸಾಗಿ ಹೋಗುತಲಿದ್ದರಾಗಳು ಕೊಡಲಿಯನು ಪಿಡಿದು ॥೧೭॥

ಕಂಡು ಕೆಂಪಯನವರ ಮೇಲಣ
ಖಂಡ ಭಕ್ತಿಯ ಭಕ್ತ ಜನಗಳ
ಕೆಂಡದೊಲು ಬಹುಪೂತರಾದ ಕುಮಾರಯತಿವರರು ।
ಉಂಡವೊಲು ಪಿಯೂಷವಾಗಲು
ತಂಡ ಜನಗಳ ಕಂಡುದೂರಿಂ
ಗಂಡುಗಲಿಗಳು ಹರ್ಷ ಭಾಷ್ಪಗಳನ್ನು ಸುರಿಸುತ್ತ ॥೧೮॥

ಆಗ ಕೂಡಿದ ಜನಕೆ ಹೇಳಲು
ಯೋಗಿಗಳು ಹೊರಬಂದು ಧೈರ್ಯದಿ
ಕೂಗಿ ಹೇಳಿದರೆಲ್ಲ ಜನರಿಗೆ ಕೇಳಿಸುವ ಹಾಗೆ ।
ಆಗಿಹುದು ಸಂತೋಷ ಗುರುಗಳ
ಮೇಗೆ ನಿಮಗಿಹ ಭಕ್ತಿಯೀಕ್ಷಿಸಿ
ಹೇಗವರು ನುಡಿವಾಗಳಾನಂದಾಶ್ರು ಸುರಿಯುತಿರೆ ॥೧೯॥

ನಿಮ್ಮ ಸಮ್ಮತಿಯಿಲ್ಲದೇ ನಾವ್
ನಿಮ್ಮ ಸ್ವಾಮಿಯನೊಯ್ಯಲಾರೆವು
ನಿಮ್ಮ ಭಕ್ತಿಗೆ ಸಾಟಿಯಿಲ್ಲವು ಮತ್ತೆ ತಾನೆಲ್ಲಿ ।
ತಮ್ಮಗಳಿರಾ ಹೋಗಿ ಬಿಡುವೆವು
ಸುಮ್ಮನೇ ನಾವ್ ಹೊಂದ ಮಾರ್ಗದಿ
ನಮ್ಮ ಮಾತನು ನಂಬಿ ಹೋಗಿರಿ ಸರ್ವರೂ ನೀವು ॥೨೦॥

ಯೋಗಿವರ್ಯರರ ನೋಡಿದೊಡನೆಯೆ
ಹೋಗಿ ಬಿಟ್ಟಿತು ಸಿಟ್ಟು ಸರ್ವರ
ರಾಗದಿಂದೆ ಕುಮಾರಯತಿಗಳ ಮಾತು ಕೇಳಿದರು ।
ಹೋಗುವೆವು ಹೊರ ಬಂದು ಹೇಳಲಿ
ತ್ಯಾಗಿಗಳು ಕೆಂಪಯ್ಯ ಗುರುಗಳು
ಹೇಗೆ ನಿಮ್ಮಯ ತೆರದಿ ಹೇಳಲಿ ತಮ್ಮ ಮುಖದಿಂದೆ ॥೨೧॥

ಇರುವದೆಲ್ಲರ ನಂಬುಗೆಯು ಬಲು
ಗುರುಗಳೊಳಗಾ ಮರಡಿಮಠದೀ
ಪರನ ರೂಪರು ಹೇಳಿದೊಡನೆಯೇ ಹೋಗುವೆವು ನಾವು ।
ಬರಿದೆ ಯತ್ನಿಸಬೇಡಿರಾರು
ತೊರೆಯಲಾರೆವು ನಿಮ್ಮ ಮಾತಿಗೆ
ಪರಮವಾದೀಮಠದ ಸ್ಥಳವನ್ನೆಂದಿಗೂ ನಾವು ॥೨೨॥

ಮೂರು ದಿನವೀ ಜನಗಳೆಲ್ಲರು
ಕಾರುಣಿಕರಾ ಮಠದೊಳಿದ್ದರು
ಭೂರಿ ಚಿಂತೆಯ ಗೈಯುತವರು ಪ್ರಸಾದ ಸೇವಿಸುತೆ ।
ವೀರ ಯತಿಗಳು ಹಾನಗಲ್ಲದ
ಧೀರ ಕೆಂಪಯನವರಿಗೊರೆದರು
ಸಾರಿ ಪೇಳಿರಿ ಸರ್ವ ಜನರಿಗೆ ನಾವು ಹೇಳಿದೊಲು ॥೨೩॥

ಆಗಿರಲು ತಾಂ ಮಧ್ಯರಾತ್ರಿಯು
ಬಾಗಿ ಗುರುಪದ ಕಮಲಕಾಗಳು
ರಾಗದೀಪಾ ಜನರ ಮಧ್ಯದಿ ನೀದು ಯತಿವರರು ।
ಹೋಗೆನೀಗಳು ನಾನು ಬಿಟ್ಟಿ
ಯೋಗಿಗಳ ಕೆಂಪಯ್ಯವರಾಮರ
ಹೋಗುವದು ಬಂದವರು ಕೇಳಿರಿ ನಾಳೆ ನೀವುಂಡು ॥೨೪॥

ನಿಮ್ಮಯನುಮತಿ ಇಲ್ಲದೆ ನಾಂ
ನಿಮ್ಮಯೀ ಮಠ ಬಿಟ್ಟು ಹೋಗೆನು
ನಿಮ್ಮ ಸೇವಕನಿರುವನೈ ನನಗಿಲ್ಲ ಸ್ವಾತಂತ್ರ್ಯ ।
ಚಿಮ್ಮುತಿಹ ಹುರುಪಿಂದೆ ಪೇಳಿದ
ರೊಮ್ಮನದ ಕೆಂಪಯ್ಯ ಸ್ವಾಮಿಯು
ಸಮ್ಮತಿಯ ತಾವಿತ್ತರೆಲ್ಲರು ಹೊಡೆದು ಚಪ್ಪಾಳೆ ॥೨೫॥

ಬಂಧುರಗೆ ಕೆಂಪಯ್ಯ ಸ್ವಾಮಿಗೆ
ನಂದದಿಂದಂ ನೋಡಿದಾಗಳು
ವಂದನೆಯ ಮಾಡಿದರು ಶಿರಸಾಷ್ಟಾಂಗದಿಂದವರು ।
ಚಂದವದ ನೋಡಲ್ಕೆ ಸಿಗುವದೆ
ಮಂದ ಪುಣ್ಯವಗೆಯ್ದ ಜನರಿಗೆ
ತಂದೆ ಕೆಂಪಯ್ಯನವರು ಧನ್ಯರು ತಾವು ನಿಜವಾಗಿ ॥೨೬॥

ಮತ್ತೆ ತಾವ್ ಕೆಂಪಯ್ಯ ಸಿದ್ಧರು
ಸತ್ತಮರು ಹೇಳಿದರು ಜನರಿಗೆ
ಚಿತ್ತವಿಸಿರೈ ನಾಳೆಮಠದಿ ಪ್ರಸಾದ ತಕ್ಕೊಂಡು ।
ಪುತ್ತಗಿನ ಮನದವರೆ ಹೋಗಿರಿ
ಕುತ್ತುಗಳ ಪರಿಹಾರ ಮಾಡುವ
ಚಿತ್ತಜನರಿಪು ಶಿವನ ನಾಮವ ಸ್ಮರಣೆ ಮಾಡುತ್ತೆ ॥೨೭॥

ಎಂದುಸುರಿ ನೆರೆದಿರ್ದ ಜನರಿಗೆ
ವಂದನೆಯ ಕೈ ಮುಗಿದು ಗೆಯ್ದರು
ಬಂಧುರರು ತರುವಾಯ ಹೋದರು ಜನರ ನತಿಯನ್ನು ।
ಮಂದ ಹಾಸ್ಯವ ಗೆಯ್ಯುತಾಗಳು
ನಂದದಿಂ ಸ್ವೀಕರಿಸುತ್ತಿದ್ದರು
ನಂದಿವಹನನ ಪರಮ ಭಕ್ತರು ವರಪುರುಷರವರು ॥೨೮॥

ನಿಂದು ಹೊರಗಡೆ ನೋಡುತಿದ್ದರು
ಬಂದ ಭಕ್ತರು ಬೇರೆಯೂರಿನ
ನಂದದಿಂ ತಲೆ ದೂಗುತ್ತಿದ್ದರು ಸ್ವಾಮಿ ಕೆಂಪಯ್ಯರ ।
ಕುಂದಿರದ ವರಯತಿಯ ಮೇಲಣ
ಮಂದಿಯಲ್ಲಿಹ ಭಕ್ತಿಯೀಕ್ಷಿಸಿ
ಹಿಂದೆ ನೋಡಿಲ್ಲೀದ ಭಕ್ತರ ಮತ್ತೆ ನಾವೆಲ್ಲಿ ॥೨೯॥

ಹೀಗೆ ಮಾತಾಡುತ್ತೆ ಹೋದರು
ರಾಗದಿಂದೆ ಕುಮಾರ ಗುರುಗಳೆ
ಭೋಗಿ ಭೂಷನ ಭಕ್ತ ಮನೆಗಳ ಬಳಿಗೆ ಕೂಡ್ರುಲಿಕೆ।
ಆಗುವದು ಮಠದೇಳ್ಗೆ ನಮ್ಮಯ
ಯೋಗಿವರರೀ ಗುರುಗಳಾದರೆ
ಹೀಗೆ ಯೋಚನೆ ಮಾಡುತಿದ್ದರು ಮನದಿ ಮತ್ತವರು ॥೩೦॥

ಹಾನಗಲ್ಲದ ಸ್ವಾಮಿಗಳ ಮೇಣ್-
ಮಾನಿ ಕೆಂಪಯ ಸಿದ್ಧರೋಡಿಗೆ
ಕಾಣೆರೈ ಬಂದಿರುವ ಭಕ್ತರು ಭೋಜನ ಮುಗಿಸಿ।
ಮಾನಸದಿ ಚಿಂತಿಸುತೆಯೂರಿಗೆ
ಧ್ಯಾನಿಸುತೆ ಶಿವರೂಪ ಹೋದರು
ಕಾಣಲಿಲ್ಲವು ಮಾರ್ಗ ಮುಂದಿನ ದವರಿಗಾವಾಗೆ ॥೩೧॥

ಹೋದರಾ ತರುವಾಯ ಜನಗಳು
ಮೋದದಿಂದೆ ಪ್ರಸಾದ ಸೇವಿಸಿ
ಹೋದರೆಂಬುದು ಹಾನಗಲ್ಲದ ಸ್ವಾಮಿಯಿದನರಿತು।
ಆದರಲಿ ಸಂತೋಷ ಬಳಿಕ
ತ್ಯಾರದಿ ಗುರುಪಾದ ವಂದಿಸಿ
ಹಾದಿ ಹಿಡಿದರು ಶಿವನ ನೆನೆಯುತೆ ಹಿಗ್ಗಿ ನಿಂತಾಪು ॥೩೨॥

ಇನ್ನು ಪೇಳ್ವೆವು ಬಸವದೇವನ
ಸನ್ನುತನ ಸಚ್ಚರಿತೆಯನುನಸು
ನನ್ನಿ ಭಕ್ತರೆ ಬಸವರಾಜನ ಶ್ರೋತ್ರರೆ ನೀವು।
ಚೆನ್ನ ಲಿಂಗಾಯತರ ಧರ್ಮವ
ನುನ್ನತಿಯಗೊಳಿಸಿರುವ ಮಹಿಮನ
ಪನ್ನಗಾಲಂಕೃತನ ಭಕ್ತನ ಸ್ತೋತ್ರರೂಪದಲಿ ॥೩೩॥

ನಿಜ ಜಗದ್ಗುರು ಬಸವದೇವನ
ಸುಜನವನ ನಿಧಿ ಪೂರ್ಣ ಚಂದ್ರನ
ತ್ರಿ ಜಗದೊಡೆಯನ ಪರಮ ಭಕ್ತನ ಧರ್ಮದಿನಕರನ ।
ರಜನಿಪತಿಯೊಲು ಶಾಂತನೆಂಗಿಹ
ತ್ಯಜಿಸಿ ಬ್ರಾಹ್ಮಣ ಧರ್ಮವನು ತಾಂ
ವಿಜಯಿ ಶಿವಧರ್ಮದಲಿ ಕೂಡಿದ ಮಹಿಮನಿಗೆ ನತಿಯು ॥೩೪॥

ಹಾರುವರ ತಾವ್ ಕುಲಜರರಾಗಿಹ
ಮಾರಮರ್ದನ ಭಕ್ತರಾಗಿಹ
ಧೀರರಾಗಿಹ ಮಾದರಸ ಮೇಣ್ ಮಾದಲಾಂಬೆಯರು ।
ಭೂರಿ ಪುಣ್ಯವನೆಗೆಳಿದುದರಿಂ
ಧಾರುಣಿಯೊಳೀ ಅವರ ಜಠರದಿ
ಗೌರಿವರ ನಿಚ್ಛೆಯೊಲು ಭವಿಸಿದ ಬಸವನಿಗೆ ನತಿಯು ॥೩೫॥

ಹಾರುವರ ಜಾತಿಯಲಿ ಭವಿಸಿದ
ಚಾರುತರ ಗುಣಯುಕ್ತೆಯಾಗಿಹ
ನಾರಿಮಣಿಯಾಗಿರುವ ಗಂಗಾಂಬೆಯನು ಪ್ರಥಮದಲಿ ।
ಭೂರಿ ಮೋದದೆ ಲಗ್ನವಾಗಿಹ
ಸಾರಗುಣ ನೀಲಾಕ್ಷಿ ದೇವಿಯ
ವೀರ ಜೈನರ ವಧುವ ವರಿಸಿದ ಬಸವನಿಗೆ ನತಿಯು ॥೩೬॥

ಮೊದಲೊಳೆಳೆಗಿಡ ವಾಗೆನೆಯು ವೀ
ಮಧುರ ಫಲದೀ ಧರ್ಮ ವೃಕ್ಷವ
ಚದುರನಾತನು ಬೆಳಸಿ ಘನತರುವಾಗಿ ಮಾಡಿರುವ ।
ಸದಯನಾಗಿಹ ಪುಣ್ಯಚರಿತಗೆ
ನಿಧಿಯು ತಾನಾಗಿರುವ ಧರ್ಮದ
ಕುಧರಜಾಪತಿ ಭಕ್ತಮಣಿಯಾ ಬಸವನಿಗೆ ನತಿಯು ॥೩೭॥

ತೊರೆದು ವ್ರತ ಬಂಧನದ ವಿಧಿಯ
ನ್ನಿರುವ ಬ್ರಾಹ್ಮಣರಲ್ಲದಶ್ಯಕು
ಹಿರಿಯ ವ್ರತವನ್ನೆಂಟು ವರ್ಷದಿ ಮಾಡುತಿರುವದನು ।
ತೊರೆದು ಜಾತಿಯ ಜನನಿ ಜನಕರ
ತೊರೆದು ಗೃಹವನು ಹುಟ್ಟಿದೂರನು
ಪುರುಷದಿಂ ಹೋಗಿರುವ ಬಸವನ ಚರಣ ನಮಿಸುವೆವು ॥೩೮॥

ಹುಟ್ಟಿದರು ಬ್ರಾಹ್ಮಣರ ಕುಲದಲಿ
ಕಟ್ಟುವನಕಾ ಲಿಂಗ ಕೊರಳಲಿ
ಗಟ್ಟಿಗನು ಮೊಲೆಯುಣ್ಣಲಿಲ್ಲವು ರುದಿಸಲಿಲ್ಲಾಗೆ ।
ಕಟ್ಟಿದೊಡನೆಯೆ ಲಿಂಗ ಕಂಠದಿ
ದಿಟ್ಟನಾತನು ಮೊಲೆಯ ಕುಡಿದನು
ಹುಟ್ಟಿನಿಂದಂ ಲಿಂಗಯುತನಿಹ ಬಸವಗಾನತವು ॥೩೯॥

ಇದ್ದು ಶ್ರೀ ಗುರು ಸಂಗಮೇಶನ
ಗೆದ್ದು ಷದ್ರಿಪುಗಳ ಸಮರ್ಥನ
ಶುದ್ಧ ಮನದಿಂದೆಂಟು ವರ್ಷದ ತನಕ ಬಳಿಯಲವಗ ।
ಸಿದ್ಧಿಗಳ ಮೋಕ್ಷ ಧರ್ಮದರಿವನು
ಮುದ್ದಿನಿಂದಂಗಳಿಸಿಕೊಂಡಿಹ
ಬುದ್ಧಿ ಸಾಗರನಾದ ಬಸವನ ಪಾದ ನಮಿಸುವೆವು ॥೪೦॥

ಬಳಿಕ ದಶವರ್ಷಗಳ ಕಳೆದಿಹ
ಬಲು ಹುರುಪಿನಿಂ ಧರ್ಮ ಹರಡುವ
ಬಲುಹು ಪುಣ್ಯದ ಕಾರ್ಯವನು ಗೆಯ್ದು ವಲಿಸಮಯುವನು ।
ತಿಳಿ ವಿನಾಕೃತಿಯಾದ ಪ್ರಭುವನು
ತಿಳಿದು ಗುರುವೊದವನ ಚರಣದಿ
ಸಲೆ ಭಕುತಿಯಿಟ್ಟಿರುವ ಬಸವಗೆ ಮುದದೆ ನಮಿಸುವೆವು ॥೪೧॥

ವರ ಶಿವಾನುಭವಾಖ್ಯ ಸಭೆಯಲಿ
ಹಿರಿಯ ಸ್ಥಾನಕೆ ದೊರೆಯುನಾಗಿಹ
ಗುರುವರೇಣ್ಯನ ಚೆನ್ನ ಬಸವನ ಮಾವನಾಗಿರುವ ।
ಗುರುವು ತಾಮಾದೇವಿಗಾಗಿಹ
ಸರುವ ಲೋಕಕೆ ವಂದ್ಯನಾಗಿಹ
ಪರಮ ದೇಶಿಕ ಬಸವನಂಘ್ರಿಗೆ ವಂದಿಪೆವು ಮುದದೆ ॥೪೨॥

ಜೈನ ಧರ್ಮದ ರಾಜನಾಗಿಹ
ಮಾನಿ ಬಿಜ್ಜಳನಲ್ಲಿ ಮೊದಲಲಿ
ತಾನು ಮಾಡುತ್ತಿರಲು ಸಲೆಕರಣಿಕರ ಕೆಲಸವನು ।
ಜಾಣ ನೃಪನಾ ಮುಂದೆ ಬಿದ್ದಿಹ
ಕಾಣದಿಹದಲಿ ಲಿಪಿಯ ಪಟದಿಂ
ಜ್ಞಾನಿ ತಾನುನ್ನತಿಯ ಪಡೆದಿಹ ಬಸವನಿಗೆ ನತಿಯು ॥೪೩॥

ಹೋಗು ನೃಪ ಸಭೆಯಲ್ಲಿ ಬಿದ್ದಿಹ
ಬೇಗ ತಾವ್ರದ ಪಟವನೋದಲು
ಹೋಗು ನಿನಗದನೋದ ಬರುವದು ಬಾರದನ್ಯರಿಗೆ ।
ಹೀಗೆ ಹೇಳಿದ ಗಗನವಾಣಿಯ
ರಾಗದಿಂದಂ ಕೇಳಿ ನೃಪನಂ
ಸ್ಥಾನಕ್ಕೈತಂದಿರುವ ಬಸವನ ಪಾದಕೆರಗುವೆವು ॥೪೪॥

ಬಿದ್ದ ತಾಮ್ರದ ಪಟವು ಬಳಿಯ
ಲ್ಲಿದ್ದು ತಕ್ಕೊಂಡನು ನೃಪಾಲನು
ಪದ್ಧತಿಯ ತೆರವಿರದ ಲಿಪಿಯನ್ನೋದ ತಿಳಿಸಿದನು ।
ಬುದ್ಧಿ ನಿಧಿಯಾಗಿರುವ ಬುಧರಿಗೆ
ಬುದ್ಧಿ ಸಾಲದೆ ಹೋಯ್ತು ಸಕಲರ
ಮುದ್ದಿನಿಂದದನೋದ ಬಂದಾ ಬಸವನಿಗೆ ನತಿಯು ॥೪೫॥

ಹೇಳಿದನು ಭೂಪತಿಗೆ ವಿನಯದೆ
ಕೇಳುವದು ಪಟ ವಾಚಿಸುವೆ ನಾಂ
ಕೇಳಿಯೀತನ ಮಾತು ನಕ್ಕರು ಸರ್ವ ಪಂಡಿತರು ।
ತಾಳಿ ಶಾಂತಿಯ ನೃಪನದುರಿನಲಿ
ಭಾಲ ಲೋಚನ ಭಕ್ತ ನಿಂತನು
ಶೀಲಭೂಷಿತ ಬಸವ ನೃಪಗಾ ವಂದಿಪೆವು ಮುದದೆ ॥೪೭॥

ಓದಲಿಕೆ ನಿನಗದನು ಬಂದರೆ
ಮೋದವಾಯಿತು ರಾಜನೇದನು
ವಾದ ಮಾಡೆವು ವಾಚಿಸೇದರು ನಿಖಿಲ ಪಂಡಿತರು ।
ಓದಿದನು ಧನವಿರುವದಿಂಥಲಿ
ಮೇದಿನಿಯೊಳರವತ್ತು ಕೋಟಿಯು
ಭೂಧವಗೆ ತಾನಿಂತು ಪೇಳಿದ ಬಸವನಿಗೆ ನತಿಯು ॥೪೮॥

ತೋರಿಸೇದರು ಬುಧರು ಸರ್ವರೂ
ಧೀರನೇ ನೀ ದ್ರವ್ಯವನ್ನದು
ತೋರಿಸಿದರೆಯೆ ಸತ್ಯಗಣಿಪೆವು ವಾಚನವು ನಿನ್ನ ।
ತೋರಿಸೇದನು ದ್ರವ್ಯವೆಲ್ಲಿದೆ
ಧಾರುಣೇಶನು ಹುರುಪಿನಿಂದಂ
ತೋರಿಸಿದ ಧನ ಬಸವ ರಾಜಗೆ ನಮನ ಮಾಡುವೆವು ॥೪೮॥

ಹರುಷವಾಯಿತು ನೋಡಿ ಧನವನು
ನಳಪತಿಗೆ ಬಲು ಬಳಿಕ ನೃಪತಿಯು
ಹಿರಿಯದಾಗಿಹ ಮಂತ್ರಿ ಪದವನ್ನೀಯೆ ಬಸವನಿಗೆ ।
ಸರುವರಿಗೆ ಪ್ರೀಯನಾಗಿ ಬಿಟ್ಟನು
ತ್ವರದೆ ಪ್ರಜೆರಿಗೆ ಮಾಡಿ ಹಿತವನು
ಮೆರೆದ ಬಸವನ ದಿವ್ಯ ಚರಣಕೆ ಮಣಿಯುವೆವು ನಾವು ॥೫೦॥

ಬಂದು ಕೂಡಿದರೆನಿತೊ ಶರಣರು
ಬಂಧುರನ ಸತ್ಕೀರ್ತಿಯಾಲಿಸಿ
ತಂದೆಯೀತನ ಸಂಗದಿಂ ತಾವಾದರೆನಿತೊ ಜನ ಶರಣರು ।
ಕಂಡು ಗೊರಳನ ಸದೃಶ
ಹೊಂದಿದರು ಜಂಗಮರ ಸ್ಥಾನವ
ನಂದು ಪಲವರು ವಿನುತ ಬಸವನ ಚರಣ ನಮಿಸುವೆವು ॥೫೦॥

ಮಾಡುವಾಗಳು ಮಂತ್ರಿ ಕಾರ್ಯವ
ನಾಡೆ ಧರ್ಮವ ಹರಡುತಿದ್ದನು
ಗಾಢ ತೋಷದೆ ಬೋಧಕರ ತಾಂ ಕಳಿಸಿ ಸುತ್ತೆಲ್ಲ ।
ಕೊಡುತ್ತಿದ್ದರು ಜನರು ನಿತ್ಯವೂ
ಜೋಡಿಯಿರದೀ ಧರ್ಮದಲಿ ತಾವ್
ಮೂಡಿರುವನೀ ಜಗದಿ ಶಿವಗಾ ವಂದಿಪೆವು ನಾವು ॥೫೧॥

ಭೋಜನವ ಸಲ್ಲಿಸುತಲಿದ್ದನು
ಮೂಜಗದಿ ಪ್ರಖ್ಯಾತ ನೀತನು
ಸಾಜ ಎದುಗಡ ನಿತ್ಯ ಲಕ್ಷಾಂತರ ಸುಜನಗಳಿಗೆ ।
ರಾಜರುಣ್ಣುತ್ತಿರುವ ಭೋಜನಗಳಿಗೆ ಜನ
ನೈಜ ಸಿದ್ಧನು ಮಾಡಿಸುತ್ತಿರೆ
ಸೋಜಿಗದಿ ಕೆಡವಿರುವ ಜನರನು ಬಸವಗಾನತವು ॥೫೨॥

ಮತ್ತೆ ಮುಂದಿನ ಸಂಧಿಗಳಲೀ
ಸತ್ತಮನ ಚಾರಿತ್ರ್ಯವೊರೆವೆವು
ಮುತ್ತಿನೊಲು ಹಸನಾದ ಮನಸಿನ ಬಸವಗುರುವರನ ।
ಚಿತ್ತ ಜನ ಸಲೆ ಗೆಲೆದ ವೀರನ
ಚಿತ್ತ ಚಾರಿಯ ಪರಮಭಕ್ತನ
ಕುತ್ತು ದೂರಾಗುವದು ನೆನೆದರೆ ನಾಮವಾಪರನ ॥೫೩॥

ಇದ್ದರೈ ಶಿವಬಸವಯತಿಗಳು
ಬುದ್ಧಿಗಳು ತಾವ್ ನಾಗಯೂರಿನ
ಸಿದ್ಧರಾ ಕೆಂಪಯ್ಯರಾ ಸ್ವಾಮಿಯ ಕೂಡ ಬಾಲ್ಯದಲಿ ।
ಮುದ್ದಿನಿಂ ಶಿವಯೋಗ ಸದನದೊ
ಳಿದ್ದು ಯೋಗಾಭ್ಯಾಸಗೆಯ್ದರು
ಗೆದ್ದ ಮಾರನ ಯತಿಗಳೀ ರುದ್ರಾಕ್ಷಿ ಮಠದವರು ॥೫೪॥

ಬಂದರಾ ಮೇಲೈದು ವರ್ಷದಿ
ಬಂಧುರರ ಕೆಂಪಯ್ಯಯತಿಗಳ
ತಂದೆಗಳ ಜತೆ ಮರಳಿ ವಾಸಿಸ ಮರಡಿಮಠದಲ್ಲಿ ।
ನೀದು ಬಿಟ್ಟರು ಬಳಿಕ ಸಿದ್ಧರು
ಮುಂದೆ ಹುಬ್ಬಳ್ಳಿಗೈದು ವನಕಾ
ಹೊಂದಿ ಸಿದ್ಧರ ಹರಕೆಯನುಮತಿ ಬಳಿಕ ಸ್ಥಾಪಿಸಲು ॥೫೫॥

ಹೋದರು ಶಹಾಪೂರ ನಗರಕೆ
ಮೋದದಿಂ ಬೋರ್ಡಿಂಗ ವಿಡಲಿಕೆ
ವಿದಯಾಳುವು ಸಾಲೆಕಲಿಯುವ ಬಾಲಕರಿಗಾಗಿ ।
ಸೋದರರು ಬಡಜನರಿಗಾಗಿಹ
ಮೇದಿನೀ ಶಿವನಾದ ಸಿದ್ಧರ
ಬೋಧವನು ಮೇಣ್ ಧನದ ಸಹಾಯವ ತಾವು ಪಡಕೊಂಡು ॥೫೬

ನಡೆಸಿದರು ಬೋರ್ಡಿಂಗವನು ಸಲೆ
ಬಿಡದೆ ದಿನರಾತ್ರಿಯಲಿ ಶ್ರಮಿಸುತೆ
ಕಡು ಹುರುಪಿನಿಂ ಜಾಣತನದಿಂ ಸ್ವಾಮಿಗಳು ತಾವು ।
ಪಡೆಯುತಿದ್ದರು ಧನದ ನೆರವನು
ಕಡು ವಿನಯಿಗಳು ಯೋಗ್ಯ ಜನರಿಂ
ಕೊಡುತಲಿದ್ದರು ಜಾಣ ಧನಿಕರು ಯತಿಗೆ ಧನವನ್ನು ।೫೭॥

ಇನ್ನು ಪೇಳ್ವೆವು ಶಿವಬಸವರಾ
ಚೆನ್ನ ಕಾರ್ಯವನೀ ಪುರಾಣದಿ
ನನ್ನಿ ಸಂಗತಿ ಯೋಗ್ಯ ಸ್ಥಳದಲಿ ಭಕ್ತರೇ ನಿಮಗೆ ।
ಗನ್ನ ಸೇವೆಯ ನೆಸಗಿರುವರೀ
ಪನ್ನಗಾಲಂಕೃತನ ಭಕ್ತರು
ಚೆನ್ನದಂತಹ ಲಿಂಗವಂತರ ಧರ್ಮಿಗಳದಿವರು ॥೫೮॥

ಪರಗೆ ಕರುಣಾ ಜಲಧಿಯಾಗಿಹ
ಗಿರಿನಿವಾಸಗೆ ಗಿರಿಜೆ ಯಾಣ್ಮಗೆ
ವಿರುತ ಸಹಜಾನಂದದಲಿ ಬಲು ಮೆರೆವ ಶಂಕರಗೆ ।
ಧರಿಸಿರುವ ವ್ಯಾಘ್ರಾಜಿನವ ಮೇಣ್
ಧರಿಸಿರುವ ಕರಿ ಚರ್ಮವನು ತಾಂ
ಸರುವ ವಿಶ್ವದ ಜನಕ ಸಾಂಬಗೆ ಸತತ ಜಯವಿರಲಿ ॥೫೯॥

( ಆರನೆಯ ಸಂಧಿ ಮುಗಿದುದು )



## ಏಳನೆಯ ಸಂಧಿ

ಸೂಚನೆ:— ಮೂರುಸಾವಿರ ಮಠಕೆ ಸ್ವಾಮಿಯ
ವೀರಯತಿ ಕೆಂಪಯರ ಮಾಡಲು
ಕಾರುಣಿಕ ಕುಮಾರಗುರು ಕರೆದೊಯ್ದರವರನ್ನು

ಶ್ರೀ ಗಜಾನನ ಗುಹರ ಜನಕನು
ನಾಗಭೂಷನು ಪಾರ್ವತೀಶನು
ಯೋಗಿಗಳ ಹೃತ್ಸದನವಾಸನು ಪಂಚ
ನಾಗ ಚರ್ಮಾಂಬರನು ಮುಖದವನು
ರಾಗದಿಂದಂ ವಿಶ್ವ ಸಾಹುವ ಸಾಂಬನು
ಭೂಗಗನಗಳನ್ನೆಲ್ಲ ತುಂಬಿಹ ಶಿವನು ರಕ್ಷಿಸಲಿ ॥೧॥

ಮರಡಿಮಠದಿಂ ಹೋದಮೇಲಾ
ಗುರುಕುಮಾರರು ಹಾನಗಲ್ಲದ
ಪರಮಲಿಂಗಾಯತರ ಒಪ್ಪ ಭಿಮಾನಿಗಳು ತಾವು ।
ಹಿರಿಯದು ಗುಡದೊಳಾಗೆ ಬಿದ್ದರು
ಗುರುಗಳನು ಕೆಂಪಯ್ಯನವರನು
ಮರೆವ ಹುಬ್ಬಳಿ ಮಠಕೆ ಮಾಡುವ ಮಾರ್ಗ ದೊರೆಯದಕೆ ॥೨॥

ನೋಡಿ ಕೆಂಪಯ್ಯನವರ ಸ್ಥಿತಿಯನು
ನಾಡೆ ತಮ್ಮಯ ಕಣ್ಣಳಿಂದಂ
ಮಾಡಬೇಕೇನವರು ಜನರು ವಿರೋಧಿಸುತ್ತಿಹರು ।
ಮಾಡಿದರು ನಮ್ಮಾಜ್ಞೆ ಮಾನ್ಯವ
ಗಾಢ ಭಕ್ತಿಯು ನಮ್ಮ ಮೇಲಿದೆ
ನೋಡಿ ಮನಗಂಡಿಹೆನು ಯತಿಗಳ ಗುಣಗಳೆಲ್ಲವನು ॥೩॥

ಬೇಕು ಹುಬ್ಬಳಿ ಮಠಕೆ ನೈಜ ವಿ
ವೇಕ ಶೀಲರು ಚತುರ ಪುರುಷರು
ನೂಕಿರುವ ಬಹುದೂರ ವಿಷಯದ ಸುಖವ ನಂಥವರು ।
ಜೋಕೆ ಮಠ ಕೀರ್ತಿಯನು ಗೆಯ್ಯುವ
ಸಾಕುತಿಹ ಭಕ್ತರನು ಕರುಣದೊ
ಳೀ ಕೆಲಸ ಸಲೆ ಮಾಡಬಲ್ಲರು ವಿನುತ ಕೆಂಪಯರು ॥೪॥

ಭಕ್ತಿ ಜನಗಳ ಹೆಚ್ಚಿಗಿರುವದು
ಶಕ್ತ ಕೆಂಪಯ್ಯನವರೊಳತ್ತಿನ
ಶಕ್ತರಲ್ಲವು ಜನರ ಮಾತನು ಮೀರುವನಿತವರು
ಶುಕ್ತಿ ಒದಸಮ ಹಸನ ಮನಸಿನ
ಮುಕ್ತಿ ಸತಿ ವಲ್ಲಭರು ಕೆಂಪಯ
ಯುಕ್ತಿ ದೊರೆಯದು ಮೂರುಸಾವಿರ ಜಗದಗುರು ಮಠಕೆ ॥೫॥

ಹೇಗೆ ಗುರುಗಳ ಮಾಡಬೇಕಿದು
ಸಾಗಲಾರದು ಬೇರೆಯವರಿಂ
ಯೋಗಿ ಕೆಂಪಯನವರ ಯೋಗ್ಯರು ಗುರುಗಳಾಗಲಿಕೆ ।
ಹೋಗಲೀ ಕೆಲ ದಿವಸ ನೋಡುವ
ಭೋಗಿಭೂಷಣ ಬಯಕೆ ತೆರದೊಳು
ಸಾಗುವವು ಜಗದೊಳಗೆ ಕಾರ್ಯವು ಸರ್ವವೂ ತಾವು ॥೬॥

ಮಾಡಿಕೊಂಡರು ಶಾಂತಿ ಮನಸಿಗೆ
ನಾಡೆಯಾಗಳು ಹಾನಗಲ್ಲದ
ನಾಡಿನೊಳು ಬಹು ಕೀರ್ತಿವಡೆದ ಕುಮಾರಯತಿವರರು ।
ಕಾಡಹತ್ತಿತು ಮತ್ತೆ ಚಿಂತೆಯು
ಜೋಡಿಯಿರದಾ ಯತಿಯ ಮನವನು
ಮಾಡಿ ಬಿಡುವೆನು ಮೂರುಸಾವಿರಮಠಕೆ ಸ್ವಾಮಿಯನು ॥೭॥

ಗನ್ನ ಯೋಗ್ಯತೆಯುಳ್ಳ ಕೆಂಪಯ್ಯ
ನನ್ನು ಯತ್ನಿಸಿ ಯುಕ್ತಿ ಯೋಜಿಸಿ
ನನ್ನ ಮನಸಿಗೆ ಬಂದ ಮಾತನು ಮಾಡದೇ ನಾನು ।
ನನ್ನ ಜನ್ಮದಿ ಮಾನದೇ ನಾಂ
ಚೆನ್ನ ಕಾರ್ಯಂಗಳನು ಗೆಯ್ದೆನು
ನನ್ನಿ ಹಾದಿಯ ತುಳಿವ ನರರಿಗೆ ಜಯಸಿಗದೆ ಬಿಡದು ॥೮॥

ಎಂದು ಪುರುಷಿಂ ಮತ್ತೆ ಯತ್ನಕೆ
ಬಂಧುರರು ಸಲೆ ಹತ್ತಿಬಿಟ್ಟರು
ನಂದದಿಂದಂ ಪತ್ರ ಬರೆದರು ಶಿವಬಸವಯತಿಗೆ ।
ಹಿಂದೆ ತಾವ್ ಕೆಂಪಯ್ಯನವರನು
ಕುಂದಿರದ ಚಾರಿತ್ರ ಯುತರನು
ಸುಂದರಾನ್ವಿತ ಮೂರುಸಾವಿರಮಠಕೆ ಸ್ವಾಮಿಯನು ॥೯॥

ಮಾಡಬೇಕೆಂದೆಣಿಸಿ ಹೋದೆವು
ಗಾಢ ತೋಷದೆ ಮರಡಿಮಠಕಾ
ನಾಡಿನೊಳು ಹೆಸರಾದ ಕೆಂಪಯ್ಯನವರಿಗರುಹಿದೆವು ।
ಕೂಡಲೇ ಆಯತಿಯ ಭಕ್ತರು
ಮಾಡಿದರು ಪ್ರತೀಕಾರ ಹೆಚ್ಚಿಗೆ
ಮಾಡಗೊಡೆವೀ ಸಿದ್ಧರನು ಪರಮಠಕೆ ಸ್ವಾಮಿಯನು ॥೧೦॥

ಎಂದು ರೋಷದೆ ಹಲವು ಜನಗಳು
ಬಂದು ಕೂಗುತೆ ಹೇಳುತ್ತಿದ್ದರು
ಕೊಂದು ಬಿಡುವೆವು ಕರೆಯ ಬಂದಿಹ ಜನರನೆನ್ನುತ್ತ ।
ಬಂದಿರಲು ತಾವ್ ಧರಿಸಿ ಕೈಯಲಿ
ಮಂದಿ ಕೆಲವರು ಕೋಲು ಕೊಡಲೆಯ
ಬಂದೆವಾ ತರುವಾಯ ಸುಮ್ಮನೆ ತಿರುಗಿ ನಾವೆಲ್ಲ ॥೧೧॥

ಪರಮಯತಿಗಳೆ ಕಾರ್ಯವಾಗದೆ
ಹಿರಿಯ ಕೆಲಸವ ಮಾಳ್ಪುದೈ ನೀವ್
ಗುರುಗಳಿರುವಿರಿಯವರ್ಗೆನುಗ್ರಹ ಗೈದವರು ನೀವು ।
ಬರೆದರೀ ಪರಿಯೆಲ್ಲ ಸಂಗತಿ
ಹಿರಿಯ ಗುರುಗುಳು ಹಾನಗಲ್ಲದ
ಕರೆಸಿಯವರನು ಮತ್ತೆ ಪೇಳ್ದರು ಸರ್ವ ವೃತ್ತವನು ॥೧೨॥

ವಾಸಿಪರು ಹಾವೇರಿ ಪುರದಲಿ
ತೋಷದಿಂ ಶಿವಬಸವ ಯತಿಗಳು
ಲೇಸು ಕಾರ್ಯವನೆಸಗುತಿಹ ಹುಕ್ಕೇರಿ ಮಠದವರು ।
ಭೂಷಣರು ಶಿವ ಮತಕೆ ನೈಜವು
ಶೇಷಭೂಷನ ಭಕ್ತ ಕೆಂಪಯ
ಗೀಶ ಸನ್ನಿ ಭರವರು ಗುರುವೆಂಬುದನು ಹೇಳಿಹೆವು ॥೧೩॥

ಹೇಳಿದರು ಶಿವಬಸವ ಯತಿಗಳು
ತಾಳಿ ಹುರುಪನು ಹಾನಗಲ್ಲದ
ಮೇಲು ಗುರುವಿಗೆ ನಾನು ಪೇಳ್ವೆನು ಕಾರ್ಯವನ್ನಿದನು ।
ಹೇಳಿದೊಲು ನೀವ್ ಕೇಳಿದವರೇ
ಕೇಳಿರೈ ನೀವ್ ನಮ್ಮ ಧರ್ಮದಿ
ಖೂಳರಿಲ್ಲವು ಮನುಜರೊಬ್ಬರು ಸತ್ಯವಾದುದಿದು ॥೧೪॥

ಕಳೆದವನಿತರೊಳಾರು ತಿಂಗಳು
ಕಳೆದರಾ ಕಾಲವನು ಕೆಂಪಯ
ಒಲಾಹು ಸುಖ ಶಾಂತಿಯಲಿ ಸರ್ವವು ಹಿಂದ್ಗಿನೊಲು ತಾವು ।
ಸಲೆಸು ಭಕ್ತರ ಬಯಕೆಯೆಲ್ಲವ
ಫಳಿಲನೇ ತಾವ್ ಪೂರ್ಣಮಾಡುತೆ
ಬೆಳೆಸಿ ಬಿಟ್ಟರು ತಮ್ಮ ಸನ್ಮಠದ ಕೀರ್ತಿ ಹೆಚ್ಚಾಗಿ ॥೧೫॥

ಹೋಗಿರಲು ಹುಕ್ಕೇರಿಯೂರಿಗೆ
ಯೋಗಿ ಕೆಂಪಯ ಭಿಕ್ಷೆ ಮಾಡ
ಲಾಗಳಾ ಊರಲ್ಲಿ ಬಂದರು ಗುರುಗಳೀ ಯತಿಯು ।
ರಾಗದಿಂ ದರ್ಶನಕೆ ಹೋದರು
ಬಾಗಿದರು ಗುರುಪಾದ ಕಮಲ
ಕ್ಕಾಗಲೆಂದರು ತಮ್ಮ ಭೋಜನವಿಲ್ಲಿಯೇ ಎಂದು ॥೧೬॥

ಹೀಗೆ ಶ್ರೀ ಶಿವಬಸವ ದೊರೆದುದ
ತ್ಯಾಗಿಗಳು ತಾವ್ ಕೇಳ್ವ ಸಮಯದಿ
ಬಾಗಿಯಾ ಮನೆ ಹಿರಿಯನೊಬ್ಬನು ಯತಿಯ ಚರಣಕ್ಕೆ ।
ಭೋಗುರುವೆ ದಯಗೈದು ಭೋಜನ
ಸಾಗಿಸಿರಿ ನೀವ್ ನಮ್ಮ ಮನೆಯಲಿ
ಸಾಗಿ ಬಂದಿರಿ ನಮ್ಮ ಸದನಕೆ ಪುಣ್ಯವಿದು ನಮ್ಮ ॥೧೭॥

ಮೀರಲಾರದೆ ಗುರುಗಳಾಜ್ಞೆಯ
ವೀರ ಯತಿಗಳು ಮತ್ತೆ ಮನೆಯಾ
ಭೂರಿ ವಿನಯದೆ ಭಕ್ತ ಗೆಯ್ದಿಹ ಬಿನ್ನಪವ ತಾವು ।
ಕಾರುಣಿಕರುರೆ ಮಾನ್ಯಗೈದರು
ತೀರ ತುಸು ವೇಳೆಯಲಿ ಭೋಜನ
ಸಾರವಾದುದು ಸಿದ್ಧವಾಯಿತು ಸ್ನಾನಮಾಡಲಿಕೆ ॥೧೧॥

ಬಿನ್ನವಿಸಲಾ ಮನೆಯ ಭಕ್ತನು
ತನ್ನ ಕೈಗಳ ಮುಗಿದು ಹರುಷದೆ
ಗನ್ನ ಕೀರ್ತಿಯನಾಂತ ಸದ್ಗುರು ವರ್ಯರಿರುಭಯರಿಗೆ ।
ಸನ್ನು ತರು ತಾವ್ ಸ್ನಾನ ತೀರಿಸಿ
ನನ್ನಿ ಭಕ್ತಿಯ ಭಾವದಿಂದಂ
ಪನ್ನಗಾಲಂಕೃತನ ಪೂಜೆಯ ಮಾಡಿದರು ಬಳಿಕ ॥೧೯॥

ಗುರುಗಳವರಾರೆಂಬುವದು ನೀವ್
ವರಿತು ಕೊಂಡಿರಬೇಕು ಮನದಲಿ
ಸರುವ ಶ್ರೋತೃರು ತಿಳಿಯದವರಿಗೆ ಪೇಳುವೆವು ನಾವು ।
ಅರಿಯಿರೈ ಹಾವೇರಿ ಪುರದಲಿ
ಮೆರೆವ ಬಲು ಹುಕ್ಕೇರಿ ಮಠದಾ
ಪರಮ ಗುರುಗಳು ಶಿವಬಸವರೆಂಬವರೆ ತಾವಿವರು ॥೨೦॥

ಬಳಿಕ ಶಿರಸಾಷ್ಟಾಂಗದಿಂದಂ
ಸಲೆಯೆರಗಿ ಗುರುಪಾದ ಕಮಲಕೆ
ತಿಳಿಮನದ ಕೆಂಪಯ್ಯ ಸ್ವಾಮಿಯು ಬಟ್ಟಲವ ಪಿಡಿದು ।
ನಿಲಯ ಕರುಣೆಯದಾದ ಗುರುಗಳೆ
ಚಲಿಸದಿಹ ಧೃತಿಯುತರೆ ಈವುದು
ಬಲುಹು ದಯದೆ ಪ್ರಸಾದವನು ತಾವೆಂದು ಪೇಳಿದರು ॥೨೧॥

ಆಗಲಾ ಕೆಂಪಯ್ಯನವರಿಗೆ
ಯೋಗಿಗಳು ಶಿವಬಸವ ಗುರುಗಳು
ಹೀಗೆ ಪೇಳ್ದರು ನಮ್ಮ ವಚನವ ನಡೆಸುತಿಹೆವೆಂದು ।
ತ್ಯಾಗಿಗಳೆ ನೀವ್ ವಚನ ಕೊಟ್ಟರೆ
ರಾಗದಿಂದೆ ಪ್ರಸಾದ ಕೊಡುವೆವು
ಹಾಗು ನಾವು ಪ್ರಸಾದ ಸೇವನೆಯನ್ನು ಮಾಡುವೆವು ॥೨೨॥

ಇಲ್ಲದಿರಲು ಪ್ರಸಾದ ಸೇವನೆ
ಬಲ್ಲಿರಾ ನಾವ್ ಮಾಡಲಾರೆವು
ಇಲ್ಲಿಯೇ ವಿಶ್ರಮಿಸಿ ಬಿಡುವೆವು ತಿಳಿದುಕೊಳ್ಳುವದು ।
ಮೆಲ್ಲೆದೆಯ ಕೆಂಪಯ್ಯ ಯತಿಗಳಿ
ಗೆಲ್ಲವೂ ತಾನಿತ್ತು ವಿದಿತವು
ಮೆಲ್ಲನೇ ಹೇಳಿದರು ಯತಿಗಳು ಮಹಿತ ಗುರುಗಳಿಗೆ ॥೨೩॥

ನನ್ನ ಮೇಲಿದೆ ನಿಮ್ಮ ಸತ್ಕೃಯು
ಗನ್ನ ಮಹಿಮರೆ ಮಾಳ್ಪುದಾಜ್ಞೆಯ
ಸನ್ನುತರು ಶಿವಬಸವ ಗುರುಗಳು ಹೇಳಿದರು ಬಳಿಕ ।
ಚೆನ್ನ ಕಾಲವು ನಿಮಗೆ ಬಂದಿದೆ
ನನ್ನಿಯೇ ಉತ್ಕರ್ಷವನು ನೀ
ವಿನ್ನು ಪಡೆವಿರಿ ನಿಮ್ಮ ಕಲ್ಯಾಣವನೆ ಮಾಡುವೆವು ॥೨೪॥

ಮೆರೆವ ಹುಬ್ಬಳಿ ಪುರದಿ ಮೆರೆಯುವ
ವರ ಜಗದ್ಗುರು ಪರಮ ಮಠಕಾ
ಗುರುಗಳಾಗಿರಿ ಮೂರುಸಾವಿರಮಠದ ಕೀರ್ತಿಯನು ।
ಧರೆಯೊಳಗೆ ನೀವ್ ಸುತ್ತುಕಡೆಯ
ಲ್ಲಿರಿತು ಬೆಳೆಸುವಿರೆಂಬುವದನು ನಾವ್
ಹರುಷದಿಂದಪ್ಪಣೆಯ ಮಾಳ್ಪೆವು ನಿಮ್ಮ ಹಿತಕಾಗಿ ॥೨೫॥

ಮಾಡುವದು ಲಿಂಗಾಯತರ ಹಿತ
ನಾಡೆ ನೀವಾ ಮಠದ ನೆರವಿ
ಮಾಡಲಿಕೆ ಜನಿಸಿಹಿರಿ ಲೋಕದಿ ಲೋಕಕಲ್ಯಾಣ ।
ಕೂಡಲೇ ತಾವೊಪ್ಪಿಕೊಂಡರು
ಗಾಢ ತೋಷದೆ ಗುರುಗಳಪ್ಪಣೆ
ನೀಡಿ ಬಿಡಲು ಪ್ರಸಾದ ಕೂಡಲೆ ಕೆಂಪಯ್ಯರಿಗವರು ॥೨೬॥

ಬಳಿಕ ಭೋಜನ ಮುಗಿಸಿಯುಭಯರು
ಬಲು ಮುದದೆ ತರುವಾಯು ಗುರುಪದ
ಜಲಜಗಳಿಗೆರಗಿದರು ಹೋಗಲು ಕೇಳಿಯಪ್ಪಣೆಯ ।
ಘಳಿಲನೇ ತಾವ್ ಹೋಗಿ ಬಿಟ್ಟರು
ತಳೆದು ಶಾಂತಿಯು ಭಕ್ತ ಜನರಿಗೆ
ತಿಳಿಸಿದರು ಕರೆಕರೆಸಿ ಸರ್ವರ ಗುರುಗಳಾಜ್ಞೆಯನು ॥೨೭॥

ಮೀರಲಾರದೆ ಒಪ್ಪಿಕೊಂಡೆನು
ಧಿರದೇ ನೀವ್ ಕೊಡುವದನು ಮತಿ
ಮಾರಹರ ನಿಚ್ಚೆಯೊಲು ಘಟಿಪವು ಸಕಲ ಕಾರ್ಯಗಳು ।
ದೂರ ಹೋದರು ಬಿಟ್ಟು ನಿಮ್ಮನು
ಸಾರವಾದೀ ಸಿದ್ಧ ಮಠವನು
ಮಾರಹರನಂ ಸ್ಮರಿಸಿ ಪೇಳ್ವೆನು ಮರೆಯನೆಂದೆಂದೂ ॥೨೮॥

ಬರುವೆನಲ್ಲಿ ಕೊಡಲು ದರ್ಶನ
ಹರುಷದಿಂ ಮೇಲಿಂದ ಮೇಲೀ
ಪರಮ ರಮ್ಯಸ್ಥಳ ಬಿಡದೇ ನಿಮ್ಮ ನೋಡಲಿಕೆ ।
ಅರಿಡಿ ಪ್ರೇಮದೊಳಖಿಲರನುಮತಿ
ಗುರುಗಳೀ ಸಲೆ ಪಡೆದುಕೊಂಡರು
ತೊರೆಯ ಬೇಡಿರಿ ಮರಡಿ ಮಠವನ್ನೆಂದು ಕೆಲ ಜನರು ॥೨೯॥

ಹೇಳುತಿದ್ದರು ಪ್ರೇಮದಿಂದಂ
ಕೇಳಿಯಂತಹ ಜನರ ಮಾತನು
ಮೇಲು ಯತಿಗಳ ಕಣ್ಣಿನೊಳು ದುಃಖಾಶ್ರು ತುಂಬುತಿರೆ ।
ಓಲೆ ಬಂದಿತು ಹಾನಗಲ್ಲದ
ಶೀಲ ಭೂಷಣ ಸಿದ್ಧರಿವರಿಗೆ
ಕೇಳಿರೈ ಸದ್ಭಕ್ತ ಜನರೇ ಲೇಖಿ ಶಿರಲಿಂತು ॥೨೦॥

ಕರೆಯಲಿಕೆ ಜವನಾವು ಬರುವೆವು
ತ್ವರಿತದೊಳು ನೀವ್ ನಿಮ್ಮ ಸಿದ್ಧತೆ
ವರ ಯತಿಗಳೇ ಮಾಡಿಕೊಳ್ಳಿರಿ ಸರ್ವವನು ನೀವು ।
ಹರುಷವಾಯಿತು ಬರುವರೆಂಬುದು
ಗುರುವರರು ಜವದೊಳಗೆ ತಿಳಿದಿದು
ತೊರೆಯ ಬೇಕಾದುದಕೆ ಮಠವನು ಮನಕೆ ನೋವಾಯ್ತು ॥೨೧॥

ಕಳೆದ ಮೇಲ್ನಾಲ್ದಿವಸ ಬಂದರು
ನಿಲಯರಾಗಿಪ ಶಾಂತತನದಲಿ
ಚಲುವು ಕಾರ್ಯಂಗಳನು ಗೆಯ್ವ ಕುಮಾರಯೋಗಿಗಳು ।
ಒಳಿತು ಮನಸಿನ ಭಕ್ತ ಜನಗಳು
ಬಲುಮಮತೆಯಿಂ ಬಂದಿರಲು ತಾವು
ತಿಳಿಯುವದು ನೀವ್ ಮೊದಲು ಬಂದಿಹ ಭಕ್ತರೆ ಅವರು ॥೨೨॥

ಸರ್ವರನು ಬರಮಾಡಿಕೊಂಡರು
ಶರ್ವನಂತಿಹ ವಿನುತಯತಿಗಳು
ಸರ್ವರೂ ಸಂತೋಷಿಸುವ ತೆರ ವೆಸಗಿ ಸತ್ಕಾರ ।
ಗರ್ವವೆಂಬುದು ವಿದಿತವಿಲ್ಲದ
ಪಾರ್ವತೀಶನ ಕಂಡ ಸಿದ್ಧನ
ಪರ್ವತದ ವೋಲ್ ಸ್ಥೈರ್ಯಮನಸಿನ ಭಕ್ತವರರಿವರು ॥೨೩॥

ಮರಡಿಮಠವನು ತೊರೆದು ಹುಬ್ಬಳಿ
ಪುರಕೆ ಗಮಿಸುವ ಮೊದಲು ಮಠದಲಿ
ಸರುವ ಜನರಿಗೆ ಭೋಜನದೆಸಲೆ ತೃಪ್ತಿಮಾಳ್ಪುದನು ।
ನೆರೆಮನದಿ ನಿಶ್ಚಯಿಸಿ ಗುರುಗಳು
ಹರುಷದಿಂ ಡಂಗುರವ ಸಾರಿಸಿ
ಯರಹಿದರು ಸಲೆ ಹಳ್ಳಿಗಳಿಗಾ ಬರಲು ಭೋಜನಕೆ ॥೩೪॥

ಹಾಕಿದರು ಮೃಷ್ಟಾನ್ನ ಭೋಜನ
ವೇಕ ವಚನದ ಸ್ವಾಮಿ ಕೆಂಪಯ
ಭೂಕಪರ್ದಿಯು ಮುದದೊಳ್ದೆವತು ಸಾವಿರಾಜನಕೆ ।
ಈ ಕರುಣೆಗಳು ಬಳಿಕ ಮರುದಿನ
ಲೋಕ ನಾಯಕ ಗೌರಿನಾಥನ
ನೇಕ ಮನದಿಂ ಮನದಿ ಭಜನೆಯ ಮಾಡಿ ನಸುಕಿನಲಿ ॥೩೫॥

ಮರಡಿ ಮಠಕಧಿಕಾರಿಗೆಯ್ದರು
ಕಿರಿಯ ತಂದೆಯ ಪುತ್ರನನು ತಾವ್
ಗುರು ಕುಮಾರರು ತಾವು ಮತ್ತುಳಿದವರು ಸ್ನಾನವನು ।
ಹರುಷದೀದಂ ಗೈದ ನಂತರ
ಹರುಷದಿಂ ಶಿವಪೂಜೆ ಮುಗಿಯಿಸಿ
ಸರುವರು ಸಂತೋಷದಿಂ ಭೋಜನವ ಮಾಡಿದರು ॥೩೬॥

ಕೂಡಲೇ ತಾನಾಯ್ತು ಸಿದ್ಧತೆ
ನೋಡಿರಾ ಹುಬ್ಬಳಿಗೈದುವ
ಮಾಡಲಿಕೆ ವೇದನೆಯು ಹೋದರು ಕಾಡದೇವಗನು ।
ಬೀಡು ಕರುಣೆಯದಾದ ಸಿದ್ಧನ
ನೋಡಿ ಮನದನಿತು ಸಿದ್ಧರು
ಮಾಡಿದರು ಸ್ತುತಿ ತುಂಬಿ ಕಣ್ಣಲಿ ದುಃಖದಶ್ರುಗಳು ॥೩೭॥

ಪರಮ ಸಿದ್ಧನೆ ಪಾವನಾತ್ಮನೆ
ಪರಮ ಗುರುವೇ ಮೃದುಲ ಹೃದಯನೆ
ಧರೆಯ ಜನಗಳ ದುಃಖಗಳೆಯಲು ಧರೆಯಲುದಿಸಿರುವ ।
ಹರಸಿ ಕರುಣದೆ ಪೊರೆಯು ನನ್ನನು
ಪೊರೆಯು ಮಠದೀ ಭಕ್ತ ಜನರನು
ಮರೆಯನೈ ನಾನೆಲ್ಲಿ ಹೋದರು ಸಿದ್ಧನೇ ನಿನ್ನ ॥೩೮॥

ಎಂದು ಸ್ತುತಿಯನು ಮಾಡಿ ಯತಿಗಳು
ಮುಂದೆ ದೇವರ ಹಚ್ಚಿ ಕಪ್ಪುರ
ವಂದಿಸಿದರೈ ಭಕ್ತಿಯಿಂ ಸಾಷ್ಟಾಂಗದಿಂದವರು ।
ಮಂದಿ ಬಂದರೆ ಕಳಿಸಲವರನು
ಹೊಂದಿ ದುಃಖವ ಸ್ವಾಂತದೊಳು ಬಹು
ಬಂದಿರಲು ಬಲು ಹೆಚ್ಚು ಜನ ಕೊಣ್ಣೂರವಾಸಿಗಳು ॥೩೯॥

ಕರೆದುಕೊಂಡರು ತಮ್ಮ ಜತೆಯಲಿ
ಹಿರಿಯ ಸಿದ್ಧರು ಯಾದವಾಡದ
ತರುಣರಾಗಿಹ ಸ್ವಾಮಿಗಳನಿಬ್ಬರನು ತಾವ್ ಮತ್ತೆ ।
ಕರೆದುಕೊಂಡರು ಪಟ್ಟದಪನನು
ಮರೆಯುತಿಹ ಹಲ ಕರುಣೆಯೂರಿನ
ಹರುಷದಿಂ ಶ್ರೀ ಹಾನಗಲ್ಲದ ಗುರುವರರು ಸಹಿತ ॥೪೦॥

ಕುಳಿತೆರಡು ಬಂಡಿಗಳಲಖಿಕರು
ಚಲುವು ದಿನ ಮಠದಿಂದೆ ಹೊರಟರು
ಬಳಿಯೊಳಿಹ ಗೋಕಾಕನಾಮಕ ರೋಡ ಸ್ಟೇಶನಕೆ ।
ಬಲು ಹರುಷ ಹೊಂದಿದ್ದರಾಗಳು
ಚೆಲುವು ಮನದ ಕುಮಾರ ಗುರುಗಳು
ಸಲೆ ಪದುಳವಡೆದಿದ್ದರೈ ಮೇಣ್ ಭಕ್ತರತ್ತಲಿನ ॥೪೧॥

ಸ್ಮರಣ ಮಾಡುತೆ ಮನದೊಳೆಲ್ಲರು
ಹರನ ನಾಮವ ಭಕ್ತಿ ಪೂರ್ವಕ
ಗುರುವರರ ಬಳಿ ಕುಳಿತಿರಲು ಕೆಂಪಯ್ಯಸ್ವಾಮಿಗಳು ।
ತ್ವರಿತದೊಳಗುಗಿಬಂಡಿ ಬಂದಿತು
ಸರುವರೂ ವಿಶ್ರಮಿಸಿಬಿಟ್ಟರು
॥ ತಿರುತಿರುಗಿ ಮಠದತ್ತ ನೋಡುತ್ತಿರಲು ಕೆಂಪಯ್ಯರು ॥೪೨॥

ಹರುಷ ದೂರಾಗಿತ್ತು ಯತಿಗೀ
ಮರಡಿ ಮಠವನು ಬಿಟ್ಟುದಕೆ ಗಡ
ಹರುಷವಾಗಿರಲಿಲ್ಲ ಹುಬ್ಬಳಿ ವರಮಠಕೆ ತಾವು ।
ಗುರುಗಳಾಗುವೆವೆಂಬ ಮಾತಿನ
ಹಿರಿಯರಪ್ಪಣೆ ಮೀರಲಾರದೆ
ಪರಮಸಿದ್ಧರು ಹೋಗುತ್ತಿದ್ದರು ತಾವು ಹುಬ್ಬಳಿಗೆ ॥೪೩॥

ಧಾರವಾಡದೆ ಗದಗ ಹುಬ್ಬಳಿ
ಯೂರಿನಿಂ ಬಂದಿರುವ ಮಾನ್ಯರು
ಭೂರಿ ಹರ್ಷದೆ ತಿಳಿಸಿರಲು ಹುಬ್ಬಳ್ಳಿ ಹಿರಿಯರಿಗೆ ।
ಸಾರುವೆವು ಹುಬ್ಬಳ್ಳಿ ನಗರಕೆ
ಧೀರರೇ ಈ ದಿವಸ ಬಿಡದೇ
ಮೂರುಸಾವಿರ ಮಠದ ಭಾವೀ ಗುರುಗಳೊಳಗೂಡಿ ॥೪೪॥

ಸ್ವಾಗತದ ಸಿದ್ಧತೆ ಮಾಡಿರಿ
ಯಾಗದೊಲು ನ್ಯೂನತೆಯು ಸ್ವಲ್ಪವು
ಹೋಗಿ ಹೇಳಿರಿ ವಾದ್ಯದವರಿಗೆ ಬರಲು ಸ್ವಾಗತಕೆ ।
ಬೇಗನೇ ಡಂಗುರವ ಸಾರಿಸಿ
ಸ್ವಾಗತಕೆ ಬರಲಿಕ್ಕೆ ತಿಳಿಸಿರಿ
ತ್ಯಾಗದಲಿ ಹೆಸರಾದ ಹುಬ್ಬಳಿ ಪಟ್ಟಣದ ಜನಕೆ ॥೪೫॥

ಆರತಿಯ ಗುರುಗಳಿಗೆ ಬೆಳಗಲು
ಸಾರಿಯದು ನೂರಾರು ಜನಗಳು
ಸೇರಿರಲಿ ಸ್ವಾಗತದ ಕಾಲಕೆ ಸ್ನಾನವನ್ನೆಸಗಿ ।
ದಾರಿಯೆಲ್ಲವು ಧ್ವಜದೆತಳಿರದೆ
ತೋರಣದೆ ಸಿಂಗಾರವಾಗಲಿ
ನೀರಿನಿಂ ತಳಿಹಾಕಿಸಿರಿ ನೆರೆಹಾದಿಯೆಲ್ಲಕ್ಕೆ ॥೪೬॥

ಮಾಡಿದರು ಸಿದ್ಧತೆಯ ಕೂಡಲೆ
ನೋಡಿರಾ ಪಟ್ಟಣದ ಪ್ರಮುಖರು
ಗಾಢತೋಷದೆ ಸ್ವಾಗತಕೆ ಬಂದಿರಲು ಬಹು ಜನರು ।
ನೋಡುತಿದ್ದರು ಸ್ಟೇಶನದಿ ಗಡ
ಕೂಡಿರುವ ಜನರಲ್ಲಿ ಪ್ರಮುಖರು
ನಾಡೆ ತಾವುಗಿಬಂಡಿ ಬರುತಿಹ ಮಾರ್ಗವನು ನಿಂತು ॥೪೭॥

ಬಂದು ನಿಂತಿತು ಬಂಡಿಯಾಗಳು
ಬಂದುಬಿಡಲು ಕುಮಾರ ಯತಿಗಳು
ಬಂದರವರೊಡಗೂಡಿ ಭಾವೀ ಜಗದಗುರುವರರು ।
ನಂದದಿಂ ಚಪ್ಪಾಳಿ ಹೊಡೆಯಿತು
ಮಂದಿ ಬಹು ಸಂತೋಷದಿಂದಂ
ಚಂದವಾಗಿಹ ಪುಷ್ಪಮಾಲೆಯ ಗುರುಗಳುಭಯತರ ॥೪೮॥

ಹಾಕಿದರು ಕಂಠದಲಿ ಮೋದದೆ
ಲೋಕವಂದಿತರಾದ ಗುರುಗಳ
ಜೋಕೆಯಿಂ ಕರಕೊಂಡು ಬಂದರು ಸ್ಟೇಶನದ ಹೊರಗೆ ।
ನೂಕಿ ಸರಿಸುತೆ ಕೂಡಿರುವ ಜನ
ರೇಕ ಮನಸಿನ ಯತಿಗಳನ್ನಾ
ನಾಕ ಪತಿನುತ ಶಿವನನಾಮವ ಘೋಷಿಸುತೆ ಮುದದೆ ॥೪೯॥

ಮಾಡಿದರು ಶೃಂಗಾರವನು ಬಲು
ನೋಡಿರೈ ಮೋಟಾರದೊಳು ಜವ
ಮಾಡಿ ವಂದನೆಗಳನು ಕೂಡ್ರಿಸಿ ಗುರುಗಳು ಭಯರನು ।
ಕೂಡಲೇ ಮೋಟಾರ ಸಾಗಿತು
ಕೂಡಿದರು ಜನರಲ್ಲಿ ಮೆಲ್ಲನೆ
ಮಾಡುತ್ತಿದ್ದರು ಗುರುಗಳಿಬ್ಬರ ನಾಮ ಜಯ ಘೋಷ ॥೫೦॥

ಕರೆಯಲಿಕೆ ಹೋಗಿರುವ ಮಾನ್ಯದ
ಬರುತಿರಲು ಮೋಟಾರವಾಗಳು
ಗುರುವರರು ಕುಳಿತಿರುವ ಮೋಟಾರದದು ಹಿಂದಿಂದೆ ।
ಬರಲು ಮುಂದಕೆ ತುಸುವೆ ಗುರುಗಳ
ಹಿರಿಯದಿಹ ಮೋಟಾರವದು ತಾಂ
ಸರುವ ವಿಧ ವಾದ್ಯಗಳು ಭರದಿಂ ಮೊಳಗ ತೊಡಗಿದವು ॥೫೧॥

ಕರಡೆ ಹಲಗೆ ಸನಾದಿ–ಕಾಳಿಯ
ಪುರುಪಿನಿಂ ಬಾರಿಸುತಲೂದಿಸು
ತಿರಲು ಸಂಬಾಳದವರಾಗಳು ತಮ್ಮ ವಾದ್ಯಗಳ ।
ಸರುವರೂ ಸಂತೋಷಿಸುವ ಪೋಲ್
ನೆರೆ ಚತುರತನದಿಂ ಬಾರಿಸು
ತಿರಲು ಮಂಗಲ ಸಮಯದೊಳಗಾ ಕೇಳಿರೈ ಜನರೆ ॥೫೨॥

ಹಿಂದಿನಿಂ ಸಾಗಿದ್ದರಾಗಳು
ಚೆಂದದಿಂದಂ ಬ್ಯಾಂಡದವರಾ
ಮಂದಿ ಯತ್ಯಾನಂದ ಪಡುವೊಲು ಬ್ಯಾಂಡ ಬಾರಿಸುತೆ ।
ಬಂದು ಬಿಟ್ಟರೆ ತಾಸೆಯವರೂ
ಬಂದಿರಲು ತಾವ್ ಕಾಳಿಯವರೂ
ಣಂದದಿಂ ಗುರುಗಳನು ಸ್ವಾಗತ ಮಾಳ್ಪ ಸಮಯದಲಿ ॥೫೩॥

ಬರುಬರುತ ಹೆಚ್ಚೆಚ್ಚು ಮಂದಿಯು
ನೆರೆಯ ಹತ್ತಿತು ನೋಡ ಗುರುಗಳ
ಹರುಷದಿಂದುತ್ಸಾಹದಿಂದಂ ಶುಭ ಸಮಯದಲ್ಲಿ ।
ಹಿರಿಯ ಪಟ್ಟಣ ಮೊದಲೆ ಹುಬ್ಬಳಿ
ಗುರುಗಳನು ಹೊಸ ನೋಡಿ ಬಂದರು
ನೆರೆದ ಜನರಿಂ ಜಾತ್ರೆಯೊಲು ತಾಂ ತೋರುತಿರಲಾಗ ॥೫೪॥

ಬರಲು ಮುಂದಕೆ ಪರಮ ಗುರು
ಹಿರಿಯಡಿಹ ಮೋಟಾರ ಮೆಲ್ಲನೆ ·
ಕರದೊಳಾರತಿ ಪಿಡಿದು ನಿಂತಿರಲೆ ನಿಂತೊ ಸಾರಿಯದು ।
ಇರಲು ಸರ್ವರು ಲಿಂಗವಂತರು
ತೆರತೆರದ ನವ ವಸ್ತ್ರ ಧರಿಸಿರೆ
ಮೆರೆಯುತ್ತಿದ್ದರು ಧರಿಸಿ ಭಸ್ಮವ ಭಾಲದೊಳಗವರು ॥೫೫॥

ಬೆಳಗಿದರು ಬಹುಮದದೊಳಾರತಿ
ಲಲನೆಯರು ತಾವ್ ನಿಂತ ಸ್ಥಳದಲಿ
ಬಲುಹ ಕೀರ್ತಿಯ ಜಗದಿ ಪಡೆದಿಹ ಗುರುಗಳು ಭಯರಿಗೆ ।
ಸಲೆ ಹರಕೆ ಕೈಯೆತ್ತಿ ಕೊಟ್ಟರು
ಬಲು ಮುದದೊಳಾ ಗುರುಗಳು ಭಯರು
ಚೆಲುವಿರುವ ಬಲುಗರತಿಯರಿಗಾ ಶುಭ ಸಮಯದಲ್ಲಿ ॥೫೬॥

ಗುರುವರರ ಮೋಟಾರ ಮುಂಗಡೆ
ಸುರುವುತಿರೆ ನೀರನ್ನು ಕೊಡದಿಂ
ಹರುಷಿನಿಂದಂ ಭಕ್ತಿಯಿಂದಂ ಬಂದು ತಾವಾಗೆ ।
ಮೆರೆವ ಹುಬ್ಬಳಿಯೂರ ಸ್ತ್ರೀಯರು
ಧರಿಸಿರುವ ಲಿಂಗವನು ಕೊರಳಲಿ
ಧರಿಸಿರುವ ಮೇಣ್ ಪೂತ ಭಸ್ಮವ ನೆಸೆಯುತಿರಲವರು ॥೫೭॥

ಹೂವು ಹಾರಿಸುತಿರ್ದರಾಗಳು
ಕೋವಿದರ ಮೇಲ್ ಧರ್ಮದರವಿನ
ತಾವು ಭಕ್ತಿಯ ಭಾವದಿಂದಂ ಜನರು ಮಾರ್ಗದಲಿ ।
ತೀವಿದಾನಂದದಲಿ ಕುಣಿತಿರೆ
ದೇವರಂತಹ ಗುರುಗಳಿಬ್ಬರು
ಪಾವಕನ ತೆರ ಪೂತರಾಗಿಷ ಪುಣ್ಯದೇಹಿಗಳು ॥೩೮॥

ಬಂದರೈ ಶ್ರೀ ಜಗದಗುರುಗಳು
ಬಂಧುರರು ತಾವ್ ಮೂರುಸಾವಿರ
ಹೊಂದಿದಂತಹ ಕೀರ್ತಿ ಹೆಚ್ಚಿಗೆ ಮಠದ ದೊರೆಯುವರು ।
ಬಂದರೀಗಳೆ ಸರ್ವ ಭಕ್ತರ
ತದೆಗಳ ನೂರೆ ನೋಡಬನ್ನಿರಿ
ಯೆಂದು ಮುಂಗಡೆ ಕಾಳಿಯವ ನುರೆ ಕಾಳಿಯೂದಿದನು ॥೩೯॥

ದಾರಿಯೆಡಬಲಕೆಸೆಯುತಿರ್ದವು
ಭೂರಿ ಕೇತನಗಳು ಸುರಮ್ಯವು
ತೋರುತ್ತಿದ್ದವು ಚಂದ ಬಹಳೇ ತಳಿರುಗಳು ಮತ್ತೆ ।
ತೋರಣಂಗಳು ಜನತೆಗೆಲ್ಲಕೆ
ಪಾರವಿಲ್ಲದ ಹರ್ಷಗೊಳಿಸುತೆ
ದಾರಿಯೆಲ್ಲೆಡೆ ತಳಿಯ ಹಾಕಿದೆ ಶುಭ ಸಮಯದಲ್ಲಿ ॥೪೦॥

ಗುರುಗಳಿಬ್ಬರು ಕೂತು ಕೊಂಡಿಹ
ಮೆರೆಯುತಿಹ ಮೋಟಾರ ಬಂದಿತು
ಮೆರೆಯುತಿಹ ಕಡು ಮೂರುಸಾವಿರ ಮಠದ ಬಳಿಯಲ್ಲಿ ।
ಉರೆ ಮಠವ ಶೃಂಗಾರಗೊಳಿಸಿರೆ
ಸರುವರೂ ಸಂತೋಷಿಸುವ ವೋಲು
ಹರುಷದಿಂ ಹಾರಾಡುತ್ತಿದ್ದಿತು ಧ್ವಜವು ವರಮಠದ ॥೪೧॥

ಉತ್ತರದ ಕಡೆ ಮುಖವಿರುವ ವೀ
ಯೆತ್ತರವು ರಮಣೀಯವಾಗಿಹ
ಸತ್ತಮವು ಮೇಲ್ಮಾಳಿಗೆಯಮಠ ಬಹು ವಿಶಾಲವಿಹ ।
ಚಿತ್ತಕಾನಂದವನು ಕೊಡುವದು
ಪತ್ತನಕೆ ಹುಬ್ಬಳ್ಳಿಗದು ನಿಜ
ಮುತ್ತುಗಳವರ ಕಂಠಮಾಲೆಯ ಹಾಗೆ ತೋರುವದು ॥೬೨॥

ಹಿಂದೆ ಯೀ ಮಠವಾಳ್ದ ಗುರುಗಳ
ಚಂದವಿರುವ ಸಮಾಧಿಗಳು ತಾವ್
ಹೊಂದುತಿರುವವು ಪೂಜೆ ನಿತ್ಯವುದ್ವಯ ಸಮಯದಲ್ಲಿ ।
ಬಂದು ದರ್ಶನ ತೆಗೆದುಕೊಳ್ವರು
ಮಂದಿ ಹುಬ್ಬಳಿಯವರು ಪ್ರತಿದಿನ
ಬಂದ ಹೆರವೂರವರು ವಂದಿಸಿ ಗಮಿಪರವುಗಳನು ॥೬೩॥

ಇರುವದಾನೆಯು ಘನಮಠದೊಳೀ
ಗುರುತಿಸುವದೀ ಮಠದ ವೈಭವ
ಹಿರಿಯದಾಗಿಹದೆಂಬುವದ ನುರೆ ಭಕ್ತ ಜನಗಳಿರ ।
ಹೊರಗೆ ಸಾಗಿದೆ ಗುರುಗಳವರಿಗೆ
ಹರುಷದಿಂ ಜನನಮಿಸುತಿರುವದು
ಕರೆದು ತಂದರು ಮಠದೊಳವರನು ಪೂಜ್ಯಭಾವದೊಳು ॥೬೪॥

ಲಿಂಗ ಪೂಜೆಯು ಮಾಡಿ ಭೋಜನ
ಮಂಗಲರು ಮುಗಿಸಿದರು ಪೋದದೆ
ಹಂಗು ದೊರೆದಿಹ ವಿಷಯ ಸೌಖ್ಯದ ಗುರುಗಳು ಭಯತರು ।
ಲಿಂಗವಂತದ ಹಿರಿಯರೆನಿಸಿದ
ತುಂಗ ಕೀರ್ತಿಯನಾಂತ ಯತಿಕುಲ
ಪುಂಗವರು ಶ್ರೀ ಹಾನಗಲ್ಲ ಕುಮಾರ ಯೋಗಿಗಳು ॥೬೫॥

ಅಪ್ಪಣೆಯ ತೆರಕೂಥ ಪತ್ತಿತು
ತೊಪ್ಪನೇಯಾ ಪರಮ ಪುರದೊಳ
ಗಿಪ್ಪ ಧನಿಕರು ಸುಪ್ರತಿಷ್ಠಿತ ಜನರು ಘನಮತದಿ ।
ಅಪ್ಪನಾದ ಕುಮಾರ ಗುರುವರ
ದೊಪ್ಪಿಸಿದಿರ್ಕೈ ಕೆಲಸವವರಿಗೆ
ಮುಪ್ಪುರಪ ಸುಟ್ಟವನ ಹಾಗಿಹ ಗುರುಮಣಿಗಳವರ ॥೬೬॥

ಇನ್ನು ಪಟುದಿನ ಸಂಧಿಯೊಳಗುರೆ
ಗನ್ನ ಮಹಿಮತ ಜಗದ ಗುರುಗಳ
ಚೆನ್ನ ಪಟ್ಟಾರೋಪಣದ ಸಂಗತಿಯ ನೊರೆಯುವೆವು ।
ಪನ್ನಗಾಲಂಕೃತನ ಭಕ್ತರೆ
ನನ್ನ ನುಡಿಗಳ ನುಡಿಯುವವರೇ
ಬನ್ನಿರೈ ನೀವ್ ಬಿಡದೆ ಸರ್ವರು ಶ್ರವಣ ಮಾಡಲಿಕೆ ॥೬೭॥

ನಂದಿಯೇರಿದ ಶೂಲಧರಿಸಿದ
ಮಂದರಾಚಲದೊಳಗೆ ನೆಲಸಿದ
ದಂದ ಶೂಕಂಗಳನು ಭೂಷಣ ಮಾಡಿಕೊಂಡಿರುವ ।
ಇಂದು ಶೇಖರನಾದ ಗಣಪ
ಸ್ಕಂದರಿವರಿಗೆ ತಂದೆಯಾಗಿಹ
ಕಂದು ಕೊರಳಿಗೆ ಪಾರ್ವತೀಶಗೆ ಜಯವು ಜಯಜಯವು ॥೬೮॥

(ಏಳನೆಯ ಸಂಧಿ ಮುಗಿದುದು)



# ಎಂಟನೆಯ ಸಂಧಿ

ಸೂಚನೆ:— ವೀರಯತಿ ಕೆಂಪಯ್ಯನವರನು
ಮೂರುಸಾವಿರಮಠಕೆ ಗುರುವು
ಕುಮಾರಗುರುಗಳು ಹಾನಗಲ್ಲದ ಮಾಡಿದರು ಮುದದೆ ।

ಶ್ರೀ ಶಿವನು ಕೈಲಾಸನಾಥನು
ಪೋಷಕನು ಮೂಲೋಕವೆಲ್ಲವ
ಪ್ರಾಶನವ ಗೈದವನು ನಂಜನು ಕಡಲೊಳುದಿಸಿರುವ ।
ಮೂಷಕವ ಸೀರಿಹನ ಜನಕನು
ವಾಸವಾನತಪಾದ ಕಮಲನು
ಕೋಶನಾಗಿಹ ಸುಗುಣಮಣಿಗಳ ಮೃಡನು ರಕ್ಷಿಸಲಿ ॥೧॥

ಪಟ್ಟಗಟ್ಟುವ ದಿವಸ ನೇಮವ
ತಟ್ಟನೇ ನೀವ್ ಮಾಡಿರೆಂದರು
ಸೆಟ್ಟರೆಲ್ಲರು ಗುರುಗಳಾಜ್ಞೆಯ ಮಾನ್ಯಮಾಡಿದರು ।
ಗಟ್ಟಿಗರಿಗಾ ಜಗದ ಗುರುವಿಗೆ
ಪಟ್ಟಗಟ್ಟುವ ದಿವಸ ಕೂಡಲೆ
ಪಟ್ಟು ಸಂತೋಷವನು ಗೈದರು ನಿಶ್ಚಯಿಪನವರು ॥೨॥

ಮೆಟ್ಟಿರುವ ಷಡ್ರಿಪುಗಳನು ಸಲೆ
ದಿಟ್ಟ ಗುರುಗಳಿಗಿದನು ಪೇಳ್ದರು
ಬಿಟ್ಟಿದೋಲೆಯ ಸುತ್ತುಕಡೆಗಿಹ ಮಠದ ಭಕ್ತರಿಗೆ ।
ಪಟ್ಟದ ಸಮಾರಂಭ ಕೈವಿರಿ
ಬಿಟ್ಟು ನಿಮ್ಮಯ ಕೆಲಸವೆಲ್ಲವ
ದಿಟ್ಟಿಯಿಂದ ನೋಡಿ ಹಿಗ್ಗಿರಿ ಗುರುಗಳೆನ್ನೆಂದು ॥೩॥

ಎಲ್ಲ ಕನ್ನಡ ವೃತ್ತ ಪತ್ರದಿ
ಬಲ್ಲಿರಾ ಸಲೆ ಲೇಖಲೇಖಿಸಿ
ಯೆಲ್ಲ ಲಿಂಗಾಯತರಿಗಾ ಮಂತ್ರವ ಹೇಳಿದರು ।
ನಿಲ್ಲದೇ ಬರಬೇಕು ಸರ್ವರೂ
ಒಲ್ಲ ಜನರೇ ವೀರಶೈವರೇ
ಮೆಲ್ಲೆದೆಯ ಶ್ರೀ ಜಗದಗುರುಗಳ ಪಟ್ಟದುತ್ಸವಕೆ ॥೪॥

ಇಂದು ಶೇಖರದಯದೆ ಶುಭದಿನ
ಬಂದುಬಿಡಲು ಸಮೀಪವಲ್ಲದು
ಮಂದಿ ಬರಹತ್ತಿದರು ಪದುಳದೊಳಾಗೆ ಘನಮಠಕೆ ।
ಹೋದಿತೊಷವನುಣಿಸುತಿರ್ದರು
ಬಂದ ಜನರಿಗೆ ಮಿಷ್ಟ ಭೋಜನ
ಮುಂದೆ ಬರಹತ್ತಿದರು ಮಂದಿಯು ತೆರಪಿರದೆ ಮಠಕೆ ॥೫॥

ಕರೆಸಿಕೊಂಡರು ಬರೆದು ಪತ್ರವ
ಗುರುಗಳನು ಹಾವೇರಿ ನಗರದ
ಗುರುಕುಮಾರಸ್ವಾಮಿಗಳು ಬಹು ಹರ್ಷವನು ತಳೆದು ।
ತ್ವರಿತದೊಳು ಮೇಣ್ ಮೋದದಿಂದಂ
ಗುರುವರರು ಶಿವಬಸವಯತಿಗಳು
ಮೆರೆವ ಹುಬ್ಬಳಿ ಪುರಕೆ ಬಂದರು ಪಟ್ಟದುತ್ಸವಕೆ ॥೬॥

ವಿರತ ಮೂರ್ತಿಗಳಿತೊ ಬಂದರು
ಚರಸು ಮೂರ್ತಿಗಳೆನಿತೊ ಸಾರ್ದರು
ಹರುಷದಿಂದೈದಿವರು ಪಟ್ಟದ ಸ್ವಾಮಿಗಳು ಹಲರು ।
ಹಿರಿಯ ಮಠದ ಪನವರು ಬಂದರು
ಭರದೆ ಮಠಪತ್ತಿಗಳು ಬಂದರು
ನೆರೆದರಾಗಳು ಮಿಕ್ಕ ಜಂಗಮರೆನಿತೊ ಘನಮಠದಿ ॥೭॥

ಬಂದರೈ ಶ್ರೀಮಂತರೆನಿತೋ
ಬಂದರೆನಿತೋ ಊರ ಸೆಟ್ಟರು
ಬಂದು ನೆರೆದರು ಹಲವುಜನ ಸದ್ಭಕ್ತದಾವಾಗೆ ।
ಬಂದ ಜನರಿಗೆ ಹೊತ್ತು ಹೊತ್ತಿಗೆ
ನಂದದಿಂ ಮಿಷ್ಟಾನ್ ಭೋಜನ
ಬಂಧರರು ಹುಬ್ಬಳ್ಳಿ ಹಿರಿಯರು ನೀಡಿಸುತ್ತಿರಲು ॥೮॥

ಬಂದುಬಿಟ್ಟಿತು ಪಟ್ಟಗಟ್ಟುವ
ಸುಂದರವು ಮಾಂಗಲ್ಯವಾಗಿಹ
ನಂದಿವಹನನ ದಯದೆ ದಿವಸವು ವೀರಶೈವರಿಗೆ ।
ಚಂದ ಕಡುವಾಗಿರುವ ಮಠವನು
ಚಂದ ಹೆಚ್ಚಿಗೆ ಮತ್ತೆ ಗೈದರು
ಮಂದಿಯತ್ಯಾನಂದ ಬಿಡುವೊಲು ನೋಡಿದಾಕ್ಷಣಕೆ ॥೯॥

ಮೆರೆವ ತೋರಣ ತಳಿರಿನಿಂದಂ
ತರುಗಳಿಂದಲಿ ಮತ್ತೆ ರಂಭಾ
ಸರುವ ವರ್ಣದ ಧ್ವಜಗಳಿಂದಂ ಮರವೆಸೆಯುತ್ತಿತ್ತು ।
ಮೆರೆಯುತ್ತಿದ್ದಿತು ವಸ್ತ್ರದಗಸೆಯು
ಬರೆದಿರಲು ಮಸ್ತಕದೊಳದರಾ
ಸರುವರಿಗೆ ಸ್ವಾಗತವ ಮಾಳ್ಪೆವು ಬನ್ನಿರೈ ಎಂದು ॥೧೧॥

ಕೋಳಿಗಳು ಕೂಗಿದವು ಹರ್ಷದೆ
ತಾಳಿಯುತ್ಸಾಹವನು ಪಿಕಗಳು
ಮೇಲು ಸರದಲಿ ಗಾನ ಗೈದವು ಶುಭ ಸಮಯದೊಳಗಾ ।
ಹೇಳಿದವು ಜವನೇಳ ಜನರಿಗೆ
ಜಾಲವುರೆಗಡ ಕಾಗೆ ಗುಬ್ಬಿಯ
ಕೇಳಿಸುವವೋಲ್ ಸರ್ವಜನರಿಗೆ ಕೂಗಿ ಕೂಗಿ ಬಲು ॥೧೭॥

ಎಲ್ಲ ಬಗೆಯ ಸುವಾದ್ಯಗಾರರು
ನಿಲ್ಲದೇ ಬಂದಿರಲು ಮಠದಲಿ
ಬಲ್ಲವರು ಬಲು ವಾದ್ಯಗಳ ಬಾರಿಸುವ ಕೆಲಸದಲಿ ।
ಸಲ್ಲಿಸಲು ನೆರೆ ತಮ್ಮ ಸೇವೆಯು
ಬಲ್ಲಿರಾ ಕಾಳಿಗಳನೂದುವ
ಬೆಲ್ಲದಂತಹ ಮಾತನಾಡುವ ಜನರು ಬಂದಿಹಲು ॥೧೨॥

ಮಠದೊಳೆಸೆವ ಸಮಾಧಿಗಳಲಿಹ
ದಿಟ ಎದುವು ಬಹುರಮ್ಯವಾಗಿವೆ
ಪಟುವು ಶ್ರೀ ಗುರುಸಿದ್ಧ ಗುರುಗಳ ಗುಡಿ ಸಮಾಧಿಗಳು ।
ನಿಟಿಲ ನಯನನ ಭಕ್ತ ಜನಗಳು ದಯದಾ
ತಟನಿ ಪತಿಯೋಲತುಲಕ
ಚಟುಲವಿಲ್ಲದ ಮನದೆ ಸಂದರ್ಶನಕೆ ಬರುತಿಹರು ॥೧೪॥

ಉದಿಸಿದನು ನಗುನಗುತೆ ಸೂರ್ಯನು...
ಮುದಭರಿತ ಮಾಂಗಲ್ಯ ದಿನದಲಿ
ಹೃದಯ ಸಂತೋಷಿಸುವ ತೆರದೊಳು ಘನಮಠದೊಳಗೆ ।
ಮುದದೆ ಚಾಘಡ ಮೊಳಗಹತ್ತಿತು
ಸುದತಿಯರು ಮೇಣ್ ಪುರುಷರೆಲ್ಲರು
ವಿಧುಧರನ ಸ್ಮರಿಸುತ್ತೆ ಬಂದರು ಸ್ನಾನವನ್ನೆಸಗಿ ॥೧೪॥

ಬೆಳಗುತ್ತಿದ್ದವು ಮಠದೊಳೆಲ್ಲೆಡೆ
ಸಲೆ ಸೊಡರುಗಳು ಬೆಳಗಿನೊಳಗಾ
ಮೊಳಗುತಿದ್ದಿತು ಭೇರಿ ಗುಡಿಯಲಿ ಶುಭ ಸಮಯದಲ್ಲಿ ।
ಸಲೆ ಮೆರೆಯುತಿರೆ ಜನಗಳೆಲ್ಲರು
ಬಲುವು ಹುರುಪಿಂದೆಸೆವ ಮೊಗದಿಂ
ಲಲನೆಯರು ಹರ್ಷಾಬ್ಧಿಯೊಳಗೀಸಾಡುತಿಹಲಾಗೆ ॥೧೫॥

ಆ ಸಮಯದಲಿ ಹಾನಗಲ್ಲದ
ದೇಶಿಕರ ಸಾಮಿಪ್ಯವಿದ್ದರು
ದೇಶದಲಿ ಕೀರ್ತಿಸಿದ ಭಾವೀ ಜಗದ ಗುರುವರರು ।
ತೋಷವಾಗದೆ ಮನಕೆ ಹೆಚ್ಚಿಗೆ
ಬೇಸರವೆ ಆದಂತೆ ತೋರುತೆ
ದಾಸರೀ ಶ್ರೀ ಕಾಡದೇವರ ಮೌನವನ್ನಾಂತು ॥೧೬॥

ಕಮಲ ಮಿತ್ರನು ನಭದ ಪಥವನು
ಪ್ರಮುದದಿಂದಂ ಸಾಗತೊಡಗಿಹ
ಸಮಯದೊಳಗಾ ಸರ್ವವಿಧವಾದ್ಯಗಳು ಮೊಳಗಿದವು ।
ಅಮಿತ ಹರ್ಷವು ತುಂಬಿ ಬಿಟ್ಟಿತು
ಸಮವಿರದ ಘನ ಮಠದೊಳಾಗಳು
ಸಮಯವಾಯಿತು ಪಟ್ಟಗಟ್ಟುವ ವಿನುತಗುರುಗಳಿಗೆ ॥೧೭॥

ಸ್ನಾನ ಲಿಂಗಾರ್ಚನೆಯ ಪೂಗಿಯಿಸಿ
ಜ್ಞಾನನಿಧಿಗಳು ಜಗದಗುರುಗಳ
ಕಾಣಿರ್ಕೆ ಉಡುಪನ್ನು ಧಾರಣವೆಸಗಿ ಗುರುಗಳಿಗೆ ।
ಸಾನುರಾಗದೆ ಮಾಡಿ ನಮನವ
ದೀನವತ್ಸಲದವರು ಸಾರ್ದರು
ಮಾನಪೆರ್ಚಿಪ ಜಗದಗುರುಗಳ ಪೀಠವೇರಲಿಕ್ಕೆ ॥೧೮॥

ಕೂಡಲೇ ಜನರೆಲ್ಲ ಮೋದದೆ
ಮಾಡಿದರು ಕರತಾಡನವ ಸಲೆ
ಮಾಡಿದರು ಹರ ಹರಮಹಾದೇವಾಖ್ಯೆ ಜಯಘೋಷ ।
ನೋಡಿ ನಲಿದರು ಜನರ ಸಾಗರ
ಮಾಡಿದರು ಬಳಿಕಾರೋಪಣವನಾ
ನಾಡಿನೊಳು ಕೀರ್ತಿಸಿದ ಮಠದಾದಿವ್ಯ ಪೀಠವನು ॥೧೯॥

ಮತ್ತೆ ಚಪ್ಪಾಳೆಯನು ಹೊಡೆದರು
ಮತ್ತೆ ಶ್ರೀ ಶಿವನಾಮ ಘೋಷಣೆ
ಎತ್ತರದ ಸರದಲ್ಲಿಗೈದರು ನಿಖಿಲ ಜನರುಗಳು ।
ಮುತ್ತಿನಂತಹ ಗುರುಗಳೆಡಬಲ
ಮತ್ತೆ ಹಿಂದೆಯೂ ನಿಂದುಬಿಟ್ಟಿದೆ
ಚಿತ್ತಸೆಳೆವೋಲುಡುಪು ಧರಿಸಿದ ಸೇವಕರು ಹಲರು ॥೨೦॥

ಕೂತಿರುವ ಸತ್ಪೀಠದಲಿ ತಾವ್
ಪೂತದೇಹದ ತಮ್ಮ ಶಿಷ್ಯರು
ಸಾತಿಶಯ ಸಂತೋಷದಿಂದಂ ನೋಡಿ ಕಣ್ತುಂಬಿ ।
ಖ್ಯಾತರಾಗಿಪ ಹಾನಗಲ್ಲದ
ಖ್ಯಾತರಾ ಕಾವೇರಿ ನಗರದ
ನೀತಿಭೂಷಣ ಯತಿಗಳಾನಂದಾಶ್ರು ಸುರಿಸಿದರು ॥೨೧॥

ಹಲವಿಧದ ವಾದ್ಯ ಘೋಷವು
ಬಲುಹು ಜಯ ಜಯಕಾರ ಘೋಷವು
ನೆಲಮುಗಿಲ ತಾಂ ತುಂಬಿ ಬಿಟ್ಟವು ಭದ್ರಕಾಲದಲಿ ।
ಗೆಲವಿರಲಿ ಗೆಲವಿರಲಿ ಗುರುವಿಗೆ
ಗೆಲವಿರಲಿ ವರಪುಣ್ಯಗಾತ್ರಗೆ
ಗೆಲವಿರಲಿ ಸಲೆ ಎಂದು ಕಹಳೆಯನೂದುತಿರಲಾಗೆ ॥ ೨೨॥

ಮಾಡಿದರು ಪಟ್ಟಾಭಿಷೇಕವ
ಗಾಢ ತೋಷದೆ ವಿಧಿಯಪೂರ್ವಕ
ಕೂಡಿರುವ ಜನರೆಲ್ಲರಿಗೆ ಸಂತೋಷವಾಯ್ತುಗೆ ।
ಮಾಡಿದರು ಶ್ರೀ ಜಗದಗುರುವಿಗೆ
ನೋಡಿರ್ಪ ಗುರುಸಿದ್ಧವೆಂಬುವ
ನಾಡೆ ಮುಖ್ಯರು ನಾಮಕರಣವನಾ ಸಮುಯದಲ್ಲಿ ॥೨೩

ತುಂಬಿಬಿಟ್ಟಿತು ಧ್ವಾನ ಸುತ್ತಲು
ಕೊಂಬುಗಳ ಕೆಲ ಜನಗಳೂದಿದ
ತುಂಬಿಬಿಟ್ಟಿತು ಕರಡೆತಾಸೆಯ ಬ್ಯಾಂಡಗಳ ಧ್ವಾನ ।
ಕುಂಭಿನೀ ಶರಪಟ್ಟವಾದೊಲು
ತಾಂಬಿಡದೆ ಕಂಗೊಳಿಸುತ್ತಿದ್ದಿತು
ಶಂಭುವಿನ ಸರಿಯಾದ ಗುರುಗಳ ಪಟ್ಟದುತ್ಸವವು ॥೨೪॥

ತುಂಬಿರಲು ಕಿಕ್ಕಿರಿದು ಜನರುಗ
ಳಿಂ ಬಿರದವೋಲ್ ಹೋಗಬರಲಿಕೆ
ತುಂಬಿದವು ವರಮತದ ಮೂರಂಗಣವು ಜನರಿಂದೆ ।
ತುಂಬಿ ಬಿಟ್ಟಿತು ಮಠಕೆ ಪತ್ತಿರು
ವಿಂಬಿರುವ ಕಡು ರಾಜಮಾರ್ಗವು
ಶಂಭುವಿನ ವರಮತದ ಜನ ಬಂದಿದ್ದರೈ ಹೆಚ್ಚು ॥೨೫॥

ಕಾಳಿಯೂದುತಿದ್ದನಾಗಳೆ
ಕಾಳಿಯಪನುರೆ ಜಗದಗುರುಗಳು
ಬಾಳಿ ಬದುಕಲಿ ಧೀರ್ಘಕಾಲವು ಸುಖದೆ ತಾವುಗಳು ।
ಭಾಲನೇತ್ರನ ಭಕ್ತರತ್ನರು
ಫಾಲನೇತ್ರರು ಮರ್ತ್ಯಲೋಕದ
ಶೀಲಸಂಪದದಿಂದೆಸವ ಗುರುಸಿದ್ಧ ಗುರುವರರು ॥೨೬॥

ಸನ್ನುತಿಗೆ ಸತ್ಪಾತ್ರರಾಗಿಹ
ಗನ್ನ ಮಹಿಮತ ಪಟ್ಟದುತ್ಸವ
ಸನ್ನ ಹತ್ತೊಂಬತ್ತುನೂರಾ ಇಪ್ಪತ್ತೈದರಲಿ ।
ಚೆನ್ನ ಸಂಭ್ರಮದಿಂದಲಾಯಿತು
ಕನ್ನಡದ ನಾಡಲ್ಲಿ ಹುಬ್ಬಳಿ
ಯುನ್ನತಿಯ ಪೊಂದಿರುವ ನಗರದಿ ಶಿವನ ಕರುಣದೊಳು ॥೨೭॥

ಸಾಗಿದರು ವಿಶ್ರಾಮ ಭವನಕೆ
ರಾಗದಿಂದಂ ಹಾನಗಲ್ಲದ
ನಾಗಭೂಷನ ಭಕ್ತ ರತ್ನ ಕುಮಾರಗುರುವರರು ।
ಸಾಗಿಡರು ಶಿವಬಸವಯತಿಗಳು
ತ್ಯಾಗಿಗಳು ಹಾವೇರಿ ಪುರದಾ
ಸಾಗಿದರು ಶ್ರೀ ಜಗದಗುರುಗಳು ಕೂಡ್ರಲವರಬಳಿ ॥೨೮॥

ಇರಲು ಪಾವಾಡಪ್ಪನಾಮವು
ಗುರುವರರಗೀ ಬಾಲ್ಯದಲಿ ತಾಂ
ಗುರುಗಳಾಗಲು ಸಿದ್ಧಕೆಂಪಯನವರ ಮಠಕಿವರು ।
ಧರಿಸಿದರು ಕೆಂಪಯ್ಯನಾಮವ
ತೊರೆದು ಮಠವದು ಮೂರುಸಾವಿರ
ವರಮಠಕೆ ಗುರುವಾದ ಮೇಲೀ ಪ್ರಣುತ ಗುರುಗಳಿಗೆ ॥೩೦॥

ಜಗದಗುರು ಗುರುಸಿದ್ಧನಾಮವು
ಸುಗಣಮಣಿಗೀ ಪ್ರಾಪ್ತವಾಯಿತು
ಮಿಗಿಲಿಯತಿಗೀ ಒಂದು ಜನ್ಮದಿ ಮೂರು ನಾಮಗಳು ।
ಅಗಚೆಯರಸನ ಕರುಣದಿಂದೀ
ಜಗದೊಳಗೆ ಗಡ ಪ್ರಾಪ್ತವಾದವು
ಮಿಗೆ ಸುಕೃತವಿರಬೇಕು ಪರಿಯೀನಾಮಗಳಿಸಲಿಕೆ ॥೩೦॥

ಹೋದರೆಲ್ಲರು ಭೋಜನಕೆ ತಾವ್
ಮೋದದಿಂದಾ ಪರಮ ಮಠದೊಳು
ಸಾದರದೆ ಮೃಷ್ಟಾನ್ನ ಸೇವನೆಯನ್ನು ಮಾಡಿದರು ।
ಆ ದಿವಸದಲ್ಲಾಯ್ತು ಕೀರ್ತನೆ
ಬೋಧಗೆಯ್ದನು ಶಿವಮತದ ತಾಂ
ಬೋಧಕನು ತಲೆದೂಗುವಂದದಿ ಕೇಳುವವರೆಲ್ಲಾ ॥೩೧॥

ಮರುದಿವಸ ಮುಂಜಾವಿನಲಿ ಗಡ
ಗುರುಗಳನು ಮೆರೆಸುವಸುಸಿದ್ಧತೆ
ಭರದೆ ಸಾಗಿತು ನೆಯತೊಡಗಿದರಾಗ ಜನರೆಲ್ಲಾ ।
ತ್ವರಿತದೊಳು ಸಲೆತುಂಬಿ ಬಿಟ್ಟಿತು
ನೆರೆದ ಜನರಿಂ ಸರ್ವಮಠವದು
ಪುರುಷ ತುಂಬಿಸಿ ಬಿಟ್ಟನೊಬ್ಬನು ಕಾಳಿಯನ್ನೂದಿ ॥೩೨॥

ಶೃಂಗರಿಸಿಸತಿ ತಂದರಾನೆಯ
ಮಂಗಲದ ಪಲ್ಲಕ್ಕಿಯನು ಬಹು
ಸಿಂಗರಿಸಿ ತಂದಿಟ್ಟರಾಗಳು ತಕ್ಕತಾಣದಲಿ ।
ಶೃಂಗರಿಸಿ ಕೆಲ ಕುದುಗಿ ತಂದರು
ಮಂಗಲ ಸುವಾದ್ಯಗಳು ಭರದಿಂ
ತುಂಗಮಠದೊಳು ಮೊಳಗುತಿದ್ದವು ಸತ್ಕಮಯದೊಳಗೆ ॥೩೩॥

ಒಂದು ಕುಳಿತರು ಜಗದಗುರುಗಳು
ಚಂದವಿಹ ಪಲ್ಲಕ್ಕಿಯೊಳು ತಾವ್
ನಂದದಿಂ ಪಲ್ಲಕ್ಕಿ ಹೊತ್ತುರೆ ಸಾಗಿದರು ಕೆಲರು ।
ಹಿಂದೆ ನಡೆದರು ತರುಣ ನಾರಿಯ
ರಂದವಾದಾರತಿಯ ಪಿಡಿದುರೆ
ಹಿಂದವರ ಶ್ರೀ ಹಾನಗಲ್ಲದ ಗುರುವರರುಮತ್ತೆ ॥೨೪॥

ಗುರುವರರು ಹಾವೇರಿಪುರದಾ
ಹಿರಿಯತಿಗಳು ಶಿವಬಸವರೀ
ಹರುಷದಿಂ ಕುಳಿತಿರುವ ಕಾರವು ಮೆಲ್ಲನೇ ಸಡೆಯೆ ।
ಗುರುವರರ ಪಲ್ಲಕ್ಕಿ ಹಿಂದುರೆ
ನರರು ಸ್ತ್ರೀಯರು ಪಲರು ನಡೆದರು
ಮೆರೆವ ಪಲ್ಲಕ್ಕಿಮುಂದೆ ನಡೆದರು ಮತ್ತೆ ಪಲಜನರು ॥೨೫॥

ಮೆರವಣಿಗೆಯಲ್ಲಿ ಮುಂದೆ ಸಾಗಿತು
ಹುರುಪಿನಿಂ ಘನಮಠದ ಕುಂಜರ
ಹರುಷದಿಂ ದಶ್ವಗಳ್ಳು ನಡೆದವು ಕುಂಜರದ ಹಿಂದೆ ।
ಕರಡೆ ಮೇಣ್ ಸಂಬಾಳತಾಸೆಯು
ಭರದೆ ತೊಳಗುತಿದ್ದ ವಾದಗಳು
ಪಹುಷದಿಂ ಮೇಣೆದುತಿರ್ದರು ಕೆಲಸ್ಥನಂದಿಗಳ ॥೨೬॥

ಮೊಳಗುತಿದ್ದವು ಬ್ಯಾಂಡವಾಗಳು
ಬಲು ಭರದೊಳು ಉತ್ಸಾಹ ಬೀರುತೆ
ಕೆಲರು ಕಹಳೆಯನೂದುತಿದ್ದರು ನಡುನಡುವೆ ।
ತಾವು ಬಲುಹುರುಪಿನಿಂ ಮೇಲು ಸರದಲಿ
ನಲಿವವೊಲ್ ಜನರೆಲ್ಲ ಕೂಡಿದ
ಬಲುಮಮತೆಯಿಂದೊಳು ಬಾರಿಸುತ್ತಾಗೆ ಸಾರಿದರು ॥೨೭॥

ಕುರುಬ ಜನರಾ ಮೆರವಣಿಗೆಯೊಳು
ತರುಣರೇ ಅವರಿದ್ದರೆಲ್ಲರು
ಗುರುವರರ ಮೆರವಣಿಗೆ ಸಾಗಿತು ಪೇಟೆಯೊಳು ಬಳಿಕ ।
ಸರ್ವ ಜನರಿಗೆ ತೋಷಗೊಳಿಸುತೆ
ಪುರದೊಳಗೆ ನಿಯಮಿಸಿದ ಮಾರ್ಗದಿ
ತಿರುಗಿ ಬಂದಿತು ಮೆರವಣಿಗೆ ತಾಂ ಮಠಕೆ ನೇಮಿಸಿದ ॥೩೮॥

ಸಮಯದೊಳು ನಿರ್ದಿಷ್ಟದಿಂದಂ
ಸುಮನ ಶರಹರ ದಯದೆ ಸಾಗಿತು
ಪ್ರಮುದದಿಂದ್ವಯದಿವಸ ಗುರುಗಳ ಮೆರವಣಿಗೆ ತಾನು ।
ಕ್ರಮದೆ ವ್ಯಾಖ್ಯಾನಗಳು ಸಾಗಿರೆ
ಸುಮತಿಗಳ ವಾಗ್ಮಿಗಳ ನಿತ್ಯವು
ಗಮಿಸುತಿದ್ದಿತು ಸಮಯ ಜನತೆಯ ಹಿಗ್ಗಿನೊಳಗಂಗೆ ॥೩೯॥

ನಡೆದಿರಲು ಮೃಷ್ಟಾನ್ನ ಭೋಜನ
ಬಿಡದೆ ನಿತ್ಯವೂ ಹತ್ತುದಿವಸವು
ಗಡ ಹಗಲು ಹನ್ನೊಂದರಿಂ ಹನ್ನೊಂದಿ ।
ದುಡಿಯುತಿದ್ದರು ರುಳತನಕ ನೀಡುವವರುರುರೂಟಕೆ
ಕಡುಮುದದೆ ಬರುತಿದ್ದ
ಬಡವರೂ ಶ್ರೀಮಂತ ಜನರೂ ಸಕಲಜಾತಿಯರು ॥೪೦॥

ಮುಗಿದಮೇಲಾಮೆರವಣಿಗೆ ತಾಂ
ಜಗದ ಗುರುವಿಗೆ ಹರಸಿಹೋದರು
ನಗುನಗುತೆ ಶ್ರೀ ಹಾನಗಲ್ಲದ ಮತ್ತೆಹಾವೇರಿಯ ।
ಹೊಗಳಿಕೆಗೆ ಬಹು ಯೋಗ್ಯ ಗುರುಗಳು
ಜಗದ ಕಲ್ಯಾಣವನೆ ಮಾಡುವ
ಮಿಗಿಲು ಕೀರ್ತಿಯ ಗಳಿಸಿಕೊಂಡಿಹ ಗುರುಮಣಿಗಳಿವರು ॥೪೧॥

ಎರಡುಲಕ್ಷಕ್ಕಿಂತ ಹೆಚ್ಚಿಗೆ
ವರಮಠದಿ ಶಾವ್ ಜನಗಳುಂಡರು
ಗುರುವರರ ಪಟ್ಟಾಭಿಷೇಚನವಾದ ಸಮಯದಲಿ ।
ತೆರಳಿದರು ಹೆರವೂರ ಜನಗಳು
ಹರುಷದಿಂದಂ ಪಟ್ಟದುತ್ಸವ
ಪರನ ಕೃಪೆಯಿಂ ಮುಗಿದುದನಂತರ ಘನಮಠವತೊರೆದು ॥೪೨॥

ಮುಗಿದಬಳಿಕಾ ಪಟ್ಟದುತ್ಸವ
ಜಗದಗುರುಗಳು ಮಠದ ಸ್ಥಿತಿಯನು
ಮಿಗೆಮಮತೆಯಿಂದರಿತುಕೊಳ್ಳುವ ಕೆಲಸಮಾಡಿದರು ।
ಮಿಗೆಯುವದದೇ ಪರಕೆ ವರ ಕೊಟ್ಟರು
ಮಿಗಿಲ ಮಠದಧಿಕಾರವೆಲ್ಲವ
ಸುಗುಣಮಣಿಗಳ ಪಟ್ಟದುತ್ಸವವಂದ ಸಮಯದಲಿ ॥೪೩॥

ಪರ್ವಜನಗಳ ಮೇಲೆ ಕೂಡಲೆ
ಶರ್ವನಂತಿಹ ಜಗದಗುರುಗಳ
ಸರ್ವವಿಧ ವರ್ಚಸ್ಸ ಕೂಡಿತು ಯೋಗ್ಯತೆಯ ಬಲದಿ ।
ಪರ್ವತದ ಪರಿ ಚಲಿಸದಿಹಧೃತಿ
ಗರ್ವವಿಲ್ಲದ ಮನವು ಸನಾತಿ
ಉರ್ವಿಕಾರಿಗಳಿವರೊಳಿದ್ದವು ಸಹಜವೇ ತಾವು ॥೪೪॥

ಇಟ್ಟಿರಲು ಸಂಸ್ಕೃತದ ಶಾಲೆಯ
ಪಟ್ಟಣದೊಳಾ ಪೂರ್ವಗುರುಗಳು
ಗಟ್ಟಿಗುರುನವ ಜಗದಗುರುಗಳು ಬೆಳೆಸಿದರದನ್ನು ।
ಕೊಟ್ಟು ಹೆಚ್ಚಿಗೆ ವೇತನವ ಶಂ
ದಿಟ್ಟರೈ ವಿದ್ವಾಸ ಗುರುಗಳ
ಪಟ್ಟು ಸಂತೋಷವನು ವಿದ್ಯಾರ್ಥಿಗಳ ಸಂಖ್ಯೆಯನು ॥೪೫॥

ಬೆಳೆವವೋಲ್ ಸತಿ ಸತತಯತ್ನಿಸಿ
ಬೆಳೆಸಿದರು ವಿದ್ಯಾರ್ಥಿಗಳ ಜವ
ಕಲಿಯಲಿಕೆ ಕಳಿಸಿದರು ಶ್ರೀಗಳು ತಾವು ಕರೆತಂದ ।
ಚೆಲುವು ತರುಣರ ಯಾದವಾಡದ
ಸಲಹುತಿದ್ದರು ದಯದೊಳವರನು
ಬಲುಮಮತೆಯಿಂ ಭಕ್ತರೊಂದಿಗೆ ನಡೆಯುವವರಿವರು ॥೪೬॥

ಮಠದೊಳಿತ್ತು ಭೋಜನದ ಗೃಹ
ಮಠಕೆ ಹೆರವೂರಿಂದೆ ಬಂದಿಹ
ಪಟಿಲ ನಯನನ ಭಕ್ತಜನಗಳ ಭೋಜನಕ್ಕಾಗಿ ।
ಪಟುಗಳಾದೀ ಜಗದಗುರುಗಳು
ದಿಟವಿವರು ಕಾರುಣ್ಯನಿಧಿಗಳು
ಘಟನೆಮಾಡಿದರಲ್ಲಿ ಕೆಲ ವಿದ್ಯಾರ್ಥಿಗಳಿಗೆ ಗಡ ॥೪೭॥

ಊಟಸಾಗುವ ಹಾಗೆ ನಿತ್ಯವು
ಪಾಠಹಾಕಿದರಲ್ಲಿ ನೂತನ
ಕಾಟ ದೈನ್ಯದ ಸಹಿಸಲಾರದೆ ಬಂದ ಬಡವರಿಗೆ ।
ಸಾಟಿಯಿರದೀ ಜಗದದೇಕಿದ
ದೂಟಿ ಸಲ್ಲಿಸಿ ಯೋಗ್ಯಧನವನು
ಧಾಟಧಾರಿಗಳಿವರು ಸಲ್ಲಿಸುತಿರ್ದರೈ ತಾವು ॥೪೮॥

ಹರಡಿಬಿಟ್ಟಿತು ಸುತ್ತಲೆಲ್ಲವು
ಗುರುಗಳಿರುವರು ಮೂರುಸಾವಿರ
ವರಮಠದ ಒಹು ಕರುಣೆಗಳು ಸ್ತೋದಾರ ಹೃದಯಿಗಳು ।
ಬರತೊಡಗಿದರು ನೆರವ ಬೇಡಲು
ಹರುಷದಿಂ ವಿದ್ಯಾರ್ಥಿಗಳು ಮೇಣ್
ಬರುತಲಿದ್ದರು ಕವಿಜನರು ಕೀರ್ತನೆಯ ಮಾಡುವರು ॥೪೯॥

ನೆರವ ಪಡೆದರು ಪಣದ ಕೆಲವರು
ವರಗುರುಗಳಿಂ ಪತ್ರಕಾರರು
ನೆರವ ಪಡೆದರು ಮಾಸಪತ್ರಿಕೆ ಬರೆವವರು ಕೆಲರು ।
ನೆರವ ಪಡೆದರು ಗ್ರಂಥಕಾರರು
ನೆರವ ಪಡೆದರು ವಾಗ್ಮಿಗಳು ಮೇಣ್
ನೆರವ ತಾವ್ ಪಡೆದರು ಪುರಾಣಿಕಜನರು ನೆರೆಧನವ ॥೫೦॥

ಎಲ್ಲರಿಗೆ ತಾವಿತ್ತರೈ ಧನ
ಮೆಲ್ಲದೆಯ ಶ್ರೀ ಜಗದ್ಗುರುಗಳು
ಎಲ್ಲರಾ ಬಹುಯೋಗ್ಯವಾಗಿರುವನಿತು ಧನವನ್ನು ।
ಇಲ್ಲವೆನಲಿಲ್ಲಾರಿಗೂ ತಾವ್
ಚೆಲ್ಲೆ ಮನಸಿನ ಘನಮಹಿಮರೀ
ಬಲ್ಲವರು ಬಲು ಸಕಲ ವಿಷಯವ ಪೂಜ್ಯರಾದಿವರು ॥೫೧॥

ಬಡವರಿಗೆ ಸಲ್ಲಿಸುತಲಿದ್ದರು
ಕಡುಮಮತೆಯಿಂದನ್ನ ವಸ್ತ್ರವ
ಕೊಡುತಲಿದ್ದರು ಕಂಬಳಿಯಗಡ ಹೊದ್ದುಕೊಳ್ಳಲಿಕೆ ।
ನಡೆದುಬಿಟ್ಟಿತು ದಾನವೀಪರಿ
ಬಿಡದೆ ಮಠದಲಿ ಸರ್ವಕಾಲವು
ದುಡಿದರಿವರು ಪರಹಿತದ ಕಾರ್ಯದಿ ಘನಮಹಿಮರಿವರು ॥೫೨॥

ಮಾಡಿದರು ಘನಮಠದ ಸರ್ವವು
ನಾಡೆ ಗುರುಗಳು ಸುವ್ಯವಸ್ಥೆಯ
ಮಾಡಿಸುತ್ತಿರೆ ಜಾಣ ಜನರಿಂದೆಲ್ಲ ಕೆಲಸಗಳ ।
ಹಾಡಿಹರಸುವರೆಲ್ಲ ಭಕ್ತರು
ನೋಡಿರೀ ಶ್ರೀ ಪೂಜ್ಯಪಾದರ
ನಾಡೊಳಗೆ ಬಹು ಕೀರ್ತಿಸರದಿ ಪುಣ್ಯದೇಹಿಗಳು ॥೫೩॥

ಬರುವರೆನಿತೋ ಜನರು ನಿತ್ಯವು
ಗುರುವರರ ದರ್ಶನವಹೋದಲು
ಸರುವರನುಸಲೆ ಪ್ರೀತಿ ಮಾಳ್ಪರು ಪ್ರೀತಿ ಮುಮರಿವರು ।
ಎರಗುವವರಿಗೆ ತಮ್ಮ ಪಾದಕೆ
ಕರಮುಗಿದು ನತಿಗೆಯರವರಿಗೆ
ಸರುವರೂ ಸಂತೋಷ ಬಡುತಿರೆ ಕಂಡುಯತಿ ೧ಳನು ॥೫೪॥

ನ್ಯಾಯ ತೀರಿಸುತಿರ್ದಕ್ಕೈ ತಾವ್
ಕಾಯಜನ ಹ್ಯಾಗೆಸ್ಥೆಪ್ಪ ಯುತ್ತಿಗ್ಗಳು
ಬಾಯಿಯಿಂದಾಜನ್ಮ ಪುಶಿನುಡಿ ನುಡಿಯದವರಿವರು ।
ನ್ಯಾಯತೀರಿಸುವಲ್ಲಿ ಕುಶಲರು
ನೋಯದೊಲ್ ದ್ವಯಪಕ್ಷದರಮನ
ನ್ಯಾಯಕೇಳಲು ಬಂದವರು ಕಡುಹಿಗ್ಗಿ ಹೋಗುತಿರೆ ॥೫೫॥

ಚಿಂತೆಯಿರಲಿಲ್ಲವರಿಗಾವುದು
ಶಾಂತಮೂರ್ತಿಗಳಿವರು ಶ್ರೀಗಳು
ಸ್ವಂತ ದೇಹಕೆ ಸುಖವ ಬಯಸದ ವಿರತಮಣಿಯಿವರು ।
ಸಂತತವು ಪರಹಿತದ ಕಾರ್ಯವ
ನಾಂತು ಮೋದವನೆಸಗುತಿರ್ದರು
ಕಂತುರಿಪುವಿನ ಭಕ್ತವರ್ಯರು ಜಗದಗುರುವರರು । ॥೫೬॥

ಪೇಳುವೆವು ಸಂಧಿಯೊಳು ಮುಂದಿನ
ಮೇಲು ಸ್ವಾಮಿಯ ಮತ್ತೆ ಚರಿತ್ರೆಯ
ಕೇಳಿರೈ ಸನ್ಮಾರ್ಗ ಬಿಡದಿಪ ಶ್ರೋತ್ರರೇ ನೀವು ।
ಆಲಿಸಿರಿ ಕಡುಮಮತೆಯಿಂದಂ
ಕಾಲ-ಕಾಲನ ಭಕ್ತಮಣಿಯಾ
ಕೇಳಿದರೆ ಚಾರಿತ್ರ್ಯ ಸೌಖ್ಯವು ದರ್ಿಪುದುನಿಮ್ಮ ॥೫೭॥

ಅಂದಕನೆ ಮೊದಲಾದ ದೈತ್ಯರ
ಕೊಂದು ಸುರಲೋಕವನು ಸಲುಹಿದ
ನಂದಿಯನ್ನೇರಿರುವ ಸ್ವರ್ಧುನಿಯನ್ನು ಧರಿಸಿರುವ ।
ಇಂದು ಭೂಷಣ ಮಾಡಿಕೊಂಡಿಹ
ಮಂದರಾಚಲದೊಳಗೆ ನೆಲಸಿದ
ಸ್ಕಂದ ಜನಕಗೆ ಪಾರ್ವತೀಶಗೆ ಜಯವು ಜಯಜಯವು ॥೫೮॥

( ಎಂಟನೆಯ ಸಂಧಿ ಮುಗಿದುದು )



# ಒಂಭತ್ತನೆಯ ಸಂಧಿ

ಸೂಚನೆ:– ಕೊಟ್ಟರೈ ಮಕ್ಕಳನು ಕೆಲರಿಗೆ
ಗಟ್ಟಿಗರು ಶ್ರೀ ಜಗದ್ಗುರುಗಳು
ಬೆಟ್ಟದೊಲು ಸ್ಥಿರವಾದಧೀರರು ಜಗದ್ಗುರುವಿವರು ।

ಶ್ರೀ ಭವನು ಕೈಲಾಸಸದನನು
ಮೂಭುವನವನು ಸಲಹುವಾತನು
ಲೋಭ ಹೆಚ್ಚಿಗೆ ಭಕ್ತಜನಗಳ ಮೇಲೆ ಮೂಡುವನು ।
ಶೋಭಿಸುವಸಲೆ ಧರಿಸಿ ಚಂದ್ರನ
ಶೋಭಿಸುವ ಬಹು ಕೆಂಜೆಡೆಗಳಿಂ
ಶ್ರೀ ಭವಾನಿಯ ಪ್ರಾಣನಾಥನು ಪೊರೆಯಲೈ ನಮ್ಮ ॥೧॥

ಹರುಷಹೊಂದುತ್ತಿದ್ದರೈ ಬಲು-
ಶರಣ ಜನಗಳ ವಚನವಾಲಿಸಿ
ಪರಮ ಪೂಜ್ಯರು ಮೂರುಸಾವಿರಮಠದ ಗುರುವರರು ।
ಹರುಷದವರಲ್ಲಧಿಕ ಪೊಂದು-
ತ್ತಿರಲು ನೈಜವು ಬಸವ ದೇವನ
ಪರಮವಾಗಿಹ ವಚನವಾಲಿಸಿ ಘನಮಹಿಮರಿವರು ॥೨॥

ನೋಡಿರಿ ಶ್ರೀ ಜಗದ್ಗುರುಗಳು
ಗಾಢ ತೋಷದೆ ಮಾಡುತ್ತಿದ್ದರು
ನಾಡ ಸ್ನಾನವ ಲಿಂಗಪೂಜೆಯ ನಿತ್ಯದಲಿ ತಾವು ।
ಮಾಡುತಿರುವಾ ಸಮಯದಲ್ಲಿಯೆ
ಬೀಡು ಕರುಣೆಯದಾದ ಪೂಜ್ಯರು
ಕೇಡಿರದ ಸತ್ಕೀರ್ತಿಭೂಷರು ಕೆಲಸವಿರಲೆನಿತೋ ॥೩॥

ಲಿಂಗವಂತರ ಧರ್ಮದನಿತೇ
ಮಂಗಲರಿಗಾಭಿಮಾನವಿರದೇ
ತುಂಗಮನದವರಿವರು ಹಿಂದೂಧರ್ಮದಾಗಿರಲು ।
ಭಂಗವಿರದಭಿಮಾನಿಗಳು ಬಲು
ನುಂಗಲಾಗದೆ ಕಷ್ಟ ವಿಷವನು
ಹಂಗುದೊರೆದೀ ಹಿಂದೂಧರ್ಮದ ಪರರ ಧರ್ಮದಲಿ ॥೪॥

ಸೇರಲಿಕೆ ತಾವ್ ಸಿದ್ಧರಾಗಿರೆ
ಭೂರಿತೋಷದೆ ಸಿಕಲಿಗಾರರು
ವೀರಯತಿಗಳು ಕೇಳಿಯಾಸಂಗತಿಯ ಜನರಿಂದೆ ।
ಕಾರುಣಿಕರೀ ಚಿಂತಿಸಿದ ರಂದ
ಸೇರದೊಲು ಪರಧರ್ಮದೊಳಗಾ
ತೀರ ಹೀನಸ್ಥಿತಿಯೊಳಿಹ ಜನ ಯತ್ನನಡೆಸಿದರು ॥೫॥

ಕರೆಸಿ ಹುಬ್ಬಳ್ಳಿ ಜನರ ಕೆಲವರ
ಗುರುಗಳವರಿಗೆ ತಿಳಿಸಿ ಪೇಳ್ದರಂ
ಪರರ ಧರ್ಮದಿ ಹೋಗದೋಲು ಭೋಧಿಸಿರಿ ಜನಗಳಿಗಂ ।
ಇರುವವರೆನಿತೊ ಸಾವಿರಬ್ದವು
ಹಿರಿಯದಾಗಿಹ ನಮ್ಮ ಧರ್ಮದಿ
ಬರುವ ವೈಜವ ಸುದಿನಗಳು ನಿಮಗೆಂದು ಪೇಳುವದು ॥೬॥

ಹೇಳಿಕೋಲು ಶ್ರೀ ಜಗದಗುರುಗಳು
ಹೇಳಿದರೆ ಹಿರಿಜನಗಳವರಿಗೆ
ಹೇಳಿರುವರೀ ಮಾತು ಹೇಳಲು ಶ್ರೀ ಗುರುಗಳೆಂದು ।
ಕೇಳಿಕೊಂಡರು ಸಿಕಲಿಗಾರರು
ತಾಳಿದರು ಸಂತೋಷವನು ಬಲು
ಹೇಳಿದರು ನಾವ್ ಶ್ರೀಗಳಪ್ಪಣೆ ಮನ್ನಿಸುವೆವೆಂದು ॥೭॥

ಹೋಗದೇ ಪರಧರ್ಮದಲ್ಲಾ
ಶ್ರೀಗಳಾಜ್ಞೆಯ ಹಾಗೆ ನಡೆದರು
ರೋಗಿಗಳು ದಾರಿದ್ರ್ಯವೆಂಬುವ ಸಿಕಲಿ ಮಾಡುವರು ।
ತ್ಯಾಗದಲಿ ಹೆಸರಾದ ಗುರುಗಳು
ರಾಗದೊಳಗಾ ಜನರಿಗಿತ್ತರು
ಬೇಗನೇ ತಾವ್ ಧಾನ್ಯ ವಸ್ತ್ರವ ಮತ್ತು ಧನವನ್ನು ॥೮॥

ಹರುಷವಾಯಿತು ಮತಿಗಳಿಗೆ ಕಂಡು
ಪೊರೆದು ವಕೆಸಲೆ ವಚನ ತಮ್ಮಯ
ಕೊರಗುಡಿರುವಾ ಬಡತನದೆ ಕಡು ಸಿಕಲಿ ಮಾಡುವರು ।
ಗುರುಗಳೆದರು ವಿಶಾಲವಿದ್ದಿತು
ಪರಮ ಹೃದಯವು ಪುಣ್ಯ ಹೃದಯವು
ಸರುವ ಜಾತಿಯ ಜನರು ಕಲಿಯಲಿ ನಡತೆ ಶ್ರೀಯವರ ॥೯॥

ಲಿಂಗವಂತರ ಜನರಿಗನಿತೇ
ತುಂಗಮನದೀ ಗುರುಗಳೆಸಗದೆ
ಲಿಂಗವಿಲ್ಲದ ಜನಕೆ ಕೂಡಾ ಮಾಡುತಿರೆ ಸಿರವ ।
ಲಿಂಗವಿಲ್ಲದ ಜನರಿಗೆನಿತೋ
ಹಂಗಿರದ ಶ್ರೀ ಪೂಜ್ಯಪಾದರು
ಮಂಗಲರು ಮಾಡಿಹರು ನೆರವನು ಸಾಲೆ ಹುಡುಗರಿಗೆ ॥೧೦॥

ಇರುವನ್ನೆ ಸಿಂಪಿಗರ ಕುಲಜನು
ಬರೆದ ನರಸು ಪುರಾಣವನ್ನೀ
ಬರೆಸಿದರು ನಾಲ್ಕೈದುಪುಸ್ತಕವವನ ಕಡೆಯಿಂದೆ ।
ಬರೆಯಿಸಿಯವನಿಗೆ ಯೋಗ್ಯ ಹಣವನು
ಹರುಷದಿಂದಂ ಕೊಟ್ಟು ಬಿಟ್ಟರು
ಪರಮಗುರುಗಳು ಮೂರುಸಾವಿರಮಠದ ಸ್ವಾಮಿಗಳು ॥೧೧॥

ಇರುತಿರಲು ಪ್ರಖ್ಯಾತ ಕವಿಗಳು
ಮರೆವ ತಮ್ಮಯ ಶ್ರೇಷ್ಟ ಧರ್ಮದಿ
ತೊರೆದು ತಾವಂಥವರ ಪರಮತದವನ ಕಡೆಯಿಂದೆ ।
ಬರೆಸಿರುವರಾ ಪುಸ್ತಕಗಳಂ
ಹಿರಿಯ ಮನಸಿನ ಪುಣ್ಯ ಚರಿತರು
ಪರರ ಜಾತಿಯ ಜನಕೆ ತಮ್ಮಿಂ ಹಣ ದೊರೆಯಲೆಂದು ॥೧೨॥

ಇಲ್ಲವೇ ಶ್ರೀ ಲಿಂಗಯುತರಲಿ
ಬಲ್ಲವರು ಕೀರ್ತನೆಯ ಮಾಳ್ಪರು
ಬಲ್ಲದವರು ಹಲಜನಗಳಿದ್ದರು ಬಿಟ್ಟು ಸರ್ವರನು ।
ಜಿಲ್ಲೇ ಮನದೀಗುರುವರೇಣ್ಯರು
ಸಲ್ಲಿಸಿರುವರು ವಿಪುರೇಣ್ಯರು ಕುಲಜಗೆ
ಗೆಲ್ಲವಡೆದೀ ಪೂಜ್ಯಪಾದರು ಕೀರ್ತನೆಯ ಕೆಲಸ ॥೧೩॥

ಮಾಡುತಿರುವರು ಮಠದಿಕೀರ್ತನೆ
ನಾಡೆ ಶ್ರಾವಣದಲಿ ತಪ್ಪದೆ
ನೋಡಿರೈ ಆಚಾರ್ಯ ಪರಿಸರ್ಪೋತ್ತಮರು ತಾವು ।
ಮಾಡಿಹರು ತಾವಿಂಥ ಕಾರ್ಯವ
ಗಾಢ ತೋಷದೆ ಮತ್ತೆ ಹಲವನು
ಜೋಡಿಯಿರದೀ ಪೂಜ್ಯಪಾದರು ಸತ್ಯವಚನಿಗಳು ॥೧೪॥

ಮಾಡಿಕೊಟ್ಟರು ಲಗ್ನ ಕೆಲವರ
ಕಾಡದೇವರ ಭಕ್ತಮಣಿಗಳು
ಕಾಡುವವರನು ಸಹಿತ ಮಮತೆಯ ಮಾಳ್ಪವರನರರು ।
ನೀಡಿದರು ಹೊಸಮನೆಯ ಕಟ್ಟಿಸಿ
ನೀಡಿದರು ಮನೆಕೋಡು ಕೆಲವನು
ನಾಡಿನಲಿ ಹೆಸರಾದ ಗುರುಗಳು ಕೆಲವರಿಗೆ ತಾವು ॥೧೫॥

ಕೊಟ್ಟಿಹರು ಹೊಸಮಠವ ಕಟ್ಟಿಸಿ
ಗಟ್ಟಿಗರು ಮೇಣ್ ಕೂಡಿಸಿಹರು ಮಠ
ಬೆಟ್ಟದೊಲು ಚಲಿಸದಿಹ ಧೀರರು ತಾವು ಕೆಲವರಿಗೆ ।
ಕೊಟ್ಟಿಹರು ಹೊಲಗಳನು ಕೆಲರಿಗೆ
ಕೊಟ್ಟಿಹರು ಧನ ಸಾಲೆಕಟ್ಟಲು
ಕೊಟ್ಟಿಹರು ಧನ ಕಲಿಯಲು ಕಾಶಿಗೆಹೋದ ಕೆಲವರಿಗೆ ॥೧೬॥

ಕಲಿಯಲಿಕೆ ಪರದೇಶಕ್ಕೈದುವ
ಕೆಲವರಿಗೆ ಧನಸಲ್ಲಿಸಿರುವರು
ಜಲಜಸಮ ಮೃದುವಾದ ಹೃದಯದ ಜಗದಗುರುವರರು ।
ಬಲು ಮುದದೆ ನಾವಿಲ್ಲಿ ಪೇಳ್ವೆವು
ಸತಿ ನಮಗೆ ಗೊತ್ತಿದ್ದ ಸಂಗತಿ
ಚಲುವುಮನಸಿನ ಶ್ರೋತ ಜನಕೇ ಕೇಳುವದು ನೀವು ॥೧೭॥

ಪರಿವರ ಕವಿಯೊಳಗೆ ವಾಸಿಪು
ತರುಣನೊಬ್ಬನು ಜಂಗಮನು ತಾಂ
ಹರುಷದಿಂ ಕರಕೊಂಡು ಬಂದನು ತಾನು ಗೌಡರನು ।
ಇರುವ ಸಂಕೇಶ್ವರದ ಪುರದಲಿ
ಕರುಣಿ ಶಂಕರರಾಯರಿವರನು
ನೆರವ ಬೇಡಲು ಧನದ ಶಿಕ್ಷಣಕ್ಕಾಗಿ ಯತಿಯ ಕಡೆ ॥೧೮॥

ಹೋಗಬೇಕಾಗಿತ್ತು ಕಲಿಯಲು
ಬೇಗನೇ ಪರದೇಶ ಕಾತನಿ
ಗಾಗಳಿದ್ದರು ಜಗದಗುರುಗಳು ತಮ್ಮ ಮಠದಲ್ಲಿ ।
ಬಾಗಿದರು ಶ್ರೀ ಗುರುಗಳಂಘ್ರಿಗೆ
ರಾಗದಿಂದಂ ಭಕ್ತಿಯಿಂದಂ
ನಾಗಭೂಷನ ನಾಮನೆನೆಯುತೆ ಮನದೊಳು ಭಯತರು ॥೧೯॥

ಹೇಳಿದರು ತಾವ್ ಬಂದ ಕಾರಣ
ರೇವಿಭೂಷಿತ ಮಹಿಮದಿವರಿಗೆ
ಹೇಳಿದರು ತಾವೂರ ಗೌಡರು ಬಹು ವಿನಯದಿಂದೇ ।
ಕೇಳಿಕೊಳ್ಳಿರಿ ಸ್ವಾಮಿರತ್ನರೆ
ಬಾಲಕಗೆ ಕೊಡಬೇಕು ದಯದಿಂ
ಕಾಲ ಕಾಲನ ಭಕ್ತರತ್ನರೆ ದ್ವಯಸಹಸ್ರಧನ ॥೨೦॥

ಕೂಡಲೇ ಕೊಡಿಸಿದರು ಧನವನು
ಗೌಡ ಕೊರೆಡೋಲೆರಡು ಸಾವಿರ
ಹಾಡಿ ಹರಸುತೆ ಸ್ವಾಮಿವರನ ಹೋದರು ಭಯತರು ।
ಮೂಡಿಹರು ಹಲಜನರಿಗೀ ಪರಿ
ಗೌಡ ತೋಷದೆ ಹಣದ ನೆರವನು
ನಾಡಿನಲಿ ಪ್ರಖ್ಯಾತರಾಗಿಹ ಜ್ಞಾನ ನದಿಯಿವರು ॥೨೧॥

ಬೇಡಲಿಕೆ ಬಂದವರಿಗೆಲ್ಲಾ
ಮಾಡಿಹರು ನೆರವನು ವಿಧ ವಿಧ
ಬೇಡಲಿಕೆ ಬಂದವರು ಹಾಗೆ ಹೋಗಲಿಲ್ಲೆಂದು ।
ಕೂಡಲೇ ತಾವ್ ಕೊಟ್ಟು ಬಿಡುತಿರೆ
ಬೇಡಿದಂತಹ ವಸ್ತುವವರಿಗೆ
ಮಾಡುತೆ ಸ್ತುತಿ ಯೋಗ್ಯರಾಗಿಹ ಜಗದಗುರುವರರು ॥೨೨॥

ಇರಲಿ ಬೇಕಾದಲಿ ಯತಿಗಳು
ದೊರೆಯುತಿರೆ ಭೋಜನವು ಜನರಿಗೆ
ಹರುಷದಿಂ ಭೋಜನವ ಮಾಡಿನೇ ಹೋಗುತಿರೆ ಜನರು ।
ನರಕ ರೂಪವ ತಾಳಿದಂತಹ
ಸುರತರುಗಳೀ ಪೂಜ್ಯಪಾದರು
ನಿರತಮಾ ಮಾಂಗಲ್ಯ ಕೃತಿಗಳ ನೆಗಳಿದಂಥವರು ॥೨೩॥

ಮಾಡಲಿಕೆ ಬರುವೆಲ್ಲಮಾರ್ಗದೆ
ಮಾಡಿದರು ದಾನವನು ಜನರಿಗೆ
ಮಾಡಲಿಕೆ ದಾನವನು ಸ್ಥಾನ ಸಿಗದಹಾಗಾಯ್ತು ।
ನೋಡಿರಿ ಶ್ರೀ ಜಗದ್ಗುರುಗಳು
ಗಾಢ ತೋಷದೆ ಗುರುತಿನವರನು
ನೋಡಿ ಮೋಟಾರದಲಿ ತಮ್ಮನನು ಕರೆದುಕೊಳ್ಳುತ್ತಿರಲು ॥೨೪॥

ಕರೆದುಕೊಂಡವರನ್ನು ಬಿಡುತಿರೆ
ಹರುಷದಿಂದವರೂರ ದಾರಿಗೆ
ಪರರ ಕೂಡ್ರಿಸಿಕೊಳ್ಳದಿಹ ಮೋಟಾರದಲಿ ತಮ್ಮ ।
ಇರುವರೆನಿತೋ ಗುರುಗಳಿಹದಲಿ
ಗುರುವಿನದು ಮೋಟಾರವಿದಕೊಳು
ಹೆರವರಾರೂ ಕೂಡ್ರಬಾರದು: ಹೀಗೆ ಹೇಳುವರು ॥೨೫॥

ಹೋಗುತಿದ್ದರು ಜಗದಗುರುಗಳು
ಯೋಗಿಗಳು ಚಲು ಹವೆಯೊಳರಲಿಕೆ
ರಾಗದಿಂ ಹುಕ್ಕೇರಿ ಸ್ಟೇಶನ್ ಬಳಿಯೊಳಿಹ ತಮ್ಮ ।
ಸಾಗಿರುವ ದಾಸೋಹ ತಾಣಕೆ
ಹೋಗುತಿರೆ ಹುಬ್ಬಳ್ಳಿ ಮಠದಿಂ
ಮೇಲೆ ಹೇಳಿದ ತೆರದೊಳು ಪ್ರಕೃತಿ ಮಾಡುತಿರೆ ಜನಕೆ ॥೨೬॥

ಜಗವನೆಲ್ಲವ ಗೆಲದುಕೊಂಡನು
ಮಿಗಿಲು ವೀರ ಸಿಕಂದರನು ತಾಂ
ಜಗದೊಳಿಲ್ಲವು ಭೂಮಿ ಹೆಚ್ಚಿಗೆ ಗೆದೆಯಲಿಕ್ಕೆಂದು ।
ಜಗದಿ ವೀರನು ಶೋಕ ಗೆಯ್ದನು
ಜಗದಗುರುಗಳಿಗಾಯ್ತು ಹಾಗೇ
ಮುಗಿದು ಹೋದವು ದಾನ ಮಾಡುವ ಮಾರ್ಗವದರಿಂದೆ ॥೨೭॥

ಇದ್ದರೂ ತಾವ್ ಜಗದಗುರುಗಳು
ಮಿದಿಗಳು ಗುರುಸಿದ್ಧ ದೇವರು
ಮುದ್ದಿನಂ ದಂತಮಗೆ ಶೋಭಿಸಿದಂಥ ಜನರೊಡನೆ ।
ಬುದ್ಧಿ ಪೂರ್ವಕ ಬೆರೆದು ಬಿಡುತಿರೆ
ಶುದ್ಧ ಮನದೀ ಪ್ರಣವರೂ ಪರು
ಗೆದ್ದ ಷಡ್ರಿಪುಗಳನು ಸಹಜವೇ ಪರಮ ಪಾವನರು ॥೨೮॥

ಗುರುಗಳಿವ ಕೋಲು ವರ್ತಿಸುತ್ತಿರೆ
ಮೆರೆವ ಕೊಲ್ಲಾಪುರದ ರಾಜರು
ಕಿರಿಯ ಜನರೊಳು ಬೆರೆದು ಬಿಡುತಿರೆ ಶಾಹುನೃಪತಿಗಳು ।
ಅರಹಿದರು ತಾಮೋಮ್ಮೆಯದಾಗೆ
ವರಸಜೀವ ಸಬನೀಸರಿವರುರೆ
ದೊರೆಗಳೇ ತಾವ್ ಬೆರೆಯಬಾರದು ಜನಗಳೊಡನೆಂದ ॥೨೯॥

ತಮ್ಮ ಘನಯೋಗ್ಯತೆಗೆ ಸಲ್ಲದ
ನಮ್ಮ ಸ್ವಾಮಿಯೇ ಜನರ ಸಂಗಡ
ನಮ್ಮ ಮನಸಿಗೆ ಬಾರದಿದು ನೀವ್ ಕೂಡಿಕೊಂಬುವದು ।
ಹಮ್ಮೀರದ ಮಾರಾಜ ಕೊರೆದರು
ನಮ್ಮದಿದು ಸಾಗುವದು ಹೀಗೇ
ನಿಮ್ಮ ಯೋಗ್ಯತೆಯಂತೆ ಸಾಗಿರಿ ನೀವು ದೊಡ್ಡವರು ॥೩೦॥

ಮತ್ತೇ ಪೇಳ್ದರು ಛತ್ರಪತಿಗಳು
ಬಿತ್ತರದ ಮೂರ್ತಿಗಳು ಮಂತ್ರಿಗೆ
ಚಿತ್ತದಲಿ ನೆಲೆಸಿಲ್ಲ ನನ್ನಯ ರಾಜನಾನೆಂಬ ।
ಉತ್ತಮರೇ ತಾಂಭಾವ ವೇದಿಗೂ
ಗೆದ್ದಿಹೆನು ನಾನೊಬ್ಬರವರ
ಲ್ಲಿತ್ತು ಬಿಡಲೀಬುದ್ಧಿಯಿದನೇ ಶಿವನು ಕೊನೆಯವರೆಗೆ ॥೩೮॥

ಹಾಗೆಯೇ ತಾವಿದ್ದರಮ್ಮನು
ಯೋಗಿವರ ಗುರುಸಿದ್ಧ ದೇವರು
ತ್ಯಾಗಿಗಳಿರಲಿಲ್ಲ ಶ್ರೇಷ್ಟನು ಜಗದಗುರು ನಾನು ।
ಹೀಗಿರುವ ತಾಂ ಸಹಜಭಾವವು
ರೋಗವಿಂದವರಿದವರು ಹಮ್ಮದ
ಭೋಗಿಗಳು ತಾವು ಶಾಂತಿ ವೈಭವ ಘನಮಹಿಮರಿವರು ॥೩೨॥

ರಾಜಮಂಡಳದಲಿ ಹೆಚ್ಚಿಗೆ
ತೇಜ ಬೀಳುತ್ತಿತ್ತು ನೈಜವು
ರಾಜವರ ಛತ್ರಪತಿ ವಿಶ್ರುತಶಾಹುನೃಪತಿಗಳು ।
ಸಾಜವಿದು ತಾಂ ಬೀಳದಿದ್ದಿತು
ಶ್ರೀ ಜಗದ್ಗುರುವರರ ತೇಜವು
ರಾಜಿಸುತ್ತಿಹ ವೀರಶೈವರ ಗುರುಸಮೂಹದಲಿ ॥೩೩॥

ನಮನ ಮಾಡುವ ಮಂದಿಗೆಲ್ಲಾ
ನಮಿಸುತಿದ್ದರು ಮುಗಿದು ಕೈಗಳ
ಸಮವಿರದ ಮೃದುಹೃದಯರೆಂಬುದು ಹಿಂದೆಯೇ ಹೇಳಿದರು ।
ಅಮರರಲ್ಲಿಯೂ ವಾಸಮೂಡದ
ಸುಮತಿಗಳಲೀ ಗುಣಗಳಿದ್ದವು
ಸುಪ್ರಸರರ ಹರ ಶಿವನ ಕೃಪೆಯಂ ಗಳಿಸಿದವರಿವರು ॥೩೪॥

ಬಸವಲಿಂಗನಯರು ಬಂದಿರೆ
ಮಿಸುನಿಯಂತ ಹಗುರುಗಳೊಂದಿಗೆ
ಪಶುಪತಿಯ ಸಂಕಲ್ಪದೊಲು ತಾವ್ ಬಾಲವಯದಲಿ ।
ಹೆಸರು ಒಡೆದಾ ಯಾದವಾಡದೆ
ಕುಸುಮತುಲ ಮೃದುವಾದ ಹೃದಯರೆ
ಉಸಿರುಹುದು ನಿಮಗದನು ಹಿಂದೆಯೆ ಸ್ಮರಣವಿರಬಹುದು ॥೩೫॥

ಬಸವಲಿಂಗನಯನವರು ಗೈದರು
ಹಸನ ಮನದಿ ಸ್ವಾಮಿ ಸೇವೆಯ
ಪಶುಪತಿಯ ದಯದಿಂದೆಯೇ ಮೂವತ್ತೊಂದು ವತ್ಸರವು ।
ಅಸಮ ಭಕ್ತಿಗೆ ಮೆಚ್ಚಿ ಗುರುಗಳು
ರಸಿಯೋಳೀಜನಿಸಿರುವ ಸಾಂಬರು
ಹೆಸರನಾಂತೆರೆಡತ್ತಿನಾಮಠ ಹುಬ್ಬಳ್ಳಿಯೊಳಿರುವ ॥೩೬॥

ಕೈಗೂಡಿಸಿದರು ಶ್ರೀ ಬಸವಲಿಂಗಯ್ಯ
ದೃಢ ಮನಸಿನೀ ಯತಿಗೆ ಮೋದದೇ
ಪಡೆದ ಕೈ ಚೆನವೀರ ಗುರುವೆಂಭಧೆಯ ಬಳಿಕವರು ।
ಕಡುಮನೋಹರವಿಹುದು ಮಠವಿದು
ನಡೆಯಿರುವದುತ್ಪನ್ನ ಮಠದಾ
ಒಡೆಯರಾದರು ಯತಿಗಳೈವತ್ತೊಂದು ಇಸವಿಯಲ್ಲಿ ॥೩೭॥

ಹೊಂದಿ ಭಕ್ತಿಯ ವಾಸ ಮಾಡಲು
ಬಂದ ಜನರಿಗೆ ಜಗದ್ಗುರುಗಳು
ನಂದದಿಂದಾಶ್ರಮದ ಕೊಡುತಿರೆ ಘನಮಹಿಮರವರು ।
ಎಂದಿಗೂ ಹೊರಗಟ್ಟದಿದ್ದರ
ಎಂಥುರರು ತಾವ್ ಕ್ಷಮಿಸುತ್ತಿದ್ದರು
ಹೊಂದಿದಾ ಶಾಂತಿಯ ದೋಷವವರದು ಕಲಿಸಿ ಬುದ್ಧಿಯನು ॥೩೮॥

ಪಳಿಯ ಪುಬ್ಬಳಿಯೊಳಗೆ ನೆಲೆಸಿದ
ಬಲು ಧನಿಕನಾಗಿರುವ ಗೋಕುಲ
ಚಲುಮನದ ಕಲ್ಲಯ್ಯನವರಿಗೆ ಮಕ್ಕಳಾಗದಿರೆ ।
ಒಲುಭಕುತಿಯಂ ಪ್ರಾಣತ ಗುರುವಿಗೆ
ಸತಿತಿಳಿಸಿದರು ತಮ್ಮ ವಾಂಛೇನುವುಗಳು
ನಿಲಯ ಕರುಣೆಯದಾದ ಶ್ರೀಗಳು ಪರಕೆಯನು ಕೊಟ್ಟು ॥೩೯॥

ಹೇಳಿದರೆ ಕೆಲತಿಂಗಳಲ್ಲಿಯೆ
ಶೂಲಿ ಕೃಪೆಯಿಂ ನಿಮ್ಮ ಪತ್ನಿಯು
ತಾಳುವಳು ಗರ್ಭವನು ಚಿಂತಿಸಬೇಡಿರೈ ನೀವು ।
ಹೇಳಿದೋಲು ಶ್ರೀ ಪೂಜ್ಯಪಾದರು
ಶೀಲವತಿಯೂ ಗರ್ಭವಾದಳು
ಬಾಲನನು ಪಡೆದಳಾಕೆಯು ದಿನ ಮುಗಿದ ಮೇಲೆ ॥೪೦॥

ಹರುಷವಾಯಿತು ಬಹಳ ಧನಿಕಗೆ
ಸುರಿದವಾಗಳು ಬಾಷ್ಪ ಹರ್ಷದ
ಗುರುವರರಿಗದ ನರಪ ಬಂದನು ಕೂಡಲೇ ತಾನು ।
ಧರೆಯ ಬಿಟ್ಟಂತರದಿ ಸಾಗಿದಿ
ತೆರದೊಳಾಗುತ್ತಿತ್ತು ನೈಜವು
ಬರುವ ಸಮಯದಿ ಮತಕೆ ಗೋಕುಲ ಸಾವುಕಾರರಿಗೆ ॥೪೧॥

ಯರಗಿದರು ಸಾಷ್ಟಾಂಗದಿಂದಂ
ಚರಣ ಸಾರಸಗಳಿಗೆ ಶ್ರೀಗಳ
ಹರುಷ ಬಾಷ್ಪಂಗಳನು ಸುರಿಸುತೆನೇತ್ರದಿಂತಾಹು ।
ಅರುಹಿದರು ತಾವ್ ಸಿದ್ಧಮೂರ್ತಿಗೆ
ಪರಮ ಮಂಗಲ ರೂಪಿಗಳೆಮಮ
ತರುವ ವಂಶದ ಜಿಗಿಸಿ ಬಿಟ್ಟಿರಿ ಭೂ ಶಿವನು ನೀವು ॥೪೨॥

ಅವನಿಗಾಗಿಹ ಕೇಡು ಹರ್ಷವ
ನವ ನಿಮೀಲಣ ಸಾಂಬರಾಗಿಹ
ಭುವನ ವಂದಿತ ಪೂಜ್ಯಪಾದರು ತೋಷ ಹೊಂದಿದರು ।
ಅವನು ಶ್ರೀಗುರು ಚರಣ ಕಮಲಕೆ
ಸವಿನಯದೆ ನತಿಗೆಯ್ಯುತಿರ್ದನು
ತವೆ ಹರಸಿ ಕಳಿಸಿದರು ಶ್ರೀಗಳು ಮೋದದಿಂದವನ ॥೪೩॥

ಮೊದಲು ಮಠದೊಳಗಿದ್ದ ಕುಂಜರ
ವಿಧಿ ವಶದಿ ತಾಂ ಸತ್ತು ಹೋಗಿರೆ
ವಿದಿತ ವಿದ್ದಿತು ಧನಿಕ ಕಲ್ಲಯ್ಯ ಸ್ವಾಮಿಗಳಿಗೆದುವು ।
ಮುದದೊಳಾನೆಯ ಕೊಂಡು ತಂದನು
ಸದಯರಾಗಿಹ ಶ್ರೀ ಘಳಂಘ್ರಿಗೆ
ಚದುರನಾಥನು ಸಲ್ಲಿಸಿದನೈ ಭಕ್ತಿ ಭಾವದೊಳು ॥೪೪॥

ಮೆರವು ಬಿಡಿನಾಳದೊಳು ನೆಲಸಿಹ
ಹೊರೆದುಕೊಳ್ಳುವ ಹೊಟ್ಟೆ ಕೂಲಿಯ
ಹೆರವರಲಿ ನೆರೆಮಾಡಿ ತರುತಿರಲಾಣೆಗಳನಾರು ।
ಇರುವದವನಿಗೆ ಚೆನ್ನ ಮಲ್ಲಪ್ಪ
ನೆರೆ ಹೆಸರು ಮೇಣಸುಂಡಿಯೆಂಬುವ
ಬಿರುವದೈ ಉಪನಾಮವಾತಗೆ ಸರಲ ಹೃದಯನಿಗೆ ॥೪೫॥

ಜಗದಗುರುಗಳಲಿಟ್ಟು ಭಕ್ತಿಯ
ಮಿಗಿಲು ನಿರ್ಮಲ ಮನಸ್ಸಿನಿಂದಂ
ಸುಗುಣೆಯಾತನು ನಡೆಯುಪತ್ತಿದಬಳಿಕ ಸ್ವಾಮಿಗಳೆ ।
ಮಿಗೆ ಕರುಣದಿಂ ಧನಿಕನಾದನು
ಮಗನ ಕೊಡಬೇಕೆಂದು ಬಿನ್ನಪ
ನಗುನಗುತಾನೆಸಗಿಕೊಂಡನು ಪೂಜ್ಯಪಾದರಲಿ ॥೪೬॥

ಚಿಂತೆ ಏತಕೆ ಮಾಡುತಿರುವೆಯೊ
ಶಾಂತಿಯಂತಳೆ ಕೆಲವು ಮಾಸದಿ
ಕಾಂತೆ ನಿನ್ನಯ ಗರ್ಭಧಾರಣ ಮಾಡುವಳು ನಿಜವು ।
ಇಂತು ಘನ ಮಹಿಮೆನೀ
ಸಂತಸದೆ ಸದ್ಭಕ್ತನಾಥನಿಗೆ
ಸ್ವಾಂತ ಶಾಂತಿಯು ನಾಂತುಬಿಟ್ಟಿತು ಚೆನ್ನಮಲ್ಲಪ್ಪನ ॥೪೭॥

ಹಡೆದಳೈ ತಾಂ ಗಂಡು ಮಗನನು
ಮಡದಿಯಾತನ ಸುಖದೆ ದಿನಗಳು
ಬಿಡದೆ ತುಂಬಿದ ಬಳಿಕ ಪೂರ್ಣವು ವರ್ಷದೊಳಗಾಗಿ ।
ಪಡೆದನೈ ಮಿತಿಮೀರಿ ಹರ್ಷವ
ಧೃಡ ಭಗುತ ಸತ್ಸಮದೊಳಗಾ
ಗಡವು ದೇವರದಾದ ಯತಿಗಳಿಗಿದನು ತಿಳಿಸಿದನು ॥೪೮॥

ಸತ್ತುಹೋಗಿತ್ತಾನೆ ಮಠದಾ
ಗೊತ್ತುತಾನಿರೆ ಚೆನ್ನಮಲ್ಲಪ್ಪ
ಗಿತ್ತನೈತಾನಾಗಿ ಗುರುವಿಗೆ ತೋಷದಿಂದೆ ಬಲು ।
ಮತ್ತಸ್ಸುಂಡಿಯ ಗದ್ದಿಗಪ್ಪನು
ಚಿತ್ತದಲಿಸಲೆ ಭಕ್ತಿ ವರ್ಧಿಸಿ
ಮತ್ತು ತಾನೊಂದು ಆನೆ ಕೊಟ್ಟನು ಪರಮಗುರುಗಳಿಗೆ ॥೪೯॥

ಇದ್ದವಾನೆಗಳೆರಡು ಮರಿಗಳು
ಸಿದ್ಧರಿಗೆ ಕೊಟ್ಟರಿಗೆ ಭಕ್ತರು
ಮುದ್ದಿನಿಂದಂ ಭಕ್ತಿಯಿಂದಂ ಬಿಡಿನಾಳವಾಸಿಗಳು ।
ಶುದ್ಧವಾಗಿಹ ಪ್ರೇಮದಿಂದಂ
ಬುದ್ಧಿಗಳು ರಕ್ಷಿಸಿದ ಕಾರಣ
ಪೆದ್ದು ತೋರುತ್ತಿರುವ ತರುಣತನವೊದಗಿ ॥೫೦॥

ಎಸೆಯುವಾ ಬೆಳಗಾಂವಿ ಜಿಲ್ಹೆಯೊ
ಳಸಮವಾಗಿಹ ಸಿದ್ಧಪುರುಷರು
ಹೆಸರು ಒಡೆದಂಕಲಿಯ ಶ್ರೀ ಅಡವಪ್ಪಸ್ವಾಮಿಗಳ ।
ಹೆಸರಿಸಿದ ಮೇಣವರ ತೆರದೊಳು
ಶಶಿಯ ಸನ್ನಿಭ ಶಾಂತರಾಗಿಹ
ಪಶುಪತಿಯ ಧರೆಯನಿಪ ಶ್ರೀ ದುರದುಂಡಿಸ್ವಾಮಿಗಳ ॥೫೧॥

ಹಿರಿಯರಾದಿ ಜಗದಗುರುಗಳ
ಪರಮ ಕೀರ್ತಿಯನಾಂತ ಸಿದ್ಧರು
ಮೆರೆವ ಕೋಣ್ಣೂರವರು ನುತ ಕೆಂಪಯ್ಯಸ್ವಾಮಿಗಳ ।
ಸರಿ ಇರುವವರ ಸಿದ್ಧರಿದ್ದರು
ಪರಮಯತಿಗಳು ಜಗದಗುರುಗಳು
ಹರಣರೂಪರು ವಿನುತ ಗುರುಸಿದ್ಧೇಶ್ವರರು ತಾವು ॥೫೨

ಸಲ್ಲಿಸಿದನ್ನೈ ವೈದ್ಯರಾಜನು
ಬಲ್ಲದೊಳು ಮಾತುಳ್ಳ ಶ್ರೀಗಳಿ
ಗೆಲ್ಲವು ಹದಿನೈದುಸಾವಿರು ತನ್ನ ಧನವನ್ನು ।
ಬಲ್ಲಿದನು ರುದ್ರಯ್ಯ ಸ್ವಾಮಿಯು
ಗೆಲ್ಲವಡೆದಿಹ ವೈದ್ಯಕರ್ಮದಿ
ಬಲ್ಲಿರಾ ನೀವ್ ಗುಮ್ಮಗೋಳನಾಮಮಠದವನು ॥೫೩॥

ನೋಡಿ ಈ ಶ್ರೀ ಪೂಜ್ಯಪಾದರು
ಮಾಡುತಿಪ ಕಲ್ಯಾಣ ಜನಗಳ
ನಾಡೆ ಕಣ್ಣಿಂ ಸಲ್ಲಲೆಂದರೆ ಧನವು ಪರಹಿತಕೆ ।
ಮಾಡಿದನು ತಾನರ್ಪಣೆಯ ಧನ
ಗಾಢ ಭಕ್ತಿಯು ಯತಿಯೊಳಿದ್ದಿತು
ನಾಡೆ ಸಂಸ್ತುತಿ ಮಾಡುತ್ತಿದ್ದನು ಯತಿಯ ಜನರೆದುರು ॥೫೪॥

ತಿಳುಯಲೆಂದಾ ವೈದ್ಯರೆಸಗಿ ಹೊ
ಚೆಲುವು ಕಾರ್ಯವು ಸಕಲ ಜನರಿಗೆ
ನಿಲಯರಾಗಿಪ ದಯದ ಶ್ರೀಗಳು ಪ್ರಕಟಗೊಳಿಸಿದರು ।
ಸಲಬರೆಸಿಯಾ ವೈದ್ಯರಾಜನ
ಚೆಲವು ಚರಿತೆಯು ಪದ್ಯರೂಪದಿ
ಒಲು ಮಮತೆತಾನಿತ್ತು ವೈದ್ಯರಮೇಲೆ ಶ್ರೀಯುವರ ॥೫೫॥

ಆದ ಮೇಲು ಮಠಕೆ ಹುಬ್ಬಳ್ಳಿ
ಯೀ ದಯಾಮೂರ್ತಿಗಳು ಗುರುಗಳು
ಮೋದದೊಳಮವಾಸೆ ತಿರ್ದರ್ರೈ ಬಿಡದೆ ।
ಸಾದರದೊಳುರು ಮರಡಿಮಠಕಾ
ಛಾದೆ ಭಕ್ತರ ಪರಣಮಾಡಲು
ಸೋದರರು ನಿಜ ಪುಣ್ಯದೇಹಿಗಳು ॥೫೬॥

ಮತ್ತುಸುರುವವು ಜಗದಗುರುಗಳ
ಸತ್ತಮರ ಚಾರಿತ್ರ್ಯಮಂದೀ
ಬಿತ್ತಿರುವ ಸಲೆ ಸಾಜಮಾತು ಪುರಾಣದೊಳು ನಾವು ।
ಚಿತ್ತಚಾರಿಯ ಭಕ್ತ ಜನರೇ
ಚಿತ್ತವಿಸಿರೈ ಕೇಳ ಬನ್ನಿರಿ
ಹೊತ್ತು ಹೋದುದು ಪದುಳದೊಳು ನಿಮ್ಮಲ್ಲರದು ತಾನು ॥೫೭॥

ಹರಿವಿಧಿಗಳಿಂ ಸುರಪನಿಂದಂ
ಮೆರವ ಪೂಜಿಸಿಕೊಂಡು ನಿತ್ಯವು
ಸರುವಲೋಕವ ಸಲಹುತಿರುವಾ ಪರಮ ಮಂಗಲಗೆ।
ಧರಣಿಯನು ರಥಮಾಡಿಕೊಂಡಿಹ
ಸ್ಮರಣ ಮೇಣ್ ಮುಪ್ಪುರುವ ದಹಿಸಿದ
ಗಿರಿಜಯಾಣ್ಮಗೆ ಫಾಲನಯನಗೆ ನಿರುತ ಜಯವಿರಲಿ ॥೫೮॥

( ಒಂಭತ್ತನೆಯ ಸಂಧಿ ಮುಗಿದುದು )



# ಹತ್ತನೆಯ ಸಂಧಿ

ಸೂಚನೆ:– ಬಸವದೇವನು ಮಾಡಿದಂತಹ
ನಸುವು ಕಾರ್ಯವ ಪೇಳ್ದುದಿದದೊಳು
ಹಸನ ಮನಸಿನ ಶ್ರೋತೃಜನಕೇ ಕೇಳಿ ಹಿಗ್ಗುವದು ।

ಶ್ರೀ ಗುರುಪಿತಂ ನಾಗಭೂಷಂ
ಯೋಗಿಜನಹೃತ್ಸದನ ವಾಸಂ
ರಾಗದಿಂ ಮೇಣ್ ದಯದೆ ವಿಶ್ವವ ಪೊರೆವ ಶಂಕರನು ।
ನಾಗಜಾ ಪ್ರಾಣೇಶನಾಗಿಹ
ಭೋಗಿಸದ ವೈಭವವ ದೇವನು
ಸಾಗಿಸಲಿನಮ್ಮೆಲ್ಲರುದಿನ ಸುಖದಮಾರ್ಗದಲಿ ॥೧॥

ಇಲ್ಲಸೂತಕವೈದು ನಮ್ಮನು
ಒಲ್ಲರಾಶಿವ ಧರ್ಮದೊಳು ತಾ
ನಿಲ್ಲ ಜನನದ ಮರಣರಜಗಳ ಜಾತಿಗಳ ಮತ್ತೆ ।
ಇಲ್ಲಮಚ್ಚಿಷ್ಟದದು ಸೂತಕ
ಗೆಲ್ಲವಡೆದೀ ಸತ್ಯ ಧರ್ಮದಿ
ನಿಲ್ಲಲಿಕೆ ಸ್ಥಳವಿಲ್ಲವಿದದೊಳು ಹುಚ್ಚುನಡೆಗೆಂಥ ॥೨॥

ಹಿರಿಯವಾಗಿಹ ಸೂತಕಗಳಾ
ವಿರದಮೇಲೀ ಲಿಂಗಯುತರಲಿ
ಕಿರಿಯವಾಗಿಹ ಮಿಕ್ಕ ಸೂತಕ ಬರುವವೆಲ್ಲಿಂದೆ ।
ಅರಿಯರೈ ಶಿವಧರ್ಮವಿರುವದು
ತೊರೆದಿರುವ ಸೂತಕಗಳೆಲ್ಲವ
ಸದುವದನು ಸಮವಾಗಿ ಗಣಿಪ್ಪದು ಪರಮಧರ್ಮವಿದು ॥೩॥

ಹಿರಿಯದದು ತಪ್ಪೆಂದು ಪೇಳ್ವರು
ನರರ ಕೆಲರಸ್ಪೃಶ್ಯರೆಣಿಪುದು
ಗುರುವರೇಣ್ಯನನು ಬಸವದೇವನು ಶರಣಜನರೆಲ್ಲಾ ।
ಒರೆಯಲಿಲ್ಲವು ಜೈನಧರ್ಮವು
ಜರೆಯುತಿಪುದಸ್ಪೃಶ್ಯರನು ಬಲು
ದೊರೆಯದೈ ಅಸ್ಪೃಶ್ಯಕೇಳ್ಗೆಯ ಸ್ಥಳವು ಪಾರ್ವದಲಿ ॥೪॥

ಉಳಿದವೆನಿತೊ ಪಂಥಮತಗಳು
ನೆಲಸಿಹವು ಘನ ಹಿಂದೂಧರ್ಮದಿ
ಕಳೆಯಲಿಕ್ಕಸ್ಪೃಶ್ಯತೆಯ ಬಲ ರಹಿತವಿರುವವು ।
ಕಲಿಯುಗದಿ ಒರಿನಾಮನೆನೆದರೆ
ಸಲೆ ಸುಗುತಿಯಾಗುತಿಹುದೆಂಬುದೆ
ತಿಳಿಸುತಿರುವವು ಮಿಕ್ಕಮಾತಿನ ಗೊಡಿವೆಯಿಲ್ಲವಕೆ ॥೫॥

ಹಿಂದೂಜನರೆನ್ನುವರು ಮೂರ್ತಿಯ
ಹೊಂದಿ ಭಕ್ತಿಯ ಪೂಜೆಮಾಡುವ
ಮಂದಿಗೆಲ್ಲಾ ಅನ್ಯದೇಶದ ಜನರು ಕೇಳಿದಿರಾ ।
ಹಿಂದೂಧರ್ಮದೊಳಿದ್ದ ಮೂರೂ
ಹೊಂದಿ ತಾವ್ ಸಕಲಸ್ವತಂತ್ರತೆ
ಯಿಂದೆ ಮೆರೆಯುವ ಜೈನ ಲಿಂಗಾಯತರ ಬ್ರಾಹ್ಮಣರ ॥೬॥

ಧರ್ಮವೀಮೂರೊಳಗೆ ಮಾಡಿದೆ
ಧರ್ಮಲಿಂಗಾಯತರ ಪರತರ
ಕರ್ಮವನು ಹಿಂದುಳಿದ ಜನರುಗಳೇಳ್ಗೆಗೊಳಿಸಿದುದು ।
ನಿರ್ಮಲಾಂತಃಕರಣ ಬಸವನು
ಧರ್ಮರೂಪನು ಘನಸಮರ್ಥನು
ಕೂರ್ಮೆಯಿಂತಾನೆತ್ತಿಕೊಂಡನು ದೀನದುರ್ಬಲರ ॥೭॥

ಹಿಂದೆಬಿದ್ದಿಹ ಜನಗಳಾರೂ
ಮುಂದೆಬರಲಿಕೆ ಮಾರ್ಗವಿಲ್ಲವು
ಹಿಂದುಳಿದವರು ತಲೆಯನೆತ್ತರದಹಾಗೆ ರಚಿಸಿರುವ ।
ಒಂದದುವು ಬ್ರಾಹ್ಮಣರ ಧರ್ಮವು
ಹೊಂದಿರಲು ಜನ ದುಃಖಿಸಿದರಿಂ
ತಂದೆ ಸರ್ವರ ಬಸವರಾಜನು ಮುಂಬರಲಿಕವರು ॥೮॥

ಲಿಂಗವಂತರ ಧರ್ಮದೊಳು ನಿಜ
ಮಂಗಲಕರಕೊಂಡನವರನು
ಲಿಂಗವಂತರ ಧರ್ಮವರ್ಧಕ ಬಸವದಿನಕರನು ।
ಹಿಂಗಿಯವನತಿಯೇಳ್ಗೆವಡೆದರು
ಲಿಂಗವಂತರ ನ್ಯಾಯಮಯವಿಹ
ಭಂಗವಿಲ್ಲದ ಧರ್ಮದೊಳು ಸೇರಿರುವ ಜನರೆಲ್ಲಾ ॥೯॥

ದೀನದುರ್ಬಲರಾಗಿ ಜಗದೊಳು
ಮಾನವಿಲ್ಲದೆ ಕಾಲಗಳೆಯುವೆ
ಕಾಣಲಾರದೆ ಸುಖದಮಾರ್ಗವು ಬಳಲುತಿರುವಂಥ ।
ಕಾಣೆರೆನಿತೋ ಕೋಟಿಜನಗಳು
ದೀನರವದಿಂ ಬೇಡುತ್ತಿದ್ದರು
ಜ್ಞಾನನಿಧಿ ಶಿವನಲ್ಲಿ ಮಾಡಲು ತಮ್ಮ ಏಳ್ಗೆಯನು ॥೧೦॥

ಕಳೆಯಲಿಕ್ಕಾ ದುಃಖಜನಗಳ
ತಳೆದು ಮಾನವರೂಪವನು ತಾ
ನಿಳೆಗೆ ಬಂದನು ಶಿವನೊ ಶಿವಸೇವನೊ ತಾನಾದ ।
ಬಲುಸಮರ್ಥನು ಬಸವದೇವನು
ಚೆಲುವು ಕರ್ನಾಟಕದಿ ನೆಲಸಿದ
ತುಲವಿರದ ಲಿಂಗಾಯತರ ತಾಂ ಧರ್ಮಕೈಕೊಂಡು ॥೧೧॥

ಹಿಂದೂಜನರೆಂದೆನಿಸುವವರನು
ಬಂಧುರನು ಭೂಶಿವನು ಬಸವನು
ಹೊಂದಿ ಸಂತೋಷವನು ಧರ್ಮದಿ ಬರುವರೆಲ್ಲರನು ।
ನೇದದಿಂದಂ ಬೆರಸಿಕೊಂಡನು
ಹಿಂದುದೇಶದಳೊಂದುಮಾಡಲು
ಕುಂದಿರದೆ ಶಿವಧರ್ಮವನುಸಲೆಯತ್ನವೆಸಗಿದನು ॥೧೨॥

ಜಾತಿಗಳ ನಿರ್ನಾಮಗೆಯ್ದರೆ
ಪೂತ ಶಿವಧರ್ಮವನು ಬೆಳೆಸುವ
ನೀತಿಭೂಷಣ ಬಸವದೇವರು ಯೋಚನೆಯಮಾಡಿ ।
ಸಾತಿಶಯ ಕಲ್ಯಾಣಕಾರ್ಯವ
ನಾತುರದೆ ತಾಂ ಮಾಡುತಿದ್ದನು
ಭೂತನಾಥನ ಪರಮಭಕ್ತನು ಬಸವಗುರುವರನು ॥೧೩॥

ಬಸವ ದೇವನ ಪೂಜ್ಯವಾಣಿಗೆ
ವಿಷಮವಿಲ್ಲದ ಧರ್ಮರಚನೆಗೆ
ಪಶುಪತಿಯ ಶರಗಾಳಿ ಬೋಧೆಗೆ ಮೆಚ್ಚಿ ಹಲಜನರು ।
ಅಸಮ ತೋಷದೆ ಬರತೊಡಗಿದರು
ರಸೆನೆಯೊಳಗೆ ಪರವಾದ ಧರ್ಮದಿ
ಹಸನ ಮನಸಿನ ಬುದ್ಧಿವಂತರು ಬಿಡದೆನಿತ್ಯದಲಿ ॥೧೪॥

ಬಂದರಾ ಕುಂದಿರದ ಧರ್ಮದಿ
ಹಿಂದುವೆನಿಸುವ ಸಕಲ ಕುಲಜರು
ಬಂದರದಲೊಳು ಜೈನಜನಗಳು ಬ್ರಾಹ್ಮಣರು ಕೆಲರು ।
ಹೊಂದಿಯತ್ಸಾನಂದ ಬಂದರು
ಹಿಂದುಳಿದ ಹಲಜಾತಿ ಜನಗಳು
ತಂದೆಯೆಂತಿಪ ಬಸವದೇವನ ಶ್ರೇಷ್ಠಧರ್ಮದಲಿ ॥೧೫॥

ಬಿಡಲು ಮಾಂಸವ ಸೇವಿಸುವದನು
ಬಿಡಲು ಸುರೆಯನು ಪ್ರಾಶಿಸುವದನು
ದೃಢಮನದೆ ತಾವೊಪ್ಪಿಕೊಂಡಿಹ ಜನರು ಪ್ರತಿದಿನವು ।
ಕಡುಮುದದೆ ಸ್ವೀಕರಿಸುತ್ತಿದ್ದರು
ಪೊಡವಿಯೊಳು ಕೀರ್ತಿಸಿದ ಧರ್ಮವ
ಬಿಡದೆ ಸ್ಮರಣೆಯ ಮಾಡುತ್ತಿದ್ದರು ಬಸವನುಪಕೃತಿಯ ॥೧೬॥

ಹಲವು ಜನರ ಸ್ಪೃಶ್ಯ ಕುಲಜರು
ಚಲವು ಶಿವಧರ್ಮದಲಿ ಬೆರೆದರು
ಕಳೆದುಕೊಂಡರು ತಮ್ಮ ದುರ್ದಶೆ ಘೋರತರವಾದ ।
ಸಲೆನಡೆದು ಸನ್ಮಾರ್ಗದಿಂದ
ಗಳಿಸಿಕೊಂಡರು ಶ್ರೇಷ್ಠವಾಗಿಹ
ತಿಳಿವಳಿಕೆಯನು ಕೆಲರು ಶರಣಸ್ಥಾನ ಹೊಂದಿದರು ॥೧೭॥

ಹರಳ ಶರಣನು ಸಮ್ಮಗಾರನು
ಶರಣ ಕಕ್ಕಯ್ಯ ಡೋಹರವನಿರೆ
ಶರಣ ಚನ್ನಯ್ಯ ಮಾದಿಗರ ಕುಲದವನು ತಾನಿರಲು ।
ಶರಣ ದೇವನಾಗಯ್ಯ ಹೊಲೆಯನು
ಶರಣನುಲಿಚಂದಯ್ಯ ಕೊರವನು
ಶರಣನಾರಾಮಯ್ಯ ನೊಡ್ಡರ ಜಾತಿಯವನವನು ॥೧೮॥

ವೀರಶೈವ ಸುಧರ್ಮದೊಳಗಾ
ಸೇರಿದ ಮೊದಲಿಹ ಕುಲಗಳವು
ವೀರ ಶರಣರು ಬಳಿಕ ಲಿಂಗಾಯತರು ತಾವವರು ।
ಸೇರಿರುವ ಶಿವಧರ್ಮದೊಳಗಾ
ಕಾರುಣಕರು ಶಿವಶರಣರೆಲ್ಲರು
ರಿಮೋದದೆ ಮೊದಲುಮಾಡುವ ಕೆಲಸಮಾಡಿರುವರು ॥೧೯॥

ಸೇವಿಸುತ್ತಿರೆ ಬಸವದೇವನು
ಪಾವನನು ಬಹು ತೋಷದಿಂದಂ
ದೇವ ಸವಶಿವನಾಗಮಯನ ಪ್ರಸಾದವನೂ ಮಿಕ್ಕ ।
ಆವ ಭೇದವ ಮಾಡದಿದ್ದರು
ಲೇವಿರಲು ಸಮತೆಯರಿ ಧರ್ಮದಿ
ಪಾವಕಾಕ್ಷನದಯದೆ ನೆಲಸಿದ ವೀರಶೈವರಲಿ ॥೨೦॥

ಹಿಂದೂ ಧರ್ಮದೊಳಿರುವವೆಲ್ಲಾ
ಮಂದಿಗಳು ತಾವ್ ಸಕಲ ಕುಲಜರು
ಬಂದಿಹರು ಕೆಲಜನರು ಲಿಂಗಾಯತರ ಧರ್ಮದೊಳ ।
ಬಂದು ಕೂಡಿದರಿಂದ ಜನರಾ
ಹೊಂದಿಹುದು ತಾಂ ಘನತೆ ಸತ್ಯವು
ಬಂಧುರವು ತಾನಾದುದಿದು ವಿಹುದವರದೇ ತಾನು ॥೨೧॥

ಆಗದೇ ಲಿಂಗಯುತರಿಗೆ
ತ್ಯಾಗಿಬಸವನು ಪರಮಪೂಜ್ಯನು
ಹಾಗೆಯೇ ಆಗಿಪನು ಪೂಜ್ಯನು ಹಿಂದುಗಳಿಗೆಲ್ಲಾ ।
ಆಗಲಿಲ್ಲೀ ಜಾತಿಭೇದವ
ಹೀಗೆ ಕಳೆಯುವ ಧೈರ್ಯ ಪರದಿಂ
ನೀಗಿತದು ಭೂಸಾಂಬನಾಗಿಪ ಬಸವನಿಂ ಸಹಜ ॥೨೨॥

ಬಂದು ಕೂಡಿದ ಧರ್ಮದೊಳಗೀ
ಹಿಂದುಗಳು ತಾವೇಳ್ಗೆ ಪಡೆದರು
ಹಿಂದೆ ದುಃಸ್ಥಿತಿಯಗ್ನಿಯೊಳು ಬಿದ್ದವರು ಪಲರವರು ।
ಬಂದಿರುವದವರಲ್ಲಿ ಯೋಗ್ಯತೆ
ತಂದೆ ಬಸವನ ಶ್ರೇಷ್ಠಕರ್ಮದೆ
ಹಿಂದೂ ಜನರಲಿ ಜೈನ ವಿಪ್ರರಗಿಂತಲೂ ಅಧಿಕ ॥೨೩॥

ಇದ್ದರೂ ಕೆಲಸಾವಿರಬ್ದವು
ಬಿದ್ದಿರುವ ತಾವ್ ಸೂದ್ರನಾಮಕ
ವೃದ್ಧವಾಗಿಪ ತಗ್ಗಿನೊಳಗವರುದ್ಧರಿಸದಿರುವ ।
ಇದ್ದರೇನಾ ಧರ್ಮಜಗದೊಳು
ಬುದ್ಧಿಯಿದ್ದವರಂಥ ಧರ್ಮಕೆ
ಶುದ್ಧಮನದಿಂ ದೆನ್ನಲಾರರು ಧರ್ಮವೆಂದದುವು ॥೨೪॥

ರೂಪದಲಿ ಪೈಬಣ್ಣದಲ್ಲುರು
ಪಾಪರಹಿತನು ಲೋಕದೊಡೆಯನು
ತಾಪ ಭೋಗಿಪ ಮನುಜರೊಳುಗಡ ಭೇದಮಾಡಿಪನು ।
ಆ ಪರಮ ಮೃಡಮಾಡಲಿಲ್ಲವು
ರೂಪದೋಲ್ ಜ್ಞಾನದಲಿ ಮತಿಯ
ಲ್ಲಾಪರಿಯ ಭೇದವನು ನರರೊಳು ನೈಜವಾದುದಿದು ॥೨೫॥

ಆವ ಕುಲದವನಿರಲಿ ಮನುಜನು
ನೀವು ಕಲಿಸಿದ ವಿದ್ಯೆ ಬರುವದು
ನೀವು ಕಲಿಸದೆ ವಿದ್ಯೆ ಬರುವದೇ ಹಿರಿಯ ಕುಲಜರಿಗೆ ।
ತಾವು ಹಿರಿ ಜಾತಿಯವರು ನಿತೇ
ಪಾವನಾತ್ಮಕ ವಿದ್ಯೆ ಪಡೆದರು
ಬೂವಿಯೊಳು ಭಾರತದಿ ನೆಲೆಸಿರುವ ಅಂತ್ಯಜರುಸಹಿತ ॥೨೬॥

ಎನಿತೊ ಸಾವಿರ ವರ್ಷ ನಡೆದಿದೆ
ಜನರ ಮೇಲ ನ್ಯಾಯ ನಮ್ಮಯ
ಜನಜನಿತ ವಿಷದೀದು ಧರ್ಮದ್ಧಿ ಘೋರತರವಾದ ।
ಜನಿಸಿದನು ಭೂತಲದಿ ಬಸವನು
ವಿನಯರೂಪನು ಪರಮ ಮಹಿಮನು
ವಿನುತ ಕರ್ನಾಟಕದಿಕಳೆಯತಿ ದುಃಸ್ಥಿತಿಯನಿದನು ॥೨೭॥

ವರ್ಣವಾದ ವಿರೋಧಿ ಬಸವನು
ಪೂರ್ಣಜಯವನು ಪಡೆದು ಬಿಟ್ಟನು
ಕರ್ಣನೊಲುಸೋದಾರ ಹೃದಯನು ಧರ್ಮಕಾರ್ಯದಲಿ ।
ಜೀರ್ಣವಾಗಿಪ ಪೂರ್ವಧರ್ಮದೊ
ಳರ್ಣವದೊಲು ವಿಶಾಲ ಕರುಣನು
ಪೂರ್ಣ ಸತ್ಕ್ರಾಂತಿಯನು ಗೆಯ್ದನು ಲೋಕವಂದಿತನು ॥೨೮॥

ಜಾತಿಗಳನುದೆ ನಷ್ಟ ಮಾಡಲು
ಪೂತ ಶಿವಧರ್ಮವನು ಬೆಳೆಸಲು
ಖ್ಯಾತ ಬಸವನವತರಿಸಿದನೀ ಮೃತ್ಯುಲೋಕದಲಿ ।
ಸಾತಶಯ ಜಯವಡೆದನದರಲಿ
ಭೂತಲದರೆವನಾದ ಬಸವನು
ನೀತಿರೂಪನ ಶ್ರೇಷ್ಠತೆಯ ವೈಶಿಷ್ಟ್ಯವಿದರೊಳಿದೆ ॥೨೯॥

ಕಿರಿಯ ಜಾತಿಯರೆನಿಸಿಕೊಳ್ಳುವ
ಹೆರವರಿಂದಪಮಾನ ಹೊಂದುವ
ತೊರೆದು ಪೂರ್ವದ ಜಾತಿಗಳ ಶಿವಧರ್ಮ ಕೈಕೊಂಡ ।
ಸರುವರೂಸಲೆ ಹರಸುತಿದ್ದರು
ಪರಮಗುರು ಬಸವಣ್ಣನವರನು
ಕರುಣದಿಂ ತಮ್ಮೇಳ್ಗೆಗೊಳಿಸಿದ ಕಾರಣಕ್ಕಾಗಿ ॥೨೦॥

ಮುಟ್ಟಬಾರದು ಹೊಲೆಯರೆಂಬುವ
ಕೆಟ್ಟಮಾತನು ಹೇಳಲಿಲ್ಲವು
ಗಟ್ಟಿಗನು ಶ್ರೀ ಬಸವರಾಜನು ಶರಣ ಜನರಾರೂ ।
ಮುಟ್ಟಿದರೆ ತಪ್ಪಲ್ಲವೆಂದುರೆ
ದಿಟ್ಟ ಬಸವನು ಸಾರಿಪೇಳ್ದನು
ಬಿಟ್ಟು ಬಿಡಲೀ ಕೆಡಕು ವಾಡಿಕೆ ಶರಣರೊರೆದಿಹರು ॥೨೧॥

ಸಾರಿ ಪೇಳಿದೆ ವೀರಶೈವರ
ಭೂರಿ ನಿಜವಿಹಧರ್ಮವೊಂದೇ
ಭಾರತದ ದೇಶದಲಿ ಮೊದಲಲ್ಲ ಸ್ಪೃಶ್ಯತೆಯ ತಾನು ।
ಘೋರವಾದ ನ್ಯಾಯವಾಗಿದೆ
ದೂರವಾಗಲು ಬೇಕು ಬೇಗನೆ
ವೀರರವದಿಂ ದೆಂಟುನೂರಬ್ದಗಳ ಪೂರ್ವದಲಿ ॥೨೨॥

ದೇಶದೆಲ್ಲಾ ಜನರ ಮನದಲಿ
ವಾಸವಾಗಿಪ ರೂಢಕಳೆಯುವ
ದೀಶನಿಗೆ ಸಹ ಸಾಧ್ಯವಿಲ್ಲದ ಕಾರ್ಯಮಾಡಿದರು ।
ನಾಶವಾಗದ ಧರ್ಮಗಳೆ ತಾವ್
ರೋಷದಿಂ ಬಸವಾದಿ ಪ್ರಮಥರು
ತೋಷದಿಂ ಪೇಳುವೆವು ಘಂಟಾ ಘೋಷವಾಗಿದನು ॥೨೩॥

ಬಸವದೇವನೊಳಸಮವಿರುವದು
ಪಶುಪತಿಯ ಧರ್ಮಿಗಳ ಭಕ್ತಿಯಲು
ಬಸವದೇವನ ಬೋಧದೊಲು ನಡೆವವರು ತುಸುಜನರು ।
ಕುಸುಮಸನ್ನಿಭ ಮೃದುಲ ಮನಸಿನ
ಶಶಿಯುತೆರ ಬಹು ಶಾಂತರಾಗಿಹ
ಹೆಸರುವಡೆದಿಹ ಮೂರುಸಾವಿರಮಠದ ಗುರುವರರು ॥೨೪॥

ಬಸವನುಪದೇಶದೊಲು ನಡೆದರು
ಹಸನಮನಸಿನ ಪೂಜ್ಯಪಾದರು
ಬಸವನಲಿ ಶಿವನೊಳಿರುವೊಲು ಬಹು ಭಕ್ತಿಯುಳ್ಳವರು ।
ಅಸಮವಾದ ವಿಶಾಲಮತಿಯುದು
ತುಸುವು ಬಿಡುವಿಲ್ಲದಲೆ ದುಡಿದರು
ವಿಸುನಿಯಂತಹ ಗುಣದ ಗುರುಗಳು ಜನರಹಿತಕಾಗಿ ॥೨೫॥

ರೂಢವಾಗಿಹ ತಪ್ಪದಾರಿಯ
ನೋಡಿರೀ ಧರ್ಮಾತ್ಮ ತುಳಿಯದೆ
ಗಾಢತೋಷದೆ ಬಸವ ರಚಿಸಿದ ಪಥದೆ ಸಾಗಿದಳು ।
ಮೂಡುತಿದ್ದರು ನಮನಯುತಿಗೀ
ನೋಡಿದಾ ಅಸ್ಪೃಶ್ಯಜನಗಳು
ನಡೆ ಮಸ್ತಕಮುಟ್ಟು ಪಾದದಮೇಲೆ ತಾವುಗಳು ॥೨೬॥

ನಮನವವರದು ನಲ್ಮೆಯಿಂದಂ
ಸುಮನಶರರಿಪುವಾದ ಮಹಿಮರು
ಸುಮನಸಮವಾಗಿರು ಹೃದಯದು ಸ್ವೀಕರಿಸುತ್ತಿರಲು ।
ವಿಮಲಮಾನಸದಿವರ ಮನದಲಿ
ತಮವು ಸೂತಕಸೇರದಿದ್ದಿತು
ಪ್ರಮುದದಿಂ ದಸ್ಪೃಶಿಗೆ ನೆರವಾಗುತಿರಲಿವರು ॥೨೭॥

ತೊಳೆದುತರುತರೆ ಹೊಲೆಯನೊಬ್ಬನು
ಬಲುದಿವಸ ಯತಿವರರ ಬಟ್ಟೆಯ
ಚಲಿಸದವರದು ಲಿಂಗವಂತರ ಧರ್ಮಪಥದಿಂದೆ ।
ಒಳಿತುಮಾರ್ಗವ ಬಿಡದೆ ನಡೆದರು
ಬಲುಹು ಧೃತಿಯುತರಾದ ಹುಬ್ಬಳಿ
ಗೆಲವ ಪಡೆದಿಪ ಮೂರುಸಾವಿರಮಠದ ಸ್ವಾಮಿಗಳು ॥೩೮॥

ಕಾಜದೊಲು ವಸ್ತ್ರವನು ಧರಿಸಲು
ಸಾಜವಿದು ಬರುತಿತ್ತು ಸಹಜವು
ಸೋಜಿಗವು ಕಡು ಕಾದಿಬಟ್ಟೆಯ ಧರಿಸಿದರು ನಿರುತ ।
ನೈಜವಿದು ತಾವ್ ಹೆಚ್ಚಿನೂಟದ
ನೀ ಜಗದಗುರು ಮಾಡದಿದ್ದರು
ರಾಜರೋಲು ವೈಭವವು ತುಂಬಿರೆ ತಮ್ಮ ಮಠದಲ್ಲಿ ॥೩೯॥

ನಾನಿಹೆನುವರ ಜಗದಗುರುವೀ
ಕಾಣಿರೈ ಭಾವನೆಯೆ ಯತಿಯೊಳು
ತಾನು ಜನಿಸದೆಹೋಯ್ತು ಕಡೆಗೂ ನಿಜಪಹಿಮರಿವರು ।
ನಾನಿಹೆನು ಸೇವಕನು ಜನಗಳ
ಜ್ಞಾನಿಗಳಲೀಭಾವ ನೆಲಸಿಕೆ
ದೀನಜನರನು ಹೆಚ್ಚು ಪ್ರೀತಿಪ ಜಗದಗುರುಗಳಲಿ ॥೪೦॥

ನುಡಿಯಲಿಲ್ಲಪಶಬ್ದ ಮುಖದಿಂ
ದೃಢಮನಸಿನೀಸಿದ್ಧಪುರುಷರು
ನುಡಿಯುತಿದ್ದರು ಹೆರವರಿಗೆ ಸಂತೋಷವಾಗುವೊಲು ।
ಬಿಡದೆ ಯೋಚನೆಮಾಡುತಿದ್ದರು
ಕಡುಹಿತವು ತಮ್ಮಿಂದೆ ಜನರಿಗೆ
ನಡೆದರೆನಾ ನಾವಮಾರ್ಗದೆ ಸಾಧಿಸುವದೆಂಬ ॥೪೧॥

ಧನದಮೋಹವು ಭೂಮಿಮೋಹವು
ವನಿತೆಯರ ಘನಮೋಹವಿವುಗಳು
ಮನುಜರೂಪದ ಸುರರಿವರಬಳಿ ಸುಳಿಯಲಿಲ್ಲೀಮು ।
ತನುವಿನೊಳಗಿರಲಿಲ್ಲ ಮೋಹವು
ಜನಕಗೀ ಒಡಜನರ ನಸುವು
ವಿನುತರಿವರಲಿ ಶಿವನಪಾದದಿಮೋಹ ನೆಲೆಸಿತ್ತು ॥೪೨॥

ಭಕ್ತಿಯಾದರ ಜನಿಸುತಿದ್ದವು
ಶಕ್ತರಿವರನು ಕೆಡಕಕೂಡಲೆ
ಮುಕ್ತಿಸತಿಸೀಮಂತರತ್ನರು ಯೋಗಿವರರಿವರು ।
ಯುಕ್ತಿಗಳ ನಿಧಿಯಿದ್ದರೀ ನಿಜ
ಭಕ್ತಜನಗಳ ಕಲ್ಪಭೂಜರು
ರುಕ್ತಿಜದಪರಿ ವಿಮಲಮನಸಿನ ಸ್ವಾಮಿಮಣಿಯಿವರು ॥೪೩॥

ವೀರಶೈವಧರ್ಮದಲಿ ಬಹು
ವೀರ ಯತಿಗಳ ಪ್ರೇಮವಿರುವೊಲು
ಬೇರೆ ಧರ್ಮಂಗಳಲಿ ಹಾಗೆ ಮಮತೆಯಿರಲಿರುವರ ।
ಸಾರವಾಗಿಯ ತಮ್ಮ ಧರ್ಮದ
ಕಾರುಣಿಕರಿಗೆ ಪೂರ್ಣವಿದ್ದಿತರ
ಸೇರಿ ಶಿವನೊಳಗೈಕ್ಯವಾಗುವ ಪರಮ ಸುಜ್ಞಾನ ॥೪೪॥

ಮಾಡಲಿಲ್ಲಪವಾದವೆಂದೂ
ನಾಡಿನೊಳು ಹೆಸರಾದಗುರುಗಳು
ಮಾಡಿದರು ಬಹು ಪುಣ್ಯಕರಕೃತಿ ಕಡೆತನಕ ತಾವು ।
ಕೂಡಿಸಲು ಬಲ್ಲವರು ಜೀವವ
ನಾಡೆ ಶಿವನೊಳಗೆಂದುಸಿರಿಹೆವು
ಗಾಢಸುಖವದನುಣುತಿದ್ದರು ನಿರುತವೂ ತಾವು ॥೪೫॥

ಎಲ್ಲವನು ಬಲ್ಲವರು ಮಹಿಮರು
ಗೆಲ್ಲವಡೆದಿಹ ಜಗದಗುರುಗಳು
ಸಲ್ಲಿಸಿದರುರೆ ತಮ್ಮ ದೇಹವ ಜನರಸೇವೆಯಲಿ ।
ಬಲ್ಲವರು ಕಡು ಕುದುರೆಯೇರಲು
ಬಲ್ಲವರು ಮೋಟಾರನಡೆಸಲು
ಬಲ್ಲವರು ಬಹುವೈದ್ಯವಿದ್ಯೆಯ ಲೋಕವಂದಿತರು ॥೪೭॥

ಬಲ್ಲವರು ವೇದಾಂತ ಶಾಸ್ತ್ರವ
ಬಲ್ಲವರು ಬಲು ಯೋಗವಿದ್ಯೆಯ
ಬಲ್ಲವರು ನೆರೆ ಭಕ್ತಿಮಾರ್ಗವ ವರಪುರುಷರಿವರು ।
ಬಲ್ಲವರು ಸಲೆಗಾನ ಕಲೆಯನು
ಬಲ್ಲವರು ತವೆ ರಾಜಕಾರಣ
ಬಲ್ಲವರು ಕಾಯದೆಯ ಸಸ್ಕೃತ ಜಗದಗುರುವಿವರು ॥೪೮॥

ಹೀಗೆ ಸರ್ವವು ಬಲ್ಲ ಯತಿಗಳು
ಸಾಗುತಿದ್ದರು ಸಕಲರೊಂದಿಗೆ
ತ್ಯಾಗಿಗಳು ಮಿಗೆ ಪ್ರೇಮದಿಂದಂ ಬಹುವಿನಯದಿಂದೆ ।
ಸಾಗಿದರು ಕಡೆತನಕ ವಿದದತಿ
ಯೋಗಿವರ್ಯರು ಪುಣ್ಯಪಥದಿಂ
ಹೀಗಿರುವ ವರಪುರುಷರಿಹದೊಳು ವಿರಳವಾಗಿಹರು ॥೪೯॥

ಇರುವನಕ ತಾವ್ ಮುರಡಿಮಠದಾ
ಮೆರೆವಸಿದ್ಧರ ಸ್ಥಾನದಲಿ ಗಡ
ಪರಮ ಯತಿಗಳು ಸಿದ್ಧಿಬಲದಿಂ ಬಹುಜನರದಯದೆ ।
ಪರಿಹರಿಸಿದರು ಕ್ಲೇಶ ವಿಧಾವಿಧ
ತೊರೆದು ಮಠವದು ಮೂರುಸಾವಿರ
ವರಮಠದ ದೊರೆಯಾದನಂತರ ಎಲ್ಲರೀತಿಯಲಿ ॥೫೦॥

ಧನದಬಲದಿಂ ಜನರ ಹಿತವನು
ಕನಿಕರದ ಮೂರ್ತಿಗಳಿವರು ಗೆಯ್ದರು
ಪುಣೆತರೀ ನಿಜಧರ್ಮದೊಳಗೆ ಸವೆಸಿದರು ತನುವ ।
ತನುವಗಂಧದ ಕೊರಡಿನೊಲು ತಾವ್
ಪನುಪಮರು ದಿಟ ಮೂರುಸಾವಿರ
ಘನಮತದ ಗುರುಸಿದ್ಧ ದೇವರು ಜಗದಗುರುವಿವರು ॥೫೦॥

ಇಲ್ಲಿದನು ಗಡ ಪೇಳ್ವದುಚಿತವು
ಮೆಲ್ಲದೆಯದೀ ಸಿದ್ಧಪುರುಷರು
ಬಲ್ಲಿರಾ ಆ ಮರಡಿಮಠದಲಿ ಸಿದ್ಧಿಯಿಂದನಿತೆಮಾಡದೆ ।
ಬಲ್ಲಿದರು ಕಲ್ಯಾಣಮಾಡದೆ
ಸಲ್ಲಿಸಿರುವರು ದೀನಜನಗಳಿ
ಗಲ್ಲಿ ಲಕ್ಷಾಂತರ ಧನವನು ಭಿಕ್ಷೆಯಿಂಬಂದ ॥೫೧॥

ಧರ್ಮಶಬ್ದವ ಸಾರ್ಥಗೊಳಿಸಿದ
ಕರ್ಮದಿಂದಂ ವೀರಶೈವರ
ಧರ್ಮವಿದು ಸಮತಾಸುತತ್ವವ ಪಾಲಿಸಿದರಿಂದೆ ।
ಧರ್ಮವೆನಿಪುದು ಮನುಜರೆಲ್ಲರ
ಕರ್ಮದಿಂದಂ ಸಮಗಾಣಿಪುದಕೆ
ಧರ್ಮವೇ ನೀಚೋಚ್ಚಭೇದವ ಗೈದಮನುಜರೊಳ್ ॥೫೨॥

ಪತಿತಜನರುದ್ಧಾರಕಾಗಿಯೆ
ಕ್ಷಿತಿಯೊಳಗೆ ಧರ್ಮಗಳು ನೆಲೆಸಿವೆ
ಪತಿತರೇಳ್ಗೆಗೆ ಸ್ಥಾನವಿಲ್ಲದ ಧರ್ಮವಲ್ಲದುದ ।
ಪತಿತಜನರುದ್ಧಾರಗೆಯ್ದನು
ಚತುರನಾಗಿಹ ಬಸವದೇವನು
ಪೃಥಿವಿಯೊಳು ನಿಜಧರ್ಮವಿದವೆ ವೀರಶೈವರದು ॥೫೩॥

ತಪ್ಪುತಿಳಿವಳಿಕೆಯನು ಪ್ರಾಥಾಮದಿ
ತೊಪ್ಪನೆ ತಾಂ ಹರಣಗೆಯ್ದನು
ಕಪ್ಪುಗೊರಳ ಭಕ್ತಮಣಿನುತ ಬಸವ ಭಾಸ್ಕರನ ।
ಅಪ್ಪನೀಘನ ಧೈರ್ಯಯುಕ್ತನು
ತಿಪ್ಪೆಮುಟ್ಟಿಸಿಕೊಳ್ಳದಿಹಸ್ಥಿತಿ
ಇಪ್ಪಕಾಲದಿ ಹೊಲೆಯಜನರನು ತನ್ನ ಧರ್ಮದೊಳು ॥೫೪॥

ತೆಗೆದುಕೊಂಡನು ಮಾಡುತಿದ್ದನು
ಮಿಗೆ ಮುದದೆ ಭೋಜನವನವರಲಿ
ಸುಗುಣರತ್ನನು ಘನಸಮರ್ಥನು ಬಸವಗುರುವರನು ।
ಜಗದಲಿಹ ನಿರ್ಬುದ್ಧಿ ಜನಗಳು
ತ್ಯಗಳುತಿದ್ದರು ಬಸವನನು ತಾವ್
ಜಗಕೆ ವೇದ್ಯನು ಸತ್ಯಪಥವನು ಬಿಡದೆಸಾಗಿದನು ॥೫೫॥

ಸಾಗರದ ತಳವನ್ನು ಕಲಕಿಸಿ
ಸಾಗುವಂದದಿ ದೇವಮತ್ಸ್ಯವು
ಯೋಗಿಯೀವಾಸಿಸಲು ಬಾರದ ಪ್ರಥಮ ಧರ್ಮಗೃಹ ।
ತ್ಯಾಗಗೈದುಕೆ ನವಸದನವೀ
ರಾಗದಿಂ ವರ್ಧನವಗೆಯ್ದನು
ನಾಗಭೂಷಣದಯದೆ ಲಿಂಗಾಯತದನಾಮಕವು ॥೫_॥

ಸತ್ಯಧರ್ಮವು ತಾನುದಯಿಸಿತು
ಸತ್ಯವಿದು ಭಾರತದೊಳಿದುವೆ
ಸತ್ಯವಾದುದು ವೀರಶೈವರ ಧರ್ಮವಿದು ಜಗದಿ ।
ಅತ್ಯಧಿಕ ಕಲ್ಯಾಣಗೊಳಿಪುದು
ನಿತ್ಯವಾದೀಧರ್ಮ ನರರಿಗೆ
ಮರ್ತ್ಯಲೋಕದಿ ಸ್ವರ್ಗಸೌಖ್ಯವ ನೀಯುತಿಪುದಿದುವು ॥೫೭॥

ಬರಲು ಜನ್ಮಿಸಿ ಮರ್ತ್ಯಲೋಕಕೆ
ಪರಮ ಬಸವಗೆ ಬೇಡಿಕೊಂಬರು
ನಿರತವೂ ಹಿಂದುಳಿದ ಜನರುದ್ಧರಿಸಲಿಕೆತಮ ।
ಇರದದೊಲು ತಾಂ ಹಿಂದುಧರ್ಮದಿ
ಕಿರಿ ಹಿರಿಯ ಜಾತಿಗಳಮಾಡಲು
ಗುರುಶಿವಯೋಗಿಮಣಿ ಬಸವರಾಜನೆ ಯೋಗ್ಯನಾದವನು ॥೫೮॥

ಪರಮ ಸುದಿನವು ಬರಲು ಬೇಗನೆ
ಪರಣವಾಗಲಿ ಜಾತಿ ಸಕಲವು
ಮೆರೆಯಲೊಂದೇ ಶ್ರೇಷ್ಠಧರ್ಮವು ವೀರಶೈವರದು ।
ಮೆರೆವ ಭಾರತ ದೇಶದಲ್ಲಿ ತಾಂ
ಹರನು ಕರುಣದೆ ಹಾಗೆ ಮಾಡಲಿ
ಉತ್ಕರ್ಷಹೊಂದಲಿ ಭರತ ಭೂಜನರು ॥೫೯॥

ಇಂದುಶೇಖರನಾದ ಸಾಂಬಗೆ
ನಂದಿಯನ್ನೇರಿರುವ ದೇವಗೆ
ಮಂದರಾಚರದೊಳಗೆ ವಾಸವಗೈದ ಶಂಕರಗೆ ।
ಕಂದುಗೊರಳಗೆ ಕಾಲಕಾಲಗೆ
ಸ್ಕಂದಷಣ್ ಗಜವದನ ಪಿತನಿಗೆ
ತಂದೆಯೀಮೂಲೋಕರಾಗಿಹ ಶಿವಗೆ ಜಯ ಜಯತು ॥೬೦॥

(ಹತ್ತನೆಯ ಸಂಧಿ ಮುಗಿದುದು)

§ ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಪ್ರಸನ್ನ §



# ಹನ್ನೊಂದನೆಯ ಸಂಧಿ

ಸೂಚನೆ:— ಒಡ್ಡರಬಲೆಯು ಭೂತವಾಗಿರೆ
ಮಡ್ಡಳನದು ಬಡಿದುಕೊಂಡಿತು
ದೊಡ್ಡ ಕಂಟಕ ಕಳೆದುಬಿಟ್ಟರು ಜಗದಗುರುವರರು ।

ಪರನಸಂಗಡ ಮದುವೆಯಾಗುವ
ಪರಮ ಕಾಂಕ್ಷೆಯು ಮನದಿ ಭವಿಸಲು
ಗಿರಿ ಭವಮು ತಪವೆಸಗುತಿದ್ದಳು ಶಿವನ ಮೆಚ್ಚಿಸಲು ।
ಧರಿಸಿ ವಟುವೇಷವನು ಬಂದಾ
ಪರನು ಗಿರಿಜೆಯ ಭಕ್ತಿಯೀಕ್ಷಿಸಿ
ಧರುಷದಿಂ ಕರವಿಡಿದ ಗಿರಿಜೆಯ ಮೃಡನು ರಕ್ಷಿಸುತಲಿ ॥೧॥

ತಮ್ಮಸಾಂತರ ಮರಡಿಮಠಕೀ
ಹಮ್ಮಿರದ ಸ್ವಾಮಿಗಳು ಗೆದ್ದರು
ತಮ್ಮ ಚಿಕ್ಕಪ್ಪನ ಸುಪುತ್ರನ ಗುರುಗಳನು ತಾವು ।
ನಿಮ್ಮಮುಂದದು ಹಿಂದೆ ಪೇಳಿಹು
ದೊಮ್ಮನದ ಕೇಳ್ವವರೆ ಸುಜನರು
ನಮ್ಮ ಯತಿಗಳ ಬಂಧುಗಳು ಗುರುಸಿದ್ಧಗುರುವಿವರು ॥೨॥

ಮೂಡಿದರು ಮತ್ತೊಬ್ಬಸ್ವಾಮಿಯು
ಕಾಡಲಿಕೆ ಕೊಣ್ಣೂರ ಕೆಲವರು
ಮಾಡಿದರು ಮತ್ತೊಬ್ಬ ಚಿಕ್ಕಪ ಶ್ರೀಗಳಿರಲವರ ।
ನೋಡಿದವರಾ ಪುತ್ರರಾಗಿಹ
ಬೇಡು ವಯದಾಗಿರುವ ಶ್ರೀ ಪಾ-
ವಾಡ ಸ್ವಾಮಿಯ ಕಳಿಸಿಕೊಟ್ಟರು ಮರಡಿಮಠದಲ್ಲಿ ॥೩॥

ಇರದೊಲಾ ಪಾವಾಡಸ್ವಾಮಿಯು
ಮರಡಿಮಠದಲಿ ಮಾಡಿದರು ತಾವ್
ದೊರೆಗಳಾಗಿಹ ಮೊದಲು ಶ್ರೀ ಗುರುಸಿದ್ಧ ಯತಿಯಿವರು ।
ಭರದೆ ಸಾಗಿತು ಜಗಳದ್ವಯರಲಿ
ಪರಿಹರಿಸಲಿಲ್ಲಾರು ಕಲಹವ
ಗುರುವರರು ಹುಬ್ಬಳ್ಳಿಯತಿಗಳು ತಾವುಬರುವಂತೆ ॥೪॥

ಬಂದುಬಿಟ್ಟರು ಮರಡಿಮಠದಲಿ
ಹಿಂದಿನೊಲಮಾವಾಸ್ಯ ದಿವದಲಿ
ತಂದೆಗಳು ಮಲಗಿರಲು ನಶೆಯಲ್ಲೊಂದುಕೋಣೆಯಲಿ ।
ಬಂದರಾರೋ ನಟ್ಟಿರುಳಿನಲಿ
ಬಂದು ಶ್ರೀಗಳು ಮಲಗಿದಂತಿಹ
ಚಂದವಿರುವಾ ಕೋಣೆ ಮಾಳಿಗೆ ಹಂಚುಗಳ ಕೆಲವು ॥೫॥

ತೆಗೆದು ತಾವು ಬಂದೂಕದಿಂದಂ
ಜಗದಗುರುಗಳ ಕೊಲ್ಲಯತ್ನಿಸುವ
ಕುಗುಣಿಗಳು ಮಾಡಿದರು ಹಾಗದು ಸಾಧ್ಯವಾಗದಕೆ ।
ಮಿಗೆ ನಿರಾಶಯಪಟ್ಟು ಮೇಲಿಂ
ಜಿಗಿದು ಬಂದರು ಕೆಳಗಿನಂತರ
ಸುಗುಣಿಯಾಗಿ ಮರಡಿಮಠದಾ ಕಾರಬಾರಿಗಳು ॥೬॥

ಮಲಗಿರುವ ಗುರುಸಿದ್ಧರೆಂಬರು
ಚೆಲುವುಕೋಣೆಗೆ ಬಂದುಬಿಟ್ಟರು
ಮಲಗಿರಲು ಬಲು ಗಾಢನಿದ್ರೆಯು ಹತ್ತಿತಾಪವರ ।
ಬಲುಹುರೋಷದ ಗುಂಡು ಹೊಡೆದರು
ಸಲೆಯದುವು ಬೆನ್ನೊಳಗೆ ಸೇರಿತು
ಗೆಲೆದೆವೆಂದುರೆ ತಿಳಿದು ತಾವೋಡಿದರು ದುರ್ಜನರು ॥೭॥

ಕೇಳಿಯಾ ಬಂದೂಕ ಸಪ್ಪಳ
ತಾಳಿ ಭವಿಯುವನು ಸಕಲರೆದ್ದರು
ತಾಳದೇ ನೋವನ್ನು ಗುರುಸಿದ್ಧಯ್ಯ ಚೀರುತ್ತ ।
ಹೇಳಿದರು ಗುಂಡನ್ನು ಹೊಡೆದರು
ಖೂಳರಾರೋ ನನ್ನ ಬೆನ್ನಿಗೆ
ತಾಳೆಯೀನೋವನ್ನು ಬನ್ನಿರಿ ಸಲಹಿರೆನ್ನನ್ನು ॥೮॥

ಅರುಹಿದರು ಹುಬ್ಬಳ್ಳಿಯತಿಗೀ
ಸರುವವೃತ್ತವ ಜಗಕೆ ಕೂಡಲೆ
ಗುರುವರಗು ತಾವೆಂದರಾಗಳು ದೇವರಿಚ್ಛೆಯೊಲು ।
ಜರಗುವವು ಕಾರ್ಯಗಳೆಲ್ಲವು
ತ್ವರಿತದಿ ಕಳಿಸಿರಿ ಡಾಕ್ಟರರಕಡೆ
ಪರನಕೃಪೆಯಿಂ ಬದುಕುವರು ಗುರಿಕಾರರ್ರೈ ತಾವು ॥೯॥

ಕಳಿಸಿದರು ಗುರಿ ಕಾರರವರನು ।
ಘಳಿಲನೆ ಮೋಟಾರದಲಿ ತಾವ್
ಬಳಿಯೊಳಿರುವಾ ಗಿರಣಿ ಔಷದದಾಲಯಕೆ ಬಳಿಕ ।
ಬಲುವು ವಿಶ್ರುತ ಮರಡಿಮಠದಾ
ಚೆಲವು ಮನಸಿನ ಸ್ವಾಮಿಗಳು ಜಯ
ಗಳಿಸಿರುವ ಯಶವನ್ನು ಶ್ರೀ ಗುರುಸಿದ್ಧ ಯತಿಯವರು ॥೧೦॥

ಆಗಲಿದ್ದರು ಮರಡಿಮಠದಲಿ
ನಾಗನೂರಿನ ಸ್ವಾಮಿಗಳು
ಮೇಲಾಗಲಿದ್ದರು ನವಿಲುಗುಂದದ ಸ್ವಾಮಿಗಳು ತಾವು ।
ರಾಗದಿಂ ಹುಬ್ಬಳ್ಳಿಯಿಂದಂ
ಶ್ರೀಗಳೊಂದಿಗೆ ಬಂದು ಬಿಟ್ಟರೆ
ತ್ಯಾಗಿಗಳು ಹಲಕರ್ಣಿ ಪಟ್ಟದ ಸ್ವಾಮಿಗಳು ಮತ್ತೆ ॥೧೧॥

ಬಂದಿರಲು ಚಿಕ್ಕೋಡಿಯೂರಿನಾ
ನಂದದಿಂ ಚರಮೂರ್ತಿಯೀಗಿನ
ಬಂದು ಮಲಗಿರೆ ಮತ್ತೆ ಕೆಲವರು ಸ್ವಾಮಿಗಳು ತಾವು ।
ಮುಂದೆ ಗುಣಹೊಂದಿದರು ಮಠ
ಹೊಂದಿರುವ ಯಶ ಕಾರಭಾರಿಯು
ಬಂದುಬಿಟ್ಟರು ಮರಡಿಮಠದಲಿ ಕೆಲಸಮಾಡಲಿಕೆ ॥೧೨॥

ಗತಿಸಿದವು ಕೆಲದಿನಗಳಮೇಲ್
ಪ್ರಥಿತ ಹುಬ್ಬಳಿ ಮಠದ ಗುರುಗಳು
ಸತತ ಯತ್ನಿಸಿ ಬಗೆ ಹರಿಸಿದರು ನ್ಯಾಯವನ್ನದನು ।
ಚತುರ ಪವಾಡೆಪ್ಪನವರಿಗೆ
ಯತಿಗಳೀಕೆಲ ಹೊಲ ಕೊಡಿಸಿದರು
ಯತಿಗೆ ಶ್ರೀ ಗುರುಸಿದ್ಧರಿವರಿಗೆ ಮಠದ ಸ್ವಾಮಿತ್ವ ॥೧೩॥

ಮೊದಲೆ ತಾವದು ಕೊಟ್ಟುಬಿಟ್ಟರೆ
ಚದುರರದನೇ ಸ್ಥಿರಗೊಳಿಸಿದರು
ಸದಯರೀಪರಿನ್ಯಾಯ ಗೈದರು ಬಂಧುಗಳ ತಮ್ಮ ।
ನಿಧಿಯು ಕರುಣೆಯದಾದ ಶ್ರೀಗಳು
ಬುಧರ ಪರಹಿತ ಮಾಳ್ಪ ಕಾರ್ಯದಿ
ಮಧುರ ಭಾಷಿಗಳಿವರು ಭೂತಲಸಾಂಬರಾಗಿಹರು ॥೧೪॥

ವೈರಿ ಭವಿಪರು ಪರಮನರರಿಗೆ
ಘೋರತರವಾದವರು ಜಗದಲಿ
ವೈರಿ ವಿರಳರು ದುಷ್ಟಜನರಿಗೆ ಹೀಗಿಹುದು ಸ್ಥಿತಿಯು ।
ಮಾರ ಮರ್ದನ ಲೋಕದಲ್ಲಿ
ಮೀರಿದೀ ಅನ್ಯಾಯ ಸಾಗಿದೆ
ಭೂರಿ ದುಃಖವ ಭೋಗಿಪರುವರ ಪುರುಷರದರಿಂದ ॥೧೫॥

ಮೆರೆಯುತಿಹ ಚಿಕ್ಕೋಡಿಯೂರ
ಲ್ಲಿರುವ ಚರಮೂರ್ತಿಯವರ ಮಠದಾ
ಗುರುಗಳಾಗಿಹ ಸ್ವಾಮಿಸಂಗನ ಬಸವ ಮೂರ್ತಿಗಳು ।
ಮರಿಯ ನೇಮಿಸಿಕೊಂಡು ಬಿಟ್ಟರು
ಹರುಷದಿಂದಂ ಮಠಕೆ ತಮ್ಮಿಯ
ಮೆರೆವ ಹುಬ್ಬಳ್ಳಿ ಮಠದ ಶ್ರೀಗಳ ಹೇಳಿಕೆಯ ತೆರದಿ ॥೧೬॥

ಯಾದವಾಡದ ಗ್ರಾಮದವರಿಹ
ಮೋದರೂಪರು ನೀಲಕಂದಪ
ರೀದಯಾಮಯರನ್ನ ನಂತರ ಕಳೆಯೆ ಕೆಲವರ್ಷ ।
ಹೋದರೈ ತಾವು ತೊರೆದು ಜಗವನು
ಮೇದಿನಿಯೊಳೀ ನಡೆದ ಕ್ರಮದೊಳು
ಹೋದ ಮೇಲಾ ಸ್ವಾಮಿಯವರಾ ಕಾರಭಾರಿಗಳು ॥೧೭॥

ಮತ್ತೆ ತಾವ್ ಮತ್ತೊಬ್ಬ ಪುರಿಯನು
ಸತ್ತ ಸ್ವಾಮಿಗಳಿಸಗಿ ಕೊಂಡಿಹ
ಚಿತ್ತವಿಸಿರೈಗೈದರುನ್ನತ ಮೃತ್ಯು ಪತ್ರವನು ।
ಇತ್ತು ಹಣವನು ಮೂರುಮಂದಿಗೆ
ಚಿತ್ತವವರದು ಸೆಳೆದು ಕೊಂಡರು
ಬಿತ್ತರದೆ ತಾವ್ ಕೂಡಿಬಿಟ್ಟರು ಮೂವರದರೊಳಗೆ ॥೧೮॥

ಇದ್ದರಿಬ್ಬರು ಬ್ರಾಹ್ಮಣರು ಮೇ
ಣಿದ್ದನೊಬ್ಬನು ಲಿಂಗವಂತನು
ಬುದ್ಧಿಗೆಟ್ಟವನವನೆ ಮರಿಯಾದವನು ಪತ್ರದಲಿ ।
ಗೆದ್ದೆವೀ ಮಠವನ್ನು ನಾವುರೆ
ಬಿದ್ದರೀ ಭ್ರಮೆಯೊಳಗೆ ನಾಲ್ವರು
ಸದ್ದಿರದೆ ಸಂಪದವ ಮಠದಾವ ತಿಂದು ಬಿಟ್ಟರು ॥೧೯॥

ಬಂದರಾ ತರುವಾಯ ಮೊದಲಲಿ
ಹೊಂದಿರುವ ಸ್ವಾಮಿತ್ವ ಮಠದಾ
ನಂದದಿಂದಂ ನೀಲಕಂದಪ ಸ್ವಾಮಿಗಳು ತಾವು ।
ಅಂದವಾದಾ ಮಠದೊಳವರನು
ಮುಂದೆ ಬಾರದ ಹಾಗೆ ಗೈದರು
ನಿಂದೆಗತಿ ಪಾತ್ರರಿಹ ನಾಲ್ವರು ಹಣವ ಹೊಡೆದವರು ॥೨೦॥

ತಿಳಿಯಿತೀ ವೃತ್ತಾಂತವೆಲ್ಲವು
ಘಳಿಲನೆ ಶ್ರೀ ಮೂರುಸಾವಿರ
ಚೆಲುವು ಮಠದಾ ಸ್ವಾಮಿಯವರಿಗೆ ಜಗದಗುರುಗಳಿಗೆ ।
ತಿಳಿಸಿದರು ಚರಮೂರ್ತಿಗಳಿಗುರೆ
ಚಲಿಸದೆ ಮಠದಿಂದಲಿರುವದು
ಕಲಿಸುವೆನು ಬುದ್ಧಿಯನು ಸತ್ವಕನಾಲ್ವರಿಗೆ ನಾನು ॥೨೧॥

ಎಂದರಹಿ ಶ್ರೀ ಪೂಜ್ಯಪಾದರು
ಹೊಂದಿ ರೋಷವಮಾಡಿ ಬಿಟ್ಟರು
ತಂದೆಗಳು ಫಿರ್ಯಾದಿಯನು ಬೆಳಗಾವಿ ಕೋರ್ಟಿನಲಿ ।
ಮುಂದೆ ಸಾಗಿತು ಬಹಳ ದಿನವೀ
ಗಂಧವಿಲ್ಲದ ವ್ಯಾಜ್ಯತಾನದು
ಹೊಂದಿದರು ತಾವದರೊಳಗೆ ಜಯ ಜಗದಗುರುವಿವರು ॥೨೨॥

ನಡೆಯಿತಾ ನ್ಯಾಯವುರೆ ಕಡೆಯಲಿ
ಬಿಡದೆ ಇಪ್ಪತ್ತೆರ ದಿವಸವು
ಗಡ ಶಶನ ಕೋರ್ಟಿನಲಿ ಕಾಗದ ಮಿಥ್ಯವಿದ್ದುದು ।
ಕಡೆಗೆ ನಿರ್ಣಯವಾಗಿ ಬಿಟ್ಟಿತು
ಪಡೆದರೈ ಶಿಕ್ಷೆಯನು ನಾಲ್ವರು
ದುಡಿವ ಕಾರವಾಸವಾಗಿರುವೈದು ವರ್ಷವದು ॥೨೩॥

ಪಡೆದು ಕೊಂಡರು ಮಠದ ದೊರೆತನ
ಕಡೆಗೆ ಯತಿಗಳು ನೀಲಕಂಠರು
ಬಿಡದೆ ತಾವಿಪ್ಪತ್ತು ವರ್ಷವು ಜಗದಗುರುವರರ ।
ಕಡು ಮುದದೆ ಸಾನಿಧ್ಯವಿದ್ದರು
ಪಡೆದುಕೊಂಡವರವರ ಪ್ರೀತಿಯ
ಪಡೆದರಾಗಳು ತಾವು ಸಂಸ್ಕೃತ ಭಾಷೆಯದು ಜ್ಞಾನ ॥೨೪॥

ಇರುವರೀಗಳು ಸುಖದೆ ಮಠದಲಿ
ಗುರುಗಳೀ ಚರಮೂರ್ತಿಗಳು ತಾವ್
ಕರುಣೆಗಳು ಚಿಕ್ಕೋಡಿಯೂರಲಿ ತಮ್ಮ ಮಠದಲ್ಲಿ ।
ಇರುವದಾಷನ ಚನ್ನ
ನೆರೆ ಬರುವದುತ್ಪನ್ನ ಮಠದುದಾ
ಹಿರಿಯದದು ಚಿಕ್ಕೋಡಿಯೂರಲಿ ಕಟ್ಟಡವು ತಾನು ॥೨೫॥

ಮತದ ವ್ಯಾಜ್ಯದಿ ಕೋರ್ಟವೆಚ್ಚವು
ಪಟುಗಳೀ ಶ್ರೀ ಜಗದಗುರುಗಳು
ದಿಟದರೂಪರು ಗೈದರೈ ಮುಪತ್ತುಸಾವಿರವು
ಅಟವಿಯಾ ಮಲ್ಲಿಗೆಯು ಪುಷ್ಪವು
ದಿಟವಿದುವು ಸಂತೋಷಗೊಳಿಪೊಲು
ನಿಟಿಲನಯನನ ಭಕ್ತರಿವರದು ತೋಽಪ್ಪದು ಚರಿತೆ ॥೨೬॥

ಗಗನ ಕೇಶನು ಪಾರ್ವತೀಶನು
ಜಗವಿದನು ನಿರ್ಮಾಣಗೈದನು
ಸುಗುಣಿಗಳನುರೆ ಪ್ರೀತಿ ಪಾಳ್ವನು ಶಿಕ್ಷಿಪನು ಬಿಡದೆ ।
ಕುಗುಣಿಗಳ ತಾಂ ವಿಶ್ವದೊಡೆಯನು
ಮಿಗೆ ಮಮತೆಯಿಂ ಸಲುಹುತಿರುವನು
ಹೊಗಳಿಕೆಗೆ ಸತ್ಪಾತ್ರನಾಗಿಹ ಶಿವನು ವಿಶ್ವವನು ॥೨೭॥

ಅಂಧಕನೆ ಮೊದಲಾದ ದೈತ್ಯರ
ಕೊಂದು ಸುಲೋಕವನು ಸಲಹಿದ
ನಂದಿ ವಾಹನನು ತ್ರಿಪುರವನು ಸಂಹಾರಗೆಯುವನು ।
ಇಂದು ಶೇಖರನಾದ ಸಾಂಬನು
ಮಂದರಾಚಲದಲ್ಲಿ ನೆಲಸಿದ
ಕಂದು ಗೊರಳನು ಮಾರಮರ್ದನಾದ ಶಂಕರನು ॥೨೮॥

ಧರಿಸಿದನು ಜಾಹ್ನವಿಯ ಜಡೆಯಲಿ
ಕರಿಮುಖನ ಷಣ್ಮುಖನ ಜನಕನು
ಗರಳವನು ಕಡಲಲಿ ಜನಿಸಿದ ಕುಡಿದು ಬಿಟ್ಟವನು ।
ಉರಗಗಳ ಮೇಣ್ ರುಂಡಮಾಲೆಯ
ಧರಿಸಿರುವ ಭೂಷಣದ ತೆರದೊಳು
ಹಿರಿಯ ದೇವನು ಲೋಕಕೆಲ್ಲಕ್ಕೋರ್ವನೇ ಇವನು ॥೨೯॥

ಕರಿಯ ಚರ್ಮಾಂಬರವನಾಂತಿಹ
ಸುರಪನಿಂದಂ ಪೂಜೆಗೊಂಬುವ
ಪುರೆಯುಘನು ತಾಂ ಕೆಂಪು ಜಡೆಯಿಂ ಪಂಚಮುಖದವನು ।
ಇರುವದವನಿಗೆ ಹಣೆಯೊಳಕ್ಷವು
ಕರಗಳಿರುವವು ಪತ್ತು ಮೃಡನಿಗೆ
ಸರುವ ಜಗದಲಿ ಚೆಲುವನಿವನೇ ಅಂತರಾಂತಕನು ॥೨೦॥

ಸ್ಮರಣೆ ಗೆಯ್ದರೆ ನಾಮ ವಾತನ
ನೆರೆ ಭಕುತಿಯಿಂ ಸ್ವಚ್ಛಮನದಿಂ
ದುರಿತ ವೆಲ್ಲವು ನಾಶವಡೆವುದು ಪುಣ್ಯವರ್ಧಿಪುದು ।
ಸರುವ ಸುಖಗಳು ಲಭಿಸಿ ಬಿಡುವವು
ದೊರೆಯುವದು ಸನ್ಮಾನ ಜಗದಲಿ
ಪೊರೆಯುವರು ಸದ್ಭಕ್ತರಾತನ ನಿರುತ ತೋಷದಲಿ ॥೨೮॥

ಇರುವ ಗೋಕಾಕದ ಸಮೀಪವು
ಪೊರೆಯುತಿಹ ಘಟಪ್ರಭಾವಾಹಿನಿ
ವರನದಿಯ ತಡಸಲದ ಬಳಿಯಿಹ ನೂಲಗಿರಣಿಯಲಿ ।
ನೆರೆ ಕೆಲಸವನ್ನೆಸಗುವಂತಹ
ಹಿರಿಯ ಮ್ಯಾನೇಜರನ ಪತ್ನಿಗೆ
ಹಿರಿಯ ವ್ಯಸನವು ಪತ್ತಿಬಿಟ್ಟರೆ ಬೇಟೆಯಾಡುವದು ॥೨೨॥

ಹೋಗುತಿದ್ದಳು ಪ್ರತಿ ದಿವಸದಲಿ
ಮೇಗೆ ಕುಳಿತಾಕೆಯ ತುರಂಗದ
ಹೋಗುತಿದ್ದಳು ಕೆಲವು ಸೇವಕರನ್ನು ಕರಕೊಂಡು ।
ಆಗಿರೆಯು ಕೋಪಿಯನ ನಾತನು
ಸಾಗುತಿಹ ಸತಿ ಸತ್ಯಮಾರ್ಗದಿ
ಗಾಗದಿಂದಂ ಸಕಲರೊಂದಿಗೆ ನಡೆಯುವವನವನು ॥೨೩॥

ಗಮಿಸುತಿದ್ದನು ಬಯಕೆಯಾದರೆ
ಸಮತಿಯಾಗಿ ಪತ್ನಿಯೊಂದಿಗೆ
ಸಮಯ ದೊರೆದರೆ ಬೇಟೆಯಾಡಲು ಪಾರದೊಳಗೊಮ್ಮೆ ।
ಅಮರ ರಂದದಿ ಬಿಳಿಯ ದೇಹದ
ಕಮಲದೊಲು ಚೆಲುವದನಯುಕ್ತನು
ಸಪುರ ಶೂರನು ಶಕ್ತಿಯುತ ಮ್ಯಾನೇಜನುತಾನು ॥೩೪॥

ಮೊಲ ಚಿಗರೆ ಮೇಣ್ ಕಾಡಹಂದಿಯ
ಕೊಲೆ ಯಸಗುತಿರೆ ಗುಂಡಿನಿಂದಂ
ಕೆಲವು ಸಮಯದಿ ಚಿರ್ಚೆಗಳ ಸಹ ವಧಿಸುತಿರಲಾಕೆ ।
ಚೆಲುವೆಯಿದ್ದಳು ಸುದೃಢಕಾಯಳು
ಬಲು ನಿಪುಣೆ ತಾಂ ಬೇಟೆಯಾಡಲು
ಸತಿ ಮೆರೆಯುತಿರ ದೇವಿಯಂದೆ ಧವಲತನುಯುತಳು ॥೩೫॥

ಇಲ್ಲಿಯೀ ಹೊಸ ಘಟನೆ ಪೇಳ್ವೆವು
ಬಲ್ಲವರೇ ಬಲು ಶ್ರೋತೃಜನರೇ
ಅಲ್ಲಿಯಾ ಕೊಣ್ಣೂರ ಕ್ಷೇತ್ರದೊಳೊಡ್ಡ ರಂಗನೆಯ ।
ಇಲ್ಲವಾಯಿತು ಪ್ರಾಣತರುಣಿಯ
ವಲ್ಲಿಗುಡ್ಡ ದೊಳಾಕೆ ಹೆಣವನು
ಸಲ್ಲಿಸಿದರೈ ಭೂಮಿದೇವಿಗೆ ಹುಗಿದು ತಗ್ಗಿನಲಿ ॥೩೬॥

ಹುಗಿದ ಹೆಣವನ್ನೆಂಟು ದಿವಸದಿ
ಮಿಗೆ ಹುರುಪಿನಿಂ ತಾನು ಕುದುರೆಯ
ಚಿಗರೆ ಹೊಡೆಲಿ ಕೋಡಿಸುತ್ತಿರೆ ತಾನು ಮಡ್ಡಮಳು ।
ಹುಗಿದ ಹೆಣವನು ಗೋರಿಮೇಲಾ
ಜಗಿದು ಹೋಯಿತು ಕುದುರೆಯಾಕೆಯು
ಜಗವ ತೊರೆದಾ ಒಡ್ಡರಬಲೆಯು ಭೂತವಾಗಿರಲು ॥೩೭॥

ಬಡಿದು ಕೊಂಡಿತು ಮುದ್ದಮಳನಾ
ಗಡನೆ ಒಡ್ಡರ ಜಾತಿಭೂತವು
ಒಡ ಬಡಿಸಪತ್ತಿದಳು ಮುದ್ದಮ ಮನೆಗೆ ಹೋದೊಡನೆ ।
ತಡೆ ಹಿಡಿದು ಮಾತಾಡುತಿದ್ದಳು
ಕಡುವೊದರಿ ತಾ ನೊಡ್ಡರಾಡುವ
ನುಡಿಗಳನು ಗಡ ತೊರೆದು ತಮ್ಮಯ ಭಾಷಯಿಂಗಾಜೆಯ ॥೩೮॥

ಏನು ಸೋಜಿಗ ವಿದುವು ಪತ್ನಿಗೆ
ಚೇನೆಯಾಗಿಪುದೇಥದಿದು
ಜಾಣೆ ಮಾತುಗಳೆಂಥವಿವು ತಾಂ ತಿಳಿಯಪೆನಗೇನು ।
ತಾನು ಮನದೊಳು ಯೋಚಿಸುತ್ತಿರೆ
ಮಾನಿ ಮ್ಯಾನೇಜರನು ಚತುರನು
ಕಾಣದಾಯಿತು ಮಾರ್ಗ ಮುಂದಿನ ಚಿಂತೆಯಿಂದವಗೆ ॥೩೯॥

ಗಿರಣಿಯಲಿ ಕೆಲಸವನು ಮಾಡುವ
ಸರುವ ಜನರಿಗೆ ವಿದಿತವಾಯಿತು
ತೊರೆದು ಕೆಲಸವ ನೋಡ ಬಂದರು ಕೆಲರು ಮುದ್ದಮನ ।
ಅರಿತು ಮುದ್ದಮನಿಗಾದ ಪೀಡೆಯು
ನರುಹಿದರು ಸಾಹೇಬನಿಗೆ ತಾವ್
ದೊರೆಗಳೇ ಮುದ್ದಮಗೆ ಭೂತವು ಹಿಡಿದು ಕೊಂಡಿಹುದು ॥೪೦॥

ಅಡುತಿಹ ಮುದ್ದಮಳ ಮಾತಿವು
ನೋಡಿರಾಗಿಪ ವೊಡ್ಡ ಜನಗಳ
ಕಾಡುತಿಹ ಭೂತವಿರೆ ನಿಜವೊಡ್ಡರದು ತಿಳಿಯಬುವದು ।
ಮಾಡ ಬೇಡಿರಿ ಚಿಂತೆ ದೊರೆಗಳೆ
ಕಾಡುವೀ ಭೂತವನು ಕ್ಷಣದ
ಲ್ಲೋಡಿಸುವರ್ಕೈ ನಮ್ಮ ಸ್ವಾಮಿಯು ಪೂಜ್ಯಕೆಂಪಯರು ॥೪೧॥

ಆಗಿಹರು ಹುಬ್ಬಳ್ಳಿ ಮಠಕಾ
ಯೋಗಿಗಳು ತಾ ಜಗದಗುರುಗಳು
ತ್ಯಾಗವೀರರು ಮಠಕಮಾವಾಸ್ಯೆದಿನ ಜನರ ।
ರೋಗಗಳ ಭೂತಗಳ ಪೀಡೆಯ
ರಾಗದಿಂ ಕಳೆಯಲ್ಕೆ ಬರುವರು
ಸಾಗರರು ಕಾರುಣ್ಯದಾಗಿಹ ಸ್ವಾಮಿ ನಮ್ಮವರು ॥೪೨॥

ಬಂದಿಹರು ಗುರುವರರು ಮಠದಲಿ
ನಂದದೀ ವೃತ್ತವನು ಕೇಳ್ದರೆ
ಹೊಂದಿ ಮುದಸತಿ ಸಹಿತ ಬಂದನು ತಾನು ಸಾಹೇಬನು ।
ಮಂದಿಯಿದನೆಲ್ಲವನು ಮೊದಲಿಗೆ
ತಂದೆಯಂತಿಹ ಸ್ವಾಮಿಗೊರೆದಿರೆ
ಮುಂದೆ ನಿಂತಿಹ ಮುಗಿದು ಕೈಗಳ ಸಾಹೇಬಗೆ ತಾವು ॥೪೩॥

ಹೇಳಿದರು ಯತಿವರರು ದಯದಿಂ
ತಾಳ ಬೇಡಿರಿ ಚಿಂತೆನಸುವೂ
ಹೇಳಿಯೀ ಪರಿಯಿತ್ತು ಬೂದಿಯ ಸಾಹೇಬನಕರದಿ ।
ಹೇಳಿದರು ಹಚ್ಚಲಿಕೆ ಬೂದಿಯ (ಭಸ್ಮವ)
ಬಾಲೆಗೀ ನೀವ್ ಹಣೆಗೆ ದೇಹಕೆ
ಹೇಳಿದೊಲು ಹಚ್ಚಿದನು ಬೂದಿಯ ( ಭಸ್ಮ )ಸತಿಗೆ ಸಾಹೇಬನು ॥೪೪॥

ಬಡಿಯ ಬೇಡಿರಿ ಸ್ವಾಮಿಯವರೇ
ಬಿಡುವೆ ನೀಕೆಯ ದೇವರಾಣೆಯು
ನುಡಿದು ಪರಿಯೀ ಓಡಿಹೋದಳು ತಾನು ಮಡ್ಡಮಳು ।
ಒಡನೆಯೀ ತಾನೆಚ್ಚರಾದಳು
ಮಡದಿ ಮ್ಯಾನೇಜರನ ಧರೆಯಲಿ
ಗಿಡದ ಬಳಿಯಲಿ ಬಿದ್ದನಂತರ ಸಾಹೇಬನು ತಾನು । ॥೪೫॥

ಕರವಿಡಿದು ಕರೆತಂದನಾಕೆಯು
ಪರುಷದಿಂ ನತಿಗೈದು ಸ್ವಾಮಿಗೆ
ತೆರಳಿದರು ಮೋಟಾರದಲಿ ವಿಶ್ರಮಿಸಿಯುಭಯರು ।
ನೆರೆಯರಿತು ಶ್ರೀ ಸ್ವಾಮಿಯೀ ಮಹಿಮೆಯ
ಬರತೊಡಗಿದನು ದರ್ಶನಕೆ ತಾಂ
ಪರುಷದಿಂದಂ ಭಕ್ತಿಯಿಂದಂ ಸಾಹೇಬನು ಬಳಿಕ ॥೪೭॥

ಬಂದ ಸರತಿಗೆ ತಂದುಕೊಡುವನು
ನಂದದಿಂದಂ ಹಣ್ಣು ಹಂಪಲ
ದಿಂದ ತುಂಬಿದ ಬುಟ್ಟಿಯನು ತಾಂ ಸ್ವಾಮಿಗಳಿಗಾಗಿ ।
ಇಂದಿಗೂ ಸ್ಮಾರ್ತದುವರ್ಸೆ ತಾವ್
ಬಂದ ಹೊಸ ಸಾಹೇಬರು ಗಿರಣಿಯ
ಹೊಂದಿ ಸಂತೋಷವನು ಸ್ವಾಮಿಯ ದರ್ಶನಕೆ ಮುದದೆ ॥೪೮॥

ಆಗಿ ಇಬ್ಬಣ ಊರ ಜನರಲಿ
ಬೇಗ ಜಗಳವು ಹಬ್ಬಿದುದರಿಂ
ಭೋಗಿಸುತ್ತಿರೆ ದುಃಖ ಪುಲಕುಂದದೂರವರು ।
ಆಗ ಸಾಯುತ್ತಿರಲು ದನಗಳು
ರೋಗ ವೆಂಥದೋ ಆಗಿಯೂರಲಿ
ಯೋಗಿ ವರ್ಯರ ಕರೆಯ ಸಾರ್ದರು ಹಿರಿಯ ಕಿಲಜನರು ॥೪೯॥

ಬಂದಿರಲು ಶ್ರೀಯವರು ಮರಡಿಯ
ಚಂದವಿಹ ಸನ್ಮಾದಕೆ ಮುದದಿಂ
ಹಿಂದಿನೊಲಮಾವಾಸ್ಯೆದಿನ ಹುಬ್ಬಳ್ಳಿ ಪಟ್ಟಣದೆ ।
ಬಂದು ಪುಲಕುಂದದ ಸುಭಕ್ತರು
ಚಂದವಾಗಿಯು ಸ್ವಾಮಿಪಾದಕೆ
ವಂದನೆಯ ಸಾಷ್ಟಾಂಗದಿಂದಂ ನೆಗಳಿದರು ಮುದದೆ ॥೫೦॥

ಕರೆಯಲಿಕೆ ನಿಮ್ಮನು ಬಂದೆವು
ಗುರುವರರೆ ಹುಲುಕುಂದದಿಂದಂ
ಭರದಿ ನಡೆದಿದೆ ಜಗಳವೂರಲಿ ಬಣಗಳೆರಡಾಗಿ ।
ತೊರೆದು ಜೀವದ ಹಂಗುಸರ್ವರು
ನಿರುತವೂ ಹೊಡೆದಾಡುತಿರುವರು
ಚರಣ ನಿಮ್ಮದು ಪತ್ತಲೈ ಹುಲುಕುಂದ ಗ್ರಾಮಕೆ ॥೫೦॥

ದನಗಳಿಗೆ ತಾಂ ಬಂದ ಬೇನೆಯು
ದನಗಳಿವು ಕಡು ಸಾಯುತಿರುವು
ಘನ ಮಹಿಮರೇ ನೀವು ಬಂದರೆ ನಮ್ಮ ಗೋಳದು ।
ಮನೆಯ ಮಾಡಿದುದೋಡಿಹೋಪುದು
ಕನಿಕರದೆ ಮೂರ್ತಿಗಳೆದಯದಿಂ
ಮನಸು ಮಾಡಿರಿ ಬರುವದೂರಿಗೆ ಸ್ವಾಮಿಗಳ ನೀವು ॥೫೧॥

ಕೇಳಿಯಾ ಹುಲಕುಂದ ಭಕ್ತರು
ಹೇಳಿರುವ ಮಾತೆಲ್ಲ ಯತಿಗಳು
ತಾಳಿದಯವನು ಬರುವೆನೆಂದರು ನಾಳೆಯೇ ನಾನು ।
ಹೇಳಿದೊಲು ಮರು ದಿವಸ ಹೋದರು
ಕಾಲ ಕಾಲನ ಭಕ್ತ ಮಣಿಗಳು
ಕೇಳಿರೈ ಮೋಟಾರದಲಿ ತಾವ್ ಬಂದ ಜನರೊಡನೆ ॥೫೨॥

ಬಂದರೆಂಬುದು ಕೇಳಿ ಯತಿಗಳು
ಬಂದರೈ ಕರಕೊಂಡು ಹೋಗಲು
ಮಂದಿಯೆಲ್ಲರು ವಾದ್ಯ ಸಹಿತವು ಹರ್ಷವನು ಹೊಂದಿ ।
ಚಂದದಿಂ ಬಾರಿಸುತಲೂದಿಸು
ತಂದು ಹೂಗಳ ಹಾರಿಸುತ್ತಲಿ
ನಂದದಿಂ ಕರೆದೊಯ್ದುದೂರಲಿ ಜಗದಗುರುಗಳನು ॥೫೩॥

ಮರೆತು ದ್ವೇಷವನುಭಯ ಪಕ್ಷದ
ಸರುವ ಜನಗಳು ಬಂದು ಬಿಟ್ಟರು
ಗುರುವರರ ಸಂದರ್ಶನಕೆ ಬಹು ಭಕ್ತಿ ಪೂರ್ವಕವು ।
ಅರುಹಿದರು ಪಾದವನು ತಮ್ಮಯ
ಕರುಣೆಗಳಿಗುರೆ ಸತ್ಯವಿದ್ದುದು
ಪರುಷದಿಂ ಕೇಳಿದರು ಮಹಿಮರು ದ್ವಯರವಾದವನು ॥೨೪॥

ಹೇಳಿದರು ತರುವಾಯ ಶ್ರೀಗಳು
ಕೇಳಿರೆಲ್ಲರು ನನ್ನ ಮಾತನ
ಕೇಳಿದರೆ ಸುಖದಿಂದ ಬಾಳೆಯ ಮಾಡುವಿರಿ ನೀವು ।
ಕೇಳದಿದ್ದರೆ ಕೇಡು ನಿಮ್ಮಯ
ಕೇಳಿರೈ ಬಲುಮಾಡಿಕೊಳ್ಳಿರಿ
ಕೇಳಿ ಸ್ವಾಮಿಯ ಮಾತಪೇಳ್ದರು ಸರ್ವರೂ ಮುದದೆ ॥೨೫॥

ಹೇಳಿದೊಲು ತಾವ್ ನಡೆದುಕೊಳ್ವೆವು
ಹೇಳಿರೈ ತಂದೆಗಳೆ ದಯದಿಂ
ಹೇಳಿದರು ಚತುರರು ನಿರ್ಣಯವ ನಿಖಿಲರೊಪ್ಪವೊಲು ।
ಹೇಳಿದರು ತರುವಾಯ ಸರ್ವರು
ತಾಳಿ ತೋಷವ ಮುಕ್ತಕಂಠದೆ
ಹೇಳಿದುದು ಬಹುಮಾನ್ಯವಿರುವದು ನಿರ್ಣಯವು ನಿಮ್ಮ ॥೨೬॥

ಸಿದ್ಧರಿಗೆ ಕೊಣ್ಣೂರ ಸ್ವಾಮಿಗೆ
ಬುದ್ಧಿ ನಿಧಿ ಕೆಂಪಯ್ಯನವರಿಗೆ
ಗೆದ್ದ ಷಡ್ರಿಪುಗಳನು ಸಹಜವೆ ಜಗದಗುರುಗಳಿಗೆ ।
ಮುದ್ದಿನಿಂದಂ ಭಕ್ತಿಯಿಂದಂ
ಬಿದ್ದರೆಲ್ಲರು ಪಾದ ಕಮಲಕೆ
ಶುದ್ಧವಾಯಿತು ಮನವು ನಿಖಿಲರ ವೈರತನವಳಿದು ॥೨೭॥

ಮರುದಿವಸ ಮೃಷ್ಟಾನ್ನ ಭೋಜನ
ಹರುಷದಿಂದೂರೆಲ್ಲ ಜನರಿಗೆ
ಗುರುಗಳುಳಿದಿರುವಂಥ ಗುಡಿಯಲಿ ಮಾಡಿಸಿದರವರು ।
ಮೆರವಣಿಗೆ ಮಾಡಿಸಿ ನಂತರ
ಪರಮ ಪೂಜ್ಯರ ಪಲ್ಲಕಿಯೊಳುರೆ
ತೊರೆಯದೇ ತಾವೊಂದು ಕೇರಿಯ ಗ್ರಾಮದೊಳಗಿದ್ದ ॥೫೮॥

ಸುರುವುತಿರೆ ನೀರನ್ನು ಕೊಡದಿಂ
ಹರುಷದಿಂ ಗರತಿಯರು ಬಿಡದಲೆ
ಗುರುವರರ ಪಲ್ಲಕಿ ಮುಂಗಡೆ ಕೇರಿಯೊಳು ತಮ್ಮ ।
ಕರದಿ ಸಂಬಾಳವು ಸನಾದಿಯು
ನೆರೆ ಮೊಳಗುತಿರೆ ಯತಿಯ ಮುಂಗಡೆ
ಹುರುಪಿನಿಂದಂ ಕಾಳಿಯವ ತಾಂ ಕಾಳಿಯೂದುತಿರೆ ॥೫೯॥

ಮತಿಯುತರು ಪುಲಕುಂದದವರಾ
ಯತಿಯ ಮೆರೆಸಿದರಿಂದಲೂರಲಿ
ಕಥಿಸಲಿಕೆ ವಾತದೊಲು ಘಟಿಸಿತು ಚಿತ್ರವದು ತಾನು ।
ಅತಿ ಭಯಂಕರರೋಗ ದನಗಳ
ಕ್ಷಿತಿ ಶಿವನ ಬಹು ಮಹಿಮೆಯಿಂದಂ
ಚತುರರಾಗಿಹ ಶ್ರೋತ್ರ ಜನಕೇ ಮಾಯವಾಯಿತದು ॥೬೦॥

ರೋಗದಿಂ ಬಳಲುತಿಹ ದನಗಳು
ಬೇಗದೊಳು ಗುಣಹೊಂದಿದವು ಸಲೆ
ಹೋಗಲಿಲ್ಲವು ಸತ್ತು ಪಶುಗಳು ಬಳಿಕವೂರಲ್ಲಿ ।
ಹೀಗಿರುವ ಯತಿ ಮಹಿಮೆಯಾಲಿಸಿ
ಸಾಗಿ ಬಂದರು ಸುತ್ತುಮುತ್ತಿ
ಯೋಗಿಗಳ ಸಂದರ್ಶನಕೆ ತಾವ್ ಹಳ್ಳಿ ಜನರೆಲ್ಲಾ ॥೬೧॥

ತಂದು ತೆಂಗಿನಕಾಯಿ ಕಪ್ಪುರ
ತಂದು ಕೆಲವರ ಬಾಳೆಹಣ್ಣುಗಳ
ಮುಂದಿರಿಸಿ ಯತಿವರರ ಪಾದದ ನಮಿಸಿ ಚರಣವನು ।
ಹೊಂದಿ ಹರಕೆಯ ಹೋಗುತಿದ್ದರು
ತಂದೆಯಾಗಿಯು ದೀನ ಜನಗಳ
ಬಂಧುರರ ಕಳಿಸಿದರು ತದುಪರಿಮಾನವನ್ನೆಸಗಿ ॥೬೨॥

ನಂದಿಯನ್ನೇರಿರುವ ಸಂತತ
ನಂದದೊಳು ಸಲೆ ಮೆರವ ಗಣಪ
ಸ್ಕಂದರಿವರಿಗೆ ಜನಕನಾಗಿಹ ಫಾಲಚಕ್ಷುವಿಗೆ ।
ತಂದೆ ಮೂಲೋಕಕಾಗಿಹ
ಮಂದರಾಚಲದೊಳಗೆ ವಾಸಿಪ
ಕಂದು ಗೊರಳಗೆ ಪಾರ್ವತೀಶಗೆ ನಿರುತ ಜಯವಿರಲಿ ॥೬೩॥

( ಹನ್ನೊಂದನೆಯ ಸಂಧಿ ಮುಗಿದುದು )

§ ಶ್ರೀ ಜಗದ್ಗುರು ಗುರುಸಿದ್ದೇಶ್ವರ ಪ್ರಸನ್ನ §



# ಹನ್ನೆರಡನೆಯ ಸಂಧಿ

ಸೂಚನೆ:– ಧಾರವಾಡದ ಮಠದ ಗುರುಗಳು
ಧೀರ ಗುರುಲಿಂಗಪ್ಪ ಯತಿಗಳು
ಮೂರುಸಾವಿರಮಠದೊಳಿದ್ದರು ತಾವು ಹುಬ್ಬಳ್ಳಿಯು

ಶ್ರೀ ಶುಭಾಗಂ ಭಾಲನೇತ್ರಂ
ಶೇಷಭೂಷಂ ಪಂಚವಕ್ತ್ರಂ
ಪೋಷಕಂ ಮೂಲೋಕಮಂ ಗಿರಿಜೇಶ್ವರಂ ತಾನು ।
ದೋಷಗಳ ನಮ್ಮೆಲ್ಲ ಕ್ಷಮಿಸಲಿ
ತೋಷದಿಂದ ಪ್ರೇಮದಿಂದಂ
ರಾಶಿಯಾಗಿಹ ದಯದ ಗಂಗಾಧರನು ರಕ್ಷಿಸಲಿ । ॥೧॥

ಧಾರವಾಡದಲೆಸೆಯುತಿರುವ
ಮೂರುಸಾವಿರ ಮಠದ ಗುರುಗಳು
ವೀರ ಯತಿಗಳ ಬಳಿಯೊಳಿದ್ದರು ಮೊದಲು ಬಾಲ್ಯದಲಿ ।
ಧೀರರು ಗಂಭೀರರಾಗಿಹ
ಸಾರ ಚರಿತೆಯ ಜಗದಗುರುಗಳ
ಭೂರಿ ಭಕ್ತಿ ಭಾವದಿಂದಂ ಸೇವೆ ಮಾಡುತ್ತ ॥೨॥

ಜನಿಸಿದರು ತಾವ್ ತಡಸ ಗ್ರಾಮದಿ
ಜನಕ ಚನ್ನಯ್ಯನವರ ಮತ್ತಾ
ಜನನಿ ರುದ್ರಮ್ಮನವರ ಜಠರದಿ ತಾವು ಸ್ವಾಮಿಗಳು ।
ಸುವಿನಯಿಳು ಕಂಬಾಳಿ ಮಠದೀ
ವಿನಯಿಗಳು ಗುರುಲಿಂಗ ಯತಿಗಳು
ಮನವನಿತ್ತು ಕಲಿತ ಕನ್ನಡ ವಾರನೇಯತನಕ ॥೩॥

ಆಗಿರಲು ಹನ್ನೆರಡ ವರ್ಷವು
ರಾಗದಿಂ ದೊಪ್ಪಿಸಲು ಬಂದರು
ಯೋಗಿವಯ್ಯರ ವಶಕೆ ತಾವ್ ಗುರುಲಿಂಗಬಾಲನು ।
ಯೋಗಿಗಳು ಗಡ ಪಟ್ಟದ್ದೇವರು
ಸಾಗುವರು ಸಲೆ ಧರ್ಮ ಪಥದಿಂ
ಭೋಗಿಗಳು ವೈರಾಗ್ಯ ಗಂಜೀಗಟ್ಟಿಯೂರವರು ॥೪॥

ಮಾತುಲರು ಗುರುಲಿಂಗ ಯತಿಗಳೆ
ನೀತಿವಂತರು ಪಟ್ಟದೇವರು
ಪ್ರೀತಿಯಿದ್ದಿತು ಬಹಳವೀ ಗುರುಲಿಂಗ ಬಾಲನಲಿ ।
ಖ್ಯಾತರಾಗಿಯ ಜಗದಗುರುಗಳು
ಮಾತುಕೇಳ್ದರು ಪಟ್ಟದೇವರ
ಪೂತ ದೇಹಿಗಳಿವರು ಪಟ್ಟದ ಸ್ವಾಮಿಯೊರೆದಂತೆ ॥೫॥

ಇಟ್ಟುಕೊಂಡರು ತಮ್ಮ ಮಠದಲಿ
ಸಿಟ್ಟಿರದ ಯತಿವರರು ಮೋದದೆ
ದಿಟ್ಟಗುರುಲಿಂಗಪನ ನಿಪ್ಪತೇಳಿ ।
ಕೊಟ್ಟರೈ ಶಿಕ್ಷಣವನಾತಗೆ
ಪಟ್ಟು ಪ್ರೀತಿಯ ಸಂಸ್ಕೃತದ ತಾವ್
ಕೊಟ್ಟು ಮನಪನು ಕಲಿಯುತ್ತಿರ್ದರು ಬಾಲಯತಿಯಿವರು ॥೬॥

ಮಠದ ಸಂಸ್ಕೃತ ಶಾಲೆಯಲಿ ಸಲೆ
ದಿಟವಿದುವು ಕಲಿಯುತಿಹ ಸಮಯದಿ
ಪಟುಗಳಾಗಿಹ ಜಗದಗುರುಗಳ ಸೇವೆಯನು ತಾನು ।
ಚಟುಲ ಮನವಿಲ್ಲದಲೆ ಗೈದುರೆ
ನಿಟಿಲನಯನನ ಭಕ್ತಮಣಿಯಾ
ಸಟೆನುಡಿಯದೀ ಸ್ವಾಮಿಗಳು ಗಳಿಸಿದರು ಪ್ರೇಮವನು ॥೭॥

ಕಳೆಯೆ ಕೆಲವರ್ಷಗಳ ನಂತರ
ತಿಳಿಮನದ ಗುರುಲಿಂಗ ಯತಿಗಳು
ತಳೆದರಧಿಕಾರವನು ತಡಸದ ವಿರತ ಸನ್ಮಠದಾ ।
ಉಳಿದು ಮಠದಲಿ ಮೂರುಸಾವಿರ
ಬಳಿಯೊಳಗೆ ಶ್ರೀ ಜಗದಗುರುಗಳು
ಬಲುವು ಹುರುಪಿಂ ಸಂಸ್ಕೃತದಿ ಸಾಹಿತ್ಯ ಶಾಸ್ತ್ರವನು ॥೮॥

ಓದಿ ತೀರ್ಥ ಪರೀಕ್ಷೆತನಕಾ
ಓದಿದರು ಸಲೆ ವ್ಯಾಕರಣವನು ಸಲೆ
ಯೋದಿದರು ವೇದಾಂತವನ್ನೀ ತಡಸದಪ್ಪನವರು ।
ಹೋದ ಹೋದಲೆಲ್ಲ ವಿವರನು
ಮೋದದಿಂ ಕರೆದೊಯ್ಯುತಿದ್ದರು
ಮೇದಿನಿಯ ಮೇಲಿರುವ ಸಾಂಬರು ಜಗದಗುರುವರರು ॥೯॥

ಇವರ ಮೇಲಣ ಪ್ರೇಮದಿಂದಂ
ಭುವನ ಸನ್ನುತ ಜಗದಗುರುಗಳು
ಸವಿನಯದ ಮೂರ್ತಿಗಳು ಗೈದರು ಸ್ವಾಮಿಯನ್ನಾಗಿ ।
ತವೆ ಮೆರೆಯುತಿಹ ಮೂರುಸಾವಿರ
ಶಿವಮಠಕೆ ತಾವ್ ಧಾರವಾಡದ
ಸವಿನಯದ ವರ್ತಿಸುವ ಶ್ರೀ ಗುರುಲಿಂಗ ಯತಿಗಳನು ॥೧೦॥

ಇರುವದದು ಹುಬ್ಬಳ್ಳಿಯಲ್ಲಿಹ
ಪರಮವಾಗಿಹ ಮೂರುಸಾವಿರ
ಮೆರೆವ ಮಠದಾ ತಾನು ಶಾಖಾಮಠವು ಸುಂದರವು ।
ಸುರುವರಿಗೆ ಪ್ರಿಯವಾಗಿ ಮಾಳ್ಪರು
ಗುರುಗಳೀ ಗುರುಲಿಂಗ ಯತಿಗಳು
ಹರುಷದಿಂದಾ ಕೀರ್ತಿಸಿದ ಮಠದಾಳ್ಕೆಯನು ತಾವು ॥೧೧॥

ಸನ್ನವಾಲ್ಪ ತೊಂಬತರ "ಲಿ" ತಾವ್
ಚನ್ನ ಮಠದಧಿಕಾರಿಯಾದರು
ನನ್ನಿ ಮಾತಗೆಳಾಡತಿಹ ಗುರುಲಿಂಗ ಯತಿವರರು ।
ಸನ್ನುತರು ಶ್ರೀ ಜಗದಗುರುಗಳು
ಗನ್ನಮಹಿಮರು ಪೂಜ್ಯಪಾದರು
ಹನ್ನಿಯಿದು ಕಲ್ಯಾಣಗೆಯ್ದರು ಹೀಗೆ ಹಲಜನರ ॥೧೨॥

ಧಾರವಾಡ್ಡದ ನಗರದೊಳಗಿಹ
ಭೂರಿ ಧನಯುತನಾಗಿ ಶೋಭಿಪ
ವೀರಶೈವ ಸುಧರ್ಮಿಯಾಗಿಹ ಭಕ್ತನೈ ಇವನು ।
ಸಾರಚರತೆಯ ಶ್ರೀಗಳಲಿ ತಾಂ
ಮೀರಿರುವ ಸದ್ಭಕ್ತಿಯುಕ್ತನು
ಕಾರುಣಿಕ ರಾಜಪ್ಪನರಳೀಕಟ್ಟಿಯೆಂಬವನು ॥೧೩॥

ಶ್ರೀ ಜಗದ್ಗುರು ಪೂಜ್ಯಪಾದರು
ನೈಜವಿದು ಘನಮಹಿಮರಿದ್ದರು
ಸಾಜವಂತರು ಧಾರವಾಡ ತಮ್ಮ ಸನ್ಮತಕೆ ।
ರಾಜ ರಾಜರು ಬಂದುಬಿಟ್ಟರು
ಮೂಜಗದಪತಿ ಧರೆಯ ಮೇಲಣ
ರಾಜಿಸುತ್ತಿರುವವರ ಪಾದವ ನಮಿಸಲಿಕೆ ತಾವು ॥೧೪॥

ಬಂದರರಳೀಕಟ್ಟಿ ಧನಿಕರು
ಕಂದ ರಾಚಪನನು ಸಂಗಡ
ತಂದಿರಲು ರಾಚಪಗಾಗಿರೆ ನಾಲ್ಕು ವರ್ಷಗಳು ।
ಬಂದು ತಾವ್ ಬಹು ಭಕ್ತಿಯಿಂದಂ
ವಂದನೆಯ ಶ್ರೀಗಳಿಗೆ ಗೈದರು
ಹೊಂದಿದರು ಸಂತೋಷವಾಗಳು ನೋಡಿ ಗುರುಗಳು ।೧೫॥

ಹೇಳಿದರು ಬಲು ನಲ್ಮೆಯಿಂದಂ
ಬಾಲಕನನ್ನೀ ನಮ್ಮ ಜತೆಯಲಿ
ಕೇಳಿರೈ ಕರಕೊಂಡು ಹೋಗುವೆವೆಂದು ಗುರುವರರು ।
ತಾಳಿರಿ ನೀವ್ ಚಿಂತೆಯನಿಸವೂ
ಶೀಲವಂತರೆ ಸಾವುಕಾರರೆ
ಪಾಲನೆಯ ಮಾಡುವೆವು ನಿಮ್ಮೊಲು ತರಳನಿವನನ್ನು ॥೧೬॥

ಗುರುಗಳಪ್ಪಣೆ ಮನ್ನಿಸಿದರಾ
ಅರಳೀಕಟ್ಟಿ ಸಾವುಕಾರರು
ಹರುಷದಿಂ ಕಳಿಸಿದರು ಗುರುಗಳಕೂಡ ರಾಚಪನ ।
ಕರೆದುಕೊಂಡವನನ್ನು ಹೋದರು
ಮೆರೆವ ಮರಡಿಮಠಕೆ ಯತಿಗಳು
ಸರುವ ವಿಧದಿಂ ಸಲಹುತಿರ್ದರು ತಾವು ರಾಚಪನ ॥೧೭॥

ಕಳೆದ ನಂತರ ಮೂರು ವರ್ಷವು
ಬಲು ಚಮತ್ಕೃತಿಯಾಯ್ತು ಕೇಳಿರಿ
ಕಳೆದುಬಿಟ್ಟಿತು ಪ್ರಾಣವೊಂದಿನ ಬಾಲರಾಚಪನ ।
ತಿಳಿಯಲಿಲ್ಲವು ತಾನು ಕಾರಣ
ತಿಳಿದಕೂಡಲೆ ಸ್ವಾಮಿಮಣಿಗದು
ಘಳಿಲನೇ ತಾವ್ ತಮ್ಮಯ ಹಸ್ತ ಮೃತರಾಚಪನ ॥೧೮॥

ಎಳೆದುಬಿಟ್ಟರು ಜವದೆ ಪ್ರೈಮೇಲ್
ಬಳಿಕ ಬಂದಿತು ಜೀವವನಿಗೆ
ತಿಳಿಯಿತದು ರಾಚಪನವರಿಗೆ ಗಡ ಬಳಿಕವದುವೆಲ್ಲ ।
ಉಳಿಸಿ ರಾಚಪನನ್ನು ಜಗದಲಿ
ಬಲುಹು ಪುಣ್ಯವ ಕಟ್ಟಕೊಂಡರು
ತುಲವಿರದ ಘನಮಹಿಮರಾಗಿಹ ಜಗದಗುರುವಿವರು ॥೧೯॥

ಇದ್ದವವು ರಾಚಪನಲಿ ಸಲೆ
ಬುದ್ಧಿಯಿರದಿಹ ಬಾಲವಯದ
ಲ್ಲಿದ್ದ ತೋರುವಹಾಗೆ ಪಟಪೋಣ್ ಮುನಿಸುಗಳು ತಾವು ।
ಮುದ್ದಿನಿಂದಂ ಸಹಿಸಿ ಯತಿಗಳು
ಶುದ್ಧವಾಗಿಹ ಮಮತೆಯಿಂದಂ
ಬುದ್ಧಿಗಲಿಸುತೆ ಸಲಹುತಿರ್ದರು ಸತತ ರಾಚಪನ ॥೨೦॥

ತಾಯಿಗಿಂತಲು ಹೆಚ್ಚು ಪ್ರೀತಿಯ
ನ್ಯಾಯನಿಪುಣರು ಜಗದಗುರುಗಳು
ಕಾಯಜನ ಗೆದ್ದವರು ಮಾಡುತಿದ್ದರಾತನನು ।
ಕಾಯುತಿರೆ ರಾಚಪನನು ಸಲೆ
ಕಾಯಿ ಹಣ್ಗಳ ಹಾಲು ಕೊಟ್ಟರು
ರಾಯರುಂಬುವ ಮತ್ತು ಭೋಜನವುಣಿಸಿಯಾತನಿಗೆ ॥೨೧॥

ತಮ್ಮ ಜತೆಯಲಿ ಕರೆದುಕೊಂಡೇ
ಒಮ್ಮನದ ಯತಿಯುಣ್ಣುತಿದ್ದರು
ನಮ್ಮ ಮಗನಿವನೆಂದು ಭಾವಿಸಿ ತಾವು ರಾಚಪನ ।
ಹಮ್ಮ ಸಿಟ್ಟುಗಳಿಲ್ಲದೀಯತಿ
ನಮ್ಮ ಧರ್ಮಕೆ ಭೂಷಣರು ಒಪು
ನಮ್ಮ ಭಾರತ ಭೂಮಿದೇವಿಯ ಪರಮಸುತರಿವರು ॥೨೨॥

ಸ್ವಾಮಿಗಳ ಜತೆಯಲ್ಲಿ ಒಪುದಿನ
ಪ್ರೇಮದಿಂದಂ ವಾಸಮಾಡಿರೆ
ವ್ಯೋಮಕೇಶನ ಭಕ್ತನಾಗಿಪ ಧನಿಕರಾಚಪನು ।
ಸ್ವಾಮಿಪಾದದಿ ನೆಲೆಸಿಬಿಟ್ಟಿಹು
ದೀಮಹಾಸದ್ಭಕ್ತನಲಿ ತಾಂ
ಸೀಮೆ ಮೀರಿದ ಭಕ್ತಿ ನೈಜವು ಸ್ತುತ್ಯನೈ ಇವನು ॥೨೩॥

ಹೇಳುವೆವು ಮತ್ತುಳಿದ ಸಂಗತಿ
ಹೇಳಿದೊಲು ನಾವ್ ನಿಮಗೆ ಮೊದಲು
ಶೀಲಭೂಷಣ ಶಿವಬಸವ ಯತಿಯುವರು ಮಾಡಿರುವ ।
ಮೇಲು ಕಾರ್ಯವ ಮಾತಿನೊಳು ನಸು
ವಾಲಿಸಿರಿ ಶ್ರೀ ಸ್ವಾಮಿಗಳು ತಾವ್
ತಾಳಿದರು ಜನ್ಮವನು ವಿಸುತರು ನಾಗನೂರಿನಲಿ ॥೨೪॥

ಬಳಿಕ ಕೆಲವರುಷಗಳು ಗತಿಸಲು
ಸಲೆ ನಡೆದ ಬೋರ್ಡಿಂಗವನು ಗಡ
ತಿಳಿಸಿ ಶ್ರೀಗಳಿಗದು ಸ್ಥಳಾಂತರ ಮಾಡಿದರು ತಾವು ।
ಬಳಿಯೊಳಿಹ ಬೆಳಗಾವಿ ನಗರಕೆ
ನಿಲಯಬಾಡಿಗೆಯಿಂದಲೆಸಗಿದ
ಕಳೆದನಂತರ ಕೆಲವರುಷಗಳು ಜಗದಗುರುವರರು ॥೨೫॥

ಕೊಂಡು ಕೊಟ್ಟರು ದೊಡ್ಡ ಮನೆಯನು
ಗಂಡುಗಲಿಗಳು ದಾನಕಾರ್ಯದಿ
ಪಂಡಿತರು ಘನಧರ್ಮದಲಿ ಬೋರ್ಡಿಂಗಸಲುವಾಗಿ ।
ಕಂಡು ಕಣ್ಣಿಂ ಘನಸದನವದು
ನುಂಡವೊಲುಸಭೆ ಹರ್ಷವಡೆದರು
ಕೊಂಡರರವತು ಸಾವಿರಕ್ಕಾಸದನ ಗುರುವರರು ॥೨೬॥

ಇಟ್ಟರಾತರು ವಾಯುನಾಮವ
ಗಟ್ಟಿಮನಸಿನ ನಾಗನೂರಿನ
ಸಿಟ್ಟಿರದ ಯತಿಗಳು ಪ್ರಸಾದದ ನಿಲಯ ವೆಂದದಕೆ ।
ಬಿಟ್ಟು ಸ್ವಾರ್ಥವ ಕಷ್ಟ ಮಾಳ್ಪರು
ಕಟ್ಟಿಕೊಂಡರು ಪುಣ್ಯವನು ಬಹು
ಗಟ್ಟಿದವು ಕಡು ಕೀರ್ತಿವಡೆದರು ನಾಡಿನೊಳಗವರು ॥೨೭॥

ಇರುವರೀಗಳು ಸಾಲೆ ಕಲಿಯುವರಲಿ
ಸರುವ ಹುಡುಗರು ಕೂಡಿಯೆರಡೂ
ವರೆ ಶತಕವು ಪ್ರಸಾದ ನಿಲಯದಿ ಸೌಖ್ಯದಿಂ ತಾವು ।
ಇರುವ ದೂರ್ಜಿತವಾದ ಸ್ಥಿತಿಯೊಳು
ಮೆರೆಯುತಿರುವ ಪ್ರಸಾದ ನಿಲಯವು
ಹರುಷವಡೆದವರು ನೋಡಿ ಸ್ವಾಮಿಯ ಕಾರ್ಯವನು ಜನರು ॥೨೮॥

ಇನ್ನು ಪೇಳುವೆವರಳಿಕಟ್ಟೀ
ಚನ್ನಗುಣಿ ರಾಚಪನೀತನ
ಗನ್ನ ಭಕ್ತನ ಪೂಜ್ಯಪಾದರ ಮಿಕ್ಕಮಾತುಗಳ ।
ನನ್ನಿ ಸಂಗತಿಯನ್ನು ಬಿಡದಲೆ
ಪನ್ನಗಾಲಂಕೃತನ ಭಕ್ತರ
ಭಿನ್ನ ಭಾವನೆಯಿರದ ಶ್ರೋತ್ರರೆ ಸ್ವಲ್ಪವಚನದೊಳು ॥೨೯॥

ಕೆಲವು ಸಮಯದಿ ಜಗದಗುರುಗಳು
ಒಲು ಮಮತೆಯಿಂ ನಡೆಸುತಿದ್ದನು
ಚೆಲುವು ಮೋಟಾರವನು ರಾಚಪ ಭಕ್ತಿಯಿಂದೆ ಬಹು ।
ಗೆಲವಿನವತಂಸಪನು ಧರಿಸಿದ
ಒಲುವು ಮೃದುಮಾನಸದ ಶ್ರೀಗಳು
ಸಲೆ ಮೆರೆವ ಹುಬ್ಬಳ್ಳಿ ಪುರದಲ್ಲಿದ್ದ ಸಮಯದಲಿ ॥೨೦॥

ಹೋಗಬೇಕಾಗಿತ್ತು ನಾಳಿಗೆ
ಹೋಗುವೊಲಮಾವಾಸ್ಯೆ ದಿನದಲಿ
ಯೋಗಿವರರಿಗೆ ರೋಡಿಗಾಹುಕ್ಕೇರಿ ನಾಮಕದ ।
ಆಗದುರ್ಮಿಗಳವಿರಲು ಪೆಟ್ರೋಲ
ಹೇಗೆ ಹೋಗುವದೆಂದು ನಾಳಿಗೆ
ತ್ಯಾಗಿಗಳು ನಸುಚಿಂತೆಮಾಡಿದಕೆಣ್ಣೆಯಿಲ್ಲದಕೆ ॥೨೧॥

ಮತ್ತೆ ಧೈರ್ಯವ ತಾಳಿ ನುಡಿದರು
ಸತ್ತಮರು ತಾವೆಣ್ಣೆ ಕೊಡುವರು
ಮುತ್ತಿನಂದದಿ ಹಸನಮನಸಿನ ಸಿದ್ಧ ಕಾಡಪನು ।
ಬಿತ್ತರದ ನುಡಿ ಪೇಳ್ದರಾಗಳು
ಹೆತ್ತಮಗನೊಳಿರುವ ತಮ್ಮಯ
ಚಿತ್ತ ಚಂಚಲವಿಲ್ಲದರಳೀಕಟ್ಟಿ ರಾಚಪಗೆ ॥೨೨॥

ಹೇಳಿಯೀತೆರ ಸ್ನಾನ ಪೂಜೆಯು
ತಾಳಿ ಶಾಂತಿಯ ಮಾಡಹೋದರು
ಕಾಲ ಕಾಲನ ಭಕ್ತರತ್ನರು ಮೆಲ್ಲನೇ ಒಳಗೆ ।
ಕಾಲದಲ್ಲಾ ತಂದುಕೊಟ್ಟನು
ಸಾಲುವೊಲ್ಕೈಗ್ಯಾಲನೆಣ್ಣೆಯ
ಕೇಳಿದರೆ ನೀನಾರನೆಂಬುದು ಹೇಳಲಿಲ್ಲವನು ॥೨೩॥

ಹೊರಟು ನಡೆದರು ರೋಡಿಗೈದಲು
ಹರುಷದಿಂ ಮೋಟಾರದಲಿ ತಾವ್
ಗುರುವರೇಣ್ಯರು ತಮ್ಮ ರಾಚಪನನ್ನು ಕರಕೊಂಡು ।
ಗುರುಗಳಪ್ಪಣೆಯಂತೆ ರಾಚಪ
ಮೆರೆವ ಮೋಟಾರವನು ಸಾಗಿಸು
ತಿರಲು ದಿನವಾನಂದದಿಂ ಜಾಣತನದಿಂದೆ ॥೩೪॥

ಹೋಗುವೊಲರಭಾವಿ ಮಾರ್ಗದೆ
ಹೋಗುತಿರೆ ಮೋಟಾರವಂದಿನ
ಹೋಗಿರಲು ಕ್ರಾಸರೋಡಿನ ಮುಂದೆ ಮೈಲೊಂದು ।
ಆಗಳಾ ಶ್ರೀ ಪೂಜ್ಯಪಾದರು
ರಾಗದಿಂ ರಾಚಪಗೆ ಪೇಳ್ದರು
ಹೋಗುವಾ ಗೋಕಾಕಸ್ಟೇಶನ ಹತ್ತಿರದಿ ಹಾಯ್ದು ॥೩೫॥

ಹೋಗಬೇಕಾಯ್ತಾಗ ಬಂಡಿಯು
ತ್ಯಾಗವೀರರು ಪೇಳ್ದಮೇರೆಗೆ
ಸಾಗಿ ಹೊಳೆಯಾ ಪೂಲಮೇಲಿಂ ಹೋದರೈ ಹಾಗೆ ।
ಯೋಗಿವರ್ಯರ ಪಾದದರ್ಶನ
ಕಾಗಿ ಕೆಲವರು ಮಾರ್ಗವೀಕ್ಷಿಸಿ
ಬೇಗನೇ ಬಾರದಕೆಸಿದ್ಧರು ತೊರೆದು ಹಂಗನ್ನು ॥೩೬॥

ಬಂದು ಕುಳಿತಿರೆ ಹೊಳೆಯ ಪೂಲಿನ
ಮುಂದೆ ಸ್ವಾಮಿಯ ಕೆಲರು ಭಕ್ತರು
ಬಂದದರು ಮೋಟಾರಗುರುಗಳ ಕಂಡು ತಾವವರು ।
ಹೊಂದಿ ಸಂತೋಷವನು ಬಹಳೇ
ವಂದನೆಯ ಮಾಡಿದರು ಯತಿಗಳ
ಸುಂದರವು ಮೇಣ್ ದಿವ್ಯವಾಗಿಪ ಚರಣ ಸಂದಸಕೆ ॥೩೭॥

ಬರೆದ ಪುಣ್ಯಶ್ಲೋಕರಂದಿನ
ತಿರುಗಿಸಲು ಗೋಕಾಕ ಸ್ಟೇಶನ
ಕಿರುವ ಪಥದಿಂ ಬಂಡಿಯಸುನೆವ ತಿಳಿಯಿತೆಲ್ಲರಿಗೆ ।
ಬರುವರೆಂಬುದು ಮಾರ್ಗದಿಂದಾ
ಅರಿತ ತಮ್ಮಯ ಭಕ್ತಜನಗಳು
ಪರಮ ಸಿದ್ಧರು ಹಾಗೆ ಹೋಗಲು ಹೇಳಿದರು ತಾವು ॥೩೮॥

ಯೋಗಿಗಳಿರೆ ತ್ರಿಕಾಲ ಸುಜ್ಞರು
ಹಾಗಿರುವ ಸಲುವಾಗಿ ಸರ್ವರು
ತ್ಯಾಗಮೂರ್ತಿಗಳಿವರು ತಪ್ಪದೆ ಹೇಳುತಿರೆ ತಾವು ।
ಭೋಗಿಸದೆ ನಸು ವಿಷಯ ಸುಖವನು
ಭೋಗಿಸುತ್ತಿರೆ ಜೀವ ಶಿವನಲಿ
ಹೋಗಿ ಕೂಡಿದ ಸಮಯದಾಗುವ ಪರಮಸುಖವನ್ನು ॥೩೯॥

ಇರುವ ಗೋಬಲಗುಡ್ಡ ಬಳಿಯಲಿ
ಗುರುಗಳಾಶ್ರಮದಿಂದೆ ಹೊರಟರು
ಮರುದಿವಸ ರಾಜಪನಲ್ಲದೆ ಕೃಷ್ಣಭೋಸಲೆಯು ।
ಗುರುವರರ ಮೋಟಾರ ಡ್ರಾಯವ್ಹರ
ಕರಗಿ ಸುಂದರ ದಿವ್ಯ ಪಾದಕೆ
ಪರಮ ಪಾವನ ಮೂರ್ತಿಗಳ ತಾವ್ ಪ್ರೇಮ ಪೂರ್ವಕವು ॥೪೦॥

ಬರೆದರಾಗಳು ಜಗದಗುರುಗಳು
ತೊರೆದು ಚಿಂತೆಯ ಪೆಟ್ರೋಲದ ನೀವ್
ದೊರೆಯುವದು ಪೆಟ್ರೋಲವು ಗೋಕಾವಿಯಲಿ ಸ್ಟ್ಯಾಂಡದಲಿ ।
ಒರೆಯುವದು ನೀವಲ್ಲಿ ಮೊದಲಲಿ
ದೊರೆದ ಮನುಜನಿಗಣ್ಣೆ ಕೊಡಲಿಕೆ
ಹರುಷದಿಂದವನೆಣ್ಣೆ ಕೊಡುವನು ನಿಮಗೆ ಬೇಕೆನಿತು ॥೪೧॥

ತಾಳಿ ಧೈರ್ಯವ ಸ್ವಾಮಿಯೊರೆದೊಲು
ಕೇಳಿರೈ ಗೋಕಾವಿಗೈದರು
ಶೀಲಯುತ ರಾಚಪಭೋಸಲೆ ಕೃಷ್ಣರಿವರಗಳು ।
ಕೇಳಿದರು ಮೊದಲೊಳು ಸ್ವಾಟ್ಕಂಡಿನಲಿ
ಹೇಳಿದೊಲು ಯತಿ ಕಂಡ ಮನುಜಗೆ
ಹೇಳಿದರು ಪೆಟ್ರೋಲ ಕೊಡಲಿಕ್ಕೆರಡುಗ್ಯಾಲನವ ॥೪೨॥

ಇದ್ದನಾತನು ಡ್ರಾಯವ್ಹರನೇ
ಮುದ್ದಿನಿಂ ಪೆಟ್ರೋಲ್ ಕೊಟ್ಟನು
ಇದ್ದನೈ ಮಲಕಾಜಿಯೆಂಬುವ ನಾಮವುಳ್ಳವನು ।
ಸಿದ್ಧರನು ಮನದಲ್ಲಿ ನೆನೆಯುತ
ಬಿದ್ದು ಸಂತೋಷಾಬ್ಧಿಯಸಲೆ
ಯೆದ್ದು ತೋರುವ ಧಾರವಾಡಕೆ ಮುಟ್ಟಿದರು ಸುಖದೆ ॥೪೩॥

ನಡೆದಿರಲು ರಾಚಪನಲಿ ಮೇಕ್
ಹಡೆದಿರುವ ರಾಚಪನನ್ನಾ
ದೃಢ ಮನಸ್ಸಿನ ವೀರಸಂಗಪ್ಪನಲ್ಲಿ ಕೆಲವುದಿನ ।
ಬಿಡದೆ ಕಲಹವು ಗುರುವರರಿಗಿದು
ವೊಡನೆ ತಿಳಿಯಿತು ಬಂದುಬಿಟ್ಟರು
ನುಡಿದತೆರದೊಳು ನಡೆವ ಶ್ರೀಗಳು ಮನೆಗೆ ರಾಚಪನ ॥೪೪॥

ಹೇಳಿದರು ಬುದ್ಧಿಯದ್ವಯರಿಗೆ
ತಾಳಿ ಶಾಂತಿಯ ಸ್ವಾಮಿಚಂದ್ರರು
ಕೇಳಿದರು ಬಹುಭಕ್ತಿಯಿಂ ಶ್ರೀಯತಿಯ ಮಾತುಗಳ ।
ಹೇಳಿದರು ತಾವ್ ಮತ್ತೆಯವರಿಗೆ
ಕೇಳಿರೈ ರಾಚಣ್ಣನೊಂದಿಗೆ
ಶೀಲವಂತರೆ ವಾದಗೈದರ. ಬಿರುಸು ಮಾತುಗಳ ॥೪೫॥

ಆಡಿದರೆ ನೀವಲ್ಲವವುನನ
ಗಾಡಿದೋಲೆಂಬುದನರಿಯೆರಿ
ಮಾಡಿ ಬೋಧವನಿಂತು ಗುರುಗಳು ಹೋದರೈ ಮಠಕೆ ।
ಮಾಡಿದರು ಕಲ್ಯಾಣವನು ಬಹು
ನಾಡೆ ಜನಗಳ ವಿವಿಧಮಾರ್ಗದೆ
ಜೋಡಿಯಿರದೀ ವಿನುತಗುರುಸಿದ್ಧೇಶ್ವರರು ತಾವು ॥೪೬॥

ಭಗಿನಿಯಾ ರಾಚಪಗಾಗಿಹ
ಸುಗುಣವತಿ ನೀಲಮ್ಮನಿನಿಯನು
ಮಿಗೆ ದಯಾಳುವು ವೀರಬಸವಪ್ಪ ಕೆಲಸ ಮಾಡುತಿರೆ ।
ಜಗದ ಜನಕನ ಯೋಜನೆಯ ತೆರ
ಹೊಗಳು ವೋಲಧಿಕಾರಿಗಳು ಸಲೆ
ಸುಗುಣಯುಕ್ತನು ಸೇಡಬಾಳದ ಸ್ಟೇಶನದಿ ತಾನು ॥೪೭॥

ರೋಗ ಭೀಕರವಾಯಿತಾತಗೆ
ಬೇಗವದು ಗೊತ್ತಾಗಿ ಹೋದರು
ಬೇಗನೇ ತಾವ್ ಧಾರವಾಡದೆ ನೋಡಲಿಕ್ಕವನ ।
ಆಗಳಾ ರಾಚಪನೂ ಮೇ
ಣಾ ಚಿಂತೆಯು ಹೆಚ್ಚಿಗಾತನ
ನಾಗಿರುವ ಸನ್ಮಾರ್ಗದಿಂ ಸಲೆತಾಯಿ ತಂದೆಗಳು ॥೪೮॥

ನೋಡಿಯಾತನ ಸ್ಥಿತಿಯ ಕಣ್ಣಿಂ
ಗಾಢ ದುಃಖವ ಹೊಂದಿ ಬಿಟ್ಟರು
ಕೂಡಲೇ ಕೊಡಿಸಿದರು ಡಾಕ್ಟರನಿಂದೆ ಭೇಷಜವ ।
ಆಡುತ್ತಿರಲಿಲ್ಲವನು ಮಾತನು
ನಾಡೆಯದು ಹೊತ್ತಾಗಿ ಬಿಟ್ಟಿತು
ಕೂಡವನು ತಾಯಿ ವೀರಬಸವವ ಶಿವನೊಳೆಂಬುವದು ॥೪೯॥

ತಿಳಿಸಲಿಕ್ಕೀ ಸಂಗತಿಯು ತಾವ್
ಕಳಿಸಿದರು ರಾಚಪನನು ಜವ
ವಿಳೆಯ ಮೇಲಣ ಸಾಂಬರಾಗಿಪ ಜಗದಗುರುಗಳಿಗೆ ।
ಘಳಿಲನೇ ತಾಂ ಹೋಗಿಗುರುಗಳು
ಬಲು ವಿನಯದಿಂ ನಮಿಸಿ ಪಾದಕೆ
ಬಳಿಕ ರಾಚಪ ಹೇಳಿದನು ಪೂಜ್ಯರಿಗೆ ದುಃಖಿಸುತೆ ॥೫೦॥

ಉಳಿಸಿ ಕೊಳ್ಳಿರಿ ನಮ್ಮ ಮಾವನ
ಬಲು ಸಮರ್ಥರೇ ಪರಮ ಸಿದ್ಧರೆ
ಸಲಹುದು ನೀಲಮ್ಮನಾ ಮುತ್ತೈದೆತನವನ್ನು ।
ನಿಲಯರಾಗಿಹ ದಯದ ಶ್ರೀಗಳು
ತಳಿಯದಿರು ಚಿಂತೆಯನು ರಾಚಪ
ಉಳಿಯುವನು ತಾಂ ಶಿವನ ಕರುಣದೆ ವೀರಬಸವಪನು ॥೫೧॥

ಸೇವಿಸುವನಡೆ ಪ್ರಸಾದವನು ನೀ
ಸೇವಿಸಿದ ತರುವಾಯ ಕಳಿಪುದು
ದೇವರನು ಸ್ಮರಿಸುತೆ ಪ್ರಸಾದವ ವೀರಬಸವನಪಗೆ ।
ದೇವರಾಗಿಹ ಜಗದ ಮೇಲಣ
ಪಾವನಾತ್ಮಕ ಜಗದ್ಗುರುಗಳು
ಶೀವಿದಾನಂದದಲಿ ಪೇಳ್ದೊಲು ನೆಗಳಿದನು ತಾನು ॥೫೨॥

ತಂತಿ ಬಂದಿತು ಸೇಡಬಾಳದೆ
ಚಿಂತೆಹೋಯಿತು ಬೇನೆ ಅಳಿಯಿತು
ಶಾಂತತನದಿಂ ದೊರಗಿಪನುಸಲೆ ಮಾವನ್ನೈ ನಿನ್ನ
ಇಂತು ತಂದೆಯು ಕೊಟ್ಟ ತಂತಿಯ
ನಾಂತನ್ನೈ ವಾಚಿಸಿದ ನಂತರ
ಸಂತಸವಸಲೆ ಭಕ್ತ ರಾಚಪ ಜಗದಗುರುವರರ ॥೫೩॥

ಕಳೆದ ಮೇಲ್ ಪದಿನೈದು ದಿನಗಳು
ತಿಳಿದು ಬಂದಿತು ವೀರಬಸವಪ
ನುಃದು ಬಂದನು ಶಿವನ ಕರುಣದೆ ಧಾರವಾಡದಲಿ ।
ತಳುಪದೇ ತಾವ್ ಹೊರಟು ಬಂದರು
ಬಲು ಕರುಣೆಗಳು ಜಗದಗುರುಗಳು
ತಳೆದು ಪರ್ಷವ ದರ್ಶನವ ಕೊಡ ಧಾರವಾಡಕ್ಕೆ ॥೫೯॥

ಬಂದ ಕೂಡಲೆ ಯತಿವರೇಣ್ಯರು
ನೇದವಾಯಿತು ಮನೆಯಮುಂದಿಗೆ
ವಂದನೆಯು ಸಾಸ್ಟಾಂಗದಿಂದಂ ಸರ್ವರೆಸಗಿದರು ।
ಮುಂದೆ ಕುಳಿತರು ಕೆಲವು ಸಮಯವು
ಬಂಧುರರು ತಾವ್ ಪರಸಿತದು ಪರಿ
ಚಂದದಿಂದಂ ಹಳಿಸಿ ಹೋದರು ವೀರಬಸವನ ॥೫೫॥

ಪ್ರತಿ ದಿವಸದಲಿ ಮಾಡುತಿದ್ದರು
ಯತಿ ಶಿರೋಮಣಿಯಾದ ಸಿದ್ಧರು
ಹಿತವಗೆಯ್ಯಲು ದುಃಖಿತರಿಗೆ ಪವಾಡಗಳನಿಂಥ ।
ಅತುಲವಾಗಿದೆ ಕಾರ್ಯವವರದು
ಕಥಿಸಲಿಕೆ ತಾಂ ಬಾರದಾರಿಗೂ
ಸತತ ಶಾಂತತೆಯಿಂದೆ ಮೆರೆವವು ಹಾತ್ಮರಾದಿವರು ॥೫೭॥

ಅರಳಿಕಟ್ಟಿ ರಾಚಪನನು
ಸರಲ ಹೃದಯದ ಮಾವನಾತನು
ಪರುಷದಿಂ ಸ್ಟೇಶನದಿ ಫುಂಡೇಕಾರ ಕೆಲಸವನು ॥
ಜರುಗಿಸಲವ ತಾಂ ವೀರಬಸವಪ
ಬರಿದೆ ದೋಷಕೆ ಪಾತ್ರನಾದನು
ಕಿರಿಯ ಜನಗಳು ಸ್ಟೇಶನದೊಳಪರಾಧ ಮಾಡಿವಕೆ ॥೫೭॥

ಬರಿದೆಯಧಿಕಾರಿಗಳು ಕೂಡಲೆ
ಕಿರಿಯಸ್ಥಾನಕೆ ಹಾಕಿಬಿಟ್ಟರು
ನೆರೆ ನಡೆದ ಪ್ರಾಮಾಣಿಕತೆಯಿಂ ವೀರಬಸವಪ್ಪನ ।
ಅರಿಯದೇ ಪೇಣ್ ದೂರಗೈದರು
ಕರುಣೆ ಇವನನು ಕೇಸದೀದಂ
ನಿರಪರಾಧಿಯ ಕೆಲವು ದಿನಗಳು ಮೇಲಿನವರವರು ॥೫೮॥

ಸ್ಮರಿಸುತಿದ್ದನು ಮನದಿ ನಿತ್ಯವು
ಹರನ ಸಮವಾಗಿರುವ ಗುರುಗಳ
ಪರಮಭಕ್ತಿಯ ಭಾವದಿಂದಂ ವೀರಬಸವಪ್ಪನು ।
ಕರುಣದಿಂದಾ ಪುಣ್ಯಶೀಲರ
ತ್ವರದೆ ವಿಘ್ನವು ದೂರವಾಯಿತು
ಮರಳಿ ತನ್ನಯ ಸ್ಥಾನಕ್ಕೈದನು ವೀರಬಸವಪ್ಪನು ॥೫೯॥

ಆಗಿರಲು ದೊಡ್ಡವಳು ತಂಗಿಯು
ಹೋಗಿ ತಾಂ ಹುಬ್ಬಳ್ಳಿಗೆ ರಾಚಪ
ಯೋಗಿವರರಿಗೆ ತಿಳಿಸಿದನು ಸಲೆ ಸಾವಿತ್ರಿಯನು ನೀವು ।
ಬೇಗದಲ್ಲಿ ವಿವಾಹ ಮುಗಿವೋ
ಲಾಗಲೆಂದನು ತಮ್ಮ ಕರುಣವು
ತ್ಯಾಗದಲಿ ಪ್ರಖ್ಯಾತ ಯತಿಗಳು ಹೇಳಿದರು ಬಳಿಕ ॥೬೦॥

ಮಾಡದಿರು ಚಿಂತೆಯನು ತಮ್ಮನೆ
ಕೂಡಲೇ ಘಟಿಸುವದು ಮದುವೆಯು
ನೋಡ ಬೇಕಾಗಿಲ್ಲ ವರನನು ಹೋಗಿ ದೂರದಲಿ ।
ನೋಡಲಿಕೆ ತಂಗಿಯನು ಬರುವರು
ನೋಡು ಹತ್ತಿರದವರೆ ಬೇಗನೆ
ಕೂಡಿಬಂದಿದೆ ಸಮಯವೆಂದರು ಪುಣ್ಯಶಾಲಿಗಳು ॥೬೧॥

ಮತ್ತೆ ಮುಂದಿನ ಮಾತು ಪೇಳ್ವೆವು
ಚಿತ್ತವಿಸಿರೈ ಶ್ರೋತ್ರಜನರೇ
ಸತ್ತಮರ ಲೀಲೆಗಳ ಮುಂದಿನ ಸಂಧಿಯೊಳು ನಾವು ।
ಕುತ್ತು ದೂರಾಗುವದು ನಿಮ್ಮಯ
ಚಿತ್ತ ನಿರ್ಮಲವಾಗಿಬಿಡುವದು
ವಿತ್ತವೃದ್ಧಿಯ ಹೊಂದುವದುಸಲೆ ಕೇಳಿರೈ ನೀವು ॥೬೩॥

ಮೂರುಲೋಕದ ಜನಕನಾಗಿಪ
ಧಾರುಣಿಯ ರಥ ಮಾಡಿಕೊಂಡಿಹ
ಮಾರಮರ್ಧನನಾದ ಸಾಂಬಗೆ ಸರ್ವಮಂಗಲಗೆ ।
ತಾರಗಿರಿಯೊಳು ವಾಸಮಾಡುವ
ಭೂರಿ ಕರುಣಾ ಹೃದಯನಾಗಿಪ
ಗೌರಿಯರಸಗೆ ನಂದಿವಾಹಗೆ ಸತತ ಜಯವಿರಲಿ ॥೬೪॥

(ಹನ್ನೆರಡನೆಯ ಸಂಧಿ ಮುಗಿದುದು)

§ ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಪ್ರಸನ್ನ §



# ಹದಿಮೂರನೆಯ ಸಂಧಿ

ಸೂಚನೆ:– ಬಸವದೇವನ ಚರಿತೆಯನುವುಸು
ರಿರುವದೀಸಂಧಿಯೊಳು ಗಡ
ಹಸನಮನಸಿನ ಶ್ರೋತ್ರಜನರೇ ಕೇಳಿರೈ ಮುದದೆ ।

ಶ್ರೀ ಮಹಾದೇವನು ಪಿನಾಕಿಯು
ವ್ಯೋಮಕೇಶನು ಸರ್ಪ ಭೂಷನು
ಪ್ರೇಮದಿಂ ಮೇಣ್ ದಯದೆ ವಿಶ್ವವ ಪೊರೆವ ಶಂಕರನು ॥
ಕಾಮನಂ ಮೇಣ್ ತ್ರಿಪುರ ದಹಿಸಿದ
ಸೋಮಶೇಖರನಾದ ಸಾಂಬನು
ಸ್ವಾಮಿಯಾಗಿಹ ಮೂರುಲೋಕದ ಶಿವನು ರಕ್ಷಿಸಲಿ ॥೧॥

ಹೇಳಿದೊಲು ಶ್ರೀ ಪೂಜ್ಯಪಾದರು
ತಾಳಿ ಸಂತೋಷವನು ಬಂದರು
ಕೇಳಿರೈ ತಾಂ ಲಿಂಗರಾಜನು ವರನ ಕರಕೊಂಡು ।
ಆಲಯಕೆ ರಾಚಪನನ್ನಾ
ಮೇಲು ಕನ್ಯೆಯ ನೋಡಲಾಗಳು
ಕೇಳಿಬಂದಿಪ ನೆವನವವರದು ತಾಳಿ ಮೋದವನು ॥೨॥

ಕರೆದುಕೊಂಡವರನ್ನು ಹೋದನು
ತ್ವರದಿ ಹುಬ್ಬಳಿ ಮಠಕೆ ರಾಚಪ
ನಿರಲು ಮತ್ತಾ ಜನನಿ ಸಂಗಡ ತಾನು ರಾಚಪನು ।
ಗುರುಗಳಿಗೆ ಸಾಷ್ಟಾಂಗದಿಂದಂ
ಹರುಷದಿಂ ವಂದಿಸಿದ ನಂತರ
ಪೊರೆದುಬಿಟ್ಟನು ಸಕಲವೃತ್ತವ ತಾನು ರಾಚಪನು ॥೩॥

ವರನು ಇಂಟರವಾದವನಿರಲು
ಗುರುವರರ ಕೇಳಿದರು ತಾವೆ
ಸರುವ ವೃತ್ತವ ವರನ ವಿಷಯಕ ಕೇಳಿ ಕೆಲನಿಮಿಷ ।
ತೊರೆದು ಭೂಷಣ ಕುಳಿತುಬಿಟ್ಟರು
ಹರುಷದಿಂ ರಾಚಪನವಗೆ
ಗುರುವರರು ಹೇಳಿದರು ತದುತ್ತರಿ ಕೊಟ್ಟನೀತನಿಗೆ ॥೪॥

ನಾನು ಸಾವಿತ್ರಿಯನು ಕೇಳ್ವದು
ಮಾಣದೇ ನೀವ್ ಕಳಿಸಿರೀತನ
ತಾನು ಕಲಿಯಲಿ ಮೂರು ವರ್ಷವು ಪುಣೆಯ ನಗರದಿ ।
ಮಾನಿಯೀರುದ್ರಪ್ಪ ತೇರ್ಗಡೆ
ತಾನು ಪಡೆವನು ತಪ್ಪದೆಂದಿಗೂ
ಕಾಣಿರೈ ಇಂಜನೀಯರ ಪರೀಕ್ಷೆಯ ಶಿವನ ದಯದಿಂದೆ ॥೫॥

ಆಗಲೀವಾರದಲಿ ಲಗ್ನವು
ಹೋಗಿಯೀಗಳೆ ಕಾಯಿ ಸಕ್ಕರೆ
ಬೇಗದೊಳು ನೀವ್ ಹಾಕಿಬಿಡಿರೆಂದುಸುರಿದರು ತಾವು ।
ಆಗಲೆಂದನು ತಾನು ರಾಚಪ
ಭೋ ಗುರುವೆ ಇವು ಮಳೆಯ ದಿನಗಳು
ಹೇಗೆ ಮಾಳ್ಪುದು ತಮಗೆ ಬರಲಿಕೆ ಕಷ್ಟವಾಗುವದು ॥೬॥

ಅರಿಯದವನೀ ಕೇಳು ರಾಚಪ
ತ್ವರದಿ ಮುಗಿಯುವದುಚಿತ ಲಗ್ನವು
ಸುರಿಯುತಿರಲ್ಕೆ ಮಳೆಯು ಬರುವೆನು ನಾನು ಲಗ್ನಕ್ಕೆ ।
ಅರುಹಿಯೀಪರಿ ಸ್ವಾಮಿರತ್ನರು
ಹರಕೆಯನು ಸರ್ವರಿಗೆ ಕೊಟ್ಟರು
ಸರುವರೂ ನಿರ್ಗಮನಗೈದರು ಧಾರವಾಡಕ್ಕೆ ॥೭॥

ಮುಗಿದು ಹೋಯಿತು ಲಗ್ನಕಾರ್ಯವು
ಜಗದಗುರುಗಳು ಹೇಳಿದಂದದಿ
ಮಿಗೆ ಸಮಾರೋಪದಲಿ ತಾನದು ಧಾರವಾಡದಲಿ ।
ಸುಗುಣೆಯಾಗಿಹ ಗಂಡ ಹೆಂಡಿರು
ಸೊಗಸಿನಿಂದಂ ಬಾಳ್ವೆ ಮಾಳ್ಪರು
ಮಿಗಿಲು ಸಿದ್ಧರ ದಯದೊಳೀಗಳು ಪಡೆದು ಮಕ್ಕಳನು ॥೮॥

ಹೊಟ್ಟೆ ಕಡಿತದ ಕೆಡಕು ಬೇನೆಯು
ಹುಟ್ಟಿ ರುದ್ರಪ್ಪನಿಗೆ ಭೀಕರ
ಪಟ್ಟನೈ ತಾಂ ಘೋರದುಃಖವನಾಯ್ತು ಕೆಲವರ್ಷ ।
ಇಟ್ಟು ಶ್ರೀಗಳ ಮೇಲೆ ನಂಬಿಗೆ
ಹೊಟ್ಟೆ ಆಪರೇಶನವ ಗೈಯಲು
ಬಿಟ್ಟು ಹೋಯಿತು ಬೇನೆ ಮೆಲ್ಲನೆ ಸ್ವಾಮಿಗಳ ದಯದೆ ॥೯॥

ಮಲಗಿದಾಗಾರೋಗ್ಯ ಭವನದಿ
ಚೆಲುಗುಣದ ರುದ್ರಪ್ಪ ಬೀಗನು
ಕೆಲವು ದಿನಗಳು ರಾಚಪನನಾಧಾರವಾಡದಲಿ ।
ಬಲುವು ಪೂಜ್ಯರು ಜಗದಗುರುಗಳು
ಬಲುಕರುಣದಿಂ ನೋಡ ಬಂದರು
ಬಳಿಯೊಳಗೆ ಕರಕೊಂಡು ಭಾವೀಜಗದಗುರುಗಳನು ॥೧೦॥

ನೋಡಿ ರುದ್ರಪ ವಾಸಿಯಾದದು
ಮಾಡಿದರು ವ್ಯಕ್ತವನು ತೋಷವ
ಮಾಡಿ ಹರಕೆಯ ರಾಚಪಗೆ ಮೇಣುಳಿದ ಸರ್ವರಿಗೆ ।
ಕೂಡಲೇ ಗಮಿಸಿದರು ತಮ್ಮಯ
ನಾಡಿನಲಿ ಕೀರ್ತಿಸಿದ ಮಠಕಾ
ಬೀಡು ಮಮತೆಯದಾದ ಯತಿಗಳು ದ್ವಯರು ಹರ್ಷದಲಿ ॥೧೧॥

ಇತ್ತು ಪರತರ ಭಕ್ತಿ ಯತಿಯಲಿ
ಚಿತ್ತದಲಿ ರಾಚಪನಂತೆಯೆ
ಮತ್ತೆಯರಳೀಕಟ್ಟಿಮನೆಯರ ಭಕ್ತಿ ನಿರುಪಮವು ।
ಇತ್ತು ಹಾಗೇ ಪ್ರೇಮ ಗುರುಗಳ
ಸತ್ತಮರದದು ಭಕ್ತಿರಿವರಲಿ
ಚಿತ್ತವಿಸಿರೈ ಶ್ರೋತ್ರಜನರೇ ಧನ್ಯರುಭಯತರು ॥೧೨॥

ಕಾಮಧೇನುವು ಕಲ್ಪವೃಕ್ಷವು
ಸ್ವಾಮಿವರ್ಯರು ಜಗದಗುರುಗಳು
ಸೀಮೆಯಿಗದ ಸಮರ್ಥರಾಗಿರೆ ತಾವು ನಿಜವಾಗಿ ।
ಈ ಮಹಾ ಸದ್ಭಕ್ತರಾಗಿಹ
ಪ್ರೇಮಮಯ ಮಾನಸದರಾಗಿಹ
ಧರ್ಮಭಕ್ತಿಯಿಡಾಗಿ ಹರಳೀಕಟ್ಟಿಮನೆಯವರಿಗೆ ॥೧೩॥

ಪಡೆದು ಲೇಸವನು ಶ್ರೀಗಳಿಂದಂ
ನಡೆದನೊಂದಿನ ತಾನು ರಾಚಪ
ಬಿಡದೆ ಬುಂದೆಯ ಬುಟ್ಟಿಯನು ಕಾರಿನೊಳಗಿಡಿಸಿದರು ।
ಕಡು ಮಮತೆಯಿಂ ಪೂಜ್ಯಪಾದರು
ಪಡೆದಿರಲು ರಾಚಪ ಮೊದಲೇ
ನೃಡನಿಗೆಣೆಯಾಗಿರುವ ಯತಿಯಿಂ ಹರಕೆ ಹಣ್ಣನ್ನು ॥೧೪॥

ಧಾರವಾಡಕೆ ಹೊರಡದಿನವಿರೆ
ಧೀರರಾಚಪ ತಾನು ಕಾರದಿ
ಘೋರವಿಷಮಾಸ್ಯದಿನಮೇಣಿರುಳು ಹೊತ್ತದವು ।
ದಾರಿಯಲಿಸಲೆ ಕಾಡಹತ್ತಿತು
ಕ್ರೂರಭೂತವು ರಾಚಪನನಾ
ಕಾರಿನಲಿ ತಾನೊಬ್ಬನಿದ್ದನು ಧನಿಯು ರಾಚಪನು ॥೧೫॥

ಬಳಿಕ ರಾಯಾಪುರದ ಬಳಿಯ
ಲ್ಲೆಳೆದು ಮೋಟಾರವನು ಭೂತವು
ಬಳಿಯಲಿರುವಾ ಕೊಳ್ಳದೊಳು ತಾನೊಯ್ದು ಕಸರಲಿ ।
ಸಲೆ ನಡಿಸಿಯದು ಹೋಗಿಬಿಟ್ಟಿತು
ಬಳಿಯೊಳಿರಲಾ ಹರಕೆ ಹಣ್ಣದು
ಬಲವದುವು ತಾಂ ಮಾಡಲಿಲ್ಲವು ರಾಚಪನಿಗೇನು ॥೧೬॥

ತಳೆದು ಧೈರ್ಯವ ಮೇಲೆ ಬಂದನು
ಬಳಿಕ ರಾಚಪ ಹೋದನೂರಿಗೆ
ತುಳಿದು ದಾರಿಯ ಬಿಟ್ಟು ಮೋಟಾರವನು ಕೊಳ್ಳದಲಿ ।
ಘಳಿಲನೇ ತಾಂ ಫೋನದಿಂದಂ
ತಿಳಿಸಿದನು ತಪೆ ನಡೆದ ಸಂಗತಿ
ಜಲಜಸಮ ಮೃದುವಾದ ಮನಸಿನ ಜಗದಗುರುಗಳಿಗೆ ॥೧೭॥

ಮಲಗಿದಾಗಾರೋಗ್ಯ ಭವನದಿ
ಚೆಲುಗುಣದ ರುದ್ರಪ್ಪ ಬೀಗನು
ಕೆಲವು ದಿನಗಳು ರಾಚಪನನಾಧಾರವಾಡದಲಿ ।
ಬಲುವು ಪೂಜ್ಯರು ಜಗದಗುರುಗಳು
ಬಲುಕರುಣದಿಂ ನೋಡ ಬಂದರು
ಬಳಿಯೊಳಗೆ ಕರಕೊಂಡು ಭಾವೀಜಗದಗುರುಗಳನು ॥೧೦॥

ನೋಡಿ ರುದ್ರಪ ವಾಸಿಯಾದದು
ಮಾಡಿದರು ವ್ಯಕ್ತವನು ತೋಷವ
ಮಾಡಿ ಹರಕೆಯ ರಾಚಪಗೆ ಮೇಣುಳಿದ ಸರ್ವರಿಗೆ ।
ಕೂಡಲೇ ಗಮಿಸಿದರು ತಮ್ಮಯ
ನಾಡಿನಲಿ ಕೀರ್ತಿಸಿದ ಮಠಕಾ
ಬೀಡು ಮಮತೆಯದಾದ ಯತಿಗಳು ದ್ವಯರು ಹರ್ಷದಲಿ ॥೧೧॥

ಇತ್ತು ಪರತರ ಭಕ್ತಿ ಯತಿಯಲಿ
ಚಿತ್ತದಲಿ ರಾಚಪನಂತೆಯೆ
ಮತ್ತೆಯರಳೀಕಟ್ಟಿಮನೆಯರ ಭಕ್ತಿ ನಿರುಪಮವು ।
ಇತ್ತು ಹಾಗೇ ಪ್ರೇಮ ಗುರುಗಳ
ಸತ್ತಮರದದು ಭಕ್ತರಿವರಲಿ
ಚಿತ್ತವಿಸಿರ್ರೈ ಶ್ರೋತ್ರಜನರೇ ಧನ್ಯರುಭಯತರು ॥೧೨॥

ಕಾಮಧೇನುವು ಕಲ್ಪವೃಕ್ಷವು
ಸ್ವಾಮಿವರ್ಯರು ಜಗದಗುರುಗಳು
ಸೀಮೆಯಿಗದ ಸಮರ್ಥರಾಗಿರೆ ತಾವು ನಿಜವಾಗಿ ।
ಈ ಮಹಾ ಸದ್ಭಕ್ತರಾಗಿಹ
ಪ್ರೇಮಮಯ ಮಾನಸದರಾಗಿಹ
ಧರ್ಮಭಕ್ತಿಯಡಾಗಿ ಹರಳೀಕಟ್ಟಿಮನೆಯುವರಿಗೆ ॥೧೩॥

ಪಡೆದು ಲೇಸವನು ಶ್ರೀಗಳಿಂದಂ
ನಡೆದನೊಂದಿನ ತಾನು ರಾಚಪ
ಜಿಡದೆ ಬುಂದೆಯ ಬುಟ್ಟಿಯನು ಕಾರಿನೊಳಗಿಡಿಸಿದರು ।
ಕಡು ಮಮತೆಯಿಂ ಪೂಜ್ಯಪಾದರು
ಪಡೆದಿರಲು ರಾಚಪ ಮೊದಲೇ
ಮೃಡನಿಗೆಣೆಯಾಗಿರುವ ಯತಿಯಿಂ ಹರಕೆ ಹಣ್ಣನ್ನು ॥೧೪॥

ಧಾರವಾಡಕೆ ಹೊರಡದಿನವಿರೆ
ಧೀರರಾಚಪ ತಾನು ಕಾರದಿ
ಘೋರವಿಷಮಾಸ್ಯದಿನಮೋಣೆರುಳು ಹೊತ್ತದವು ।
ದಾರಿಯಲಿಸಲೆ ಕಾಡಹತ್ತಿತು
ಕ್ರೂರಭೂತವು ರಾಚಪನನಾ
ಕಾರಿನಲಿ ತಾನೊಬ್ಬನಿದ್ದನು ಧನಿಯು ರಾಚಪನು ॥೧೫॥

ಬಳಿಕ ರಾಯಾಪುರದ ಬಳಿಯ
ಲ್ಲೆಳೆದು ಮೋಟಾರವನು ಭೂತವು
ಬಳಿಯಲಿರುವಾ ಕೊಳ್ಳದೊಳು ತಾನೊಯ್ದು ಕಸರಲಿ ।
ಸಲೆ ನಡಿಸಿಯದು ಹೋಗಿಬಿಟ್ಟಿತು
ಬಳಿಯೊಳಿರಲಾ ಹರಕೆ ಹಣ್ಣದು
ಬಲವದುವು ತಾಂ ಮಾಡಲಿಲ್ಲವು ರಾಚಪನಿಗೇನು ॥೧೬॥

ತಳೆದು ಧೈರ್ಯವ ಮೇಲೆ ಬಂದನು
ಬಳಿಕ ರಾಚಪ ಹೋದನೂರಿಗೆ
ತುಳಿದು ದಾರಿಯ ಬಿಟ್ಟು ಮೋಟಾರವನು ಕೊಳ್ಳದಲಿ ।
ಘಳಿಲನೇ ತಾಂ ಫೋನದಿಂದಂ
ತಿಳಿಸಿದನು ತವೆ ನಡೆದ ಸಂಗತಿ
ಜಲಜಸಮ ಮೃದುವಾದ ಮನಸಿನ ಜಗದಗುರುಗಳಿಗೆ ॥೧೭॥

ಮತ್ತೆ ಮನದಲಿ ಪುಟ್ಟಿ ಬಯಕೆಯು
ಪೆತ್ತಗಿನ ಮಾನಸದ ರಾಜಪ
ಬಿತ್ತರದೆ ಗುರುಪರರ ದರ್ಶನಕಾಗಿ ಸಾಗಿದನು ।
ಹತ್ತಿ ಮೋಟಾರವನು ಬೇರೆ
ಕುತ್ತಿಗಂಜದೆ ಗಮಿಸುವಾಗಾ
ಗಿತ್ತು ನಟ್ಟಿರುಳಿತ್ತು ಕತ್ತಲೆ ಭೀಕರವು ತಾನು ॥೧೮॥

ಬರುವನಿತರೊಳು ತಾನು ರಾಜಪ
ಗುರುವರರ ನಾಮವನು ಸ್ಮರಿಸುತೆ
ಹರುಷದಿಂ ಗುರುರಾಜ ಬಂದರು ತಾವು ಕಾರಿನೊಳು ।
ದೊರೆದರ್ಕೆ ಯತಿವರರು ರಾಯಾ-
ಪುರದ ಸನ್ನಿಧಿ ರಾಜಪನಿಗಾ
ಹರುಷವಾಯಿತು ಸ್ವಾಮಿಯವರಿಗೆ ಮತ್ತೆ ಭಕ್ತನಿಗೆ ॥೧೯॥

ಇಳಿದು ತಾವ್ ಮೋಟಾರದಿಂದಂ
ಬಳಿಕ ಹೋದರು ಕೊಳ್ಳದೊಳಗಾ
ಬಲುಹು ಕಷ್ಟದೆ ತೆಗೆದುತಂದರು ಕಾರವನು ಮೇಲೆ ।
ಕೆಲವರಿದ್ದರು ಯತಿಯ ಜತೆಯಲಿ
ಸಲೆ ಪ್ರಯತ್ನವಗೈದರವರೇ
ಬಲವಿರಲು ಶ್ರೀ ಪೂಜ್ಯಪಾದರ ವಿಪದವುಳಿಯುವದೆ ॥೨೦॥

ಕಳಿಸಿಕೊಟ್ಟನು ನಮಿಸಿ ಗುರುಗಳ
ಬಳಿಕ ಹೋದನು ಧಾರವಾಡಕೆ
ಬಲು ಹುರುಪಿನಿಂದರಳೀಕಟ್ಟಿ ಧನಿಕ ರಾಜಪನು ।
ಕಳೆಯುತಿದ್ದರು ವಿಪದ ಸರ್ವರ
ಬಲು ಮಮತೆಯಿಂ ಪರಮ ಸಿದ್ಧರು
ಕಳೆಯುತಿದ್ದರು ಸತತ ಸಮಯ ಪರೋಪಕಾರದಲಿ ॥೨೧॥

ಕಲಿಯದೇ ಸಾಲೆಯಲಿ ಹೆಚ್ಚಿಗೆ
ಸಲೆ ಬರೆಯಲಿಕೆ ವಾಚಿಸಲು ವೇಣ್
ಚೆಲುವು ಬರುವುದು ಮಾತನಾಡಲು ತಾನು ರಾಚಪಗೆ।
ಲಲಿತವಾಗಿಪ ಕನ್ನಡವು ಮೇಣ್
ಸುಲಭವಿಪ ಹಿಂದೀ ಮರಾಠಿಯು
ಬಲುವು ಕೀರ್ತಿಯನಾಂತ ಲೋಕದೊಳಿಂಗ್ಲಿಷವು ತಾನು ॥೨೨॥

ಗುರುವರರು ಹೇಳಿದರೈ ತಾವ್
ಬರುವವೈ ರಾಚಪ ನಿನಗೆಲೊ
ಬರೆಯಲೋದಲು ಮಾತನಾಡಲು ನಾಲ್ಕು ಭಾಷೆಗಳು।
ಹರನ ಕರುಣದೆ ಸಾಲೆ ಕಲಿಯದೆ
ಸರುವ ವ್ಯವಹಾರೋಪವಾಗಲು
ಹರಿಸಿ ಪೇಳಿದ ತೆರದಿ ಗುರುಗಳು ಬರುವವಾತನಿಗೆ ॥೨೩॥

ಪಡೆದವರು ವಾಕ್ ಸಿದ್ಧಿಯನು ತಾವ್
ಪ್ರೈಡನ ರೂಪ್ವರು ಜಗದಗುರುಗಳು
ಹಿಡಿದ ಕೆಲಸವ ಬಿಡದೆ ಕಡೆಗಾಣಿಸಲು ಬಲಯುತರು।
ದುಡಿಸಿದರು ಮನವನ್ನು
ನಿರುತವು ಕಡು ವಿನಯಿಗಳು
ಜನರ ಕಲ್ಯಾಣಾರ್ಥವನು ದಿನವು ॥೨೪॥

ಶ್ರೀ ಜಗದ್ಗುರುಗಳ ಪದಾಬ್ಜದಿ
ನೈಜ ನಿಷ್ಠಾಯುಕ್ತನಾಗಿಪ
ರಾಜಿಸುತ್ತಿ ಧನಿಕ ಶಿವರುದ್ರಪ್ಪನೆಂಬವನು।
ಸಾಜವಂತನು ವಾಸಿಸುವನಾ
ರಾಜಿಸುವ ಹುಬ್ಬಳ್ಳಿ ನಗರದಿ
ಮೂಜಗದ ಪತಿ ದಯದೆ ಸುಖದಿಂ ತಾನು ಶ್ರೀಯುತನು ॥೨೫॥

ಅಕ್ಕಿಯೆಂಬುಪನಾಮ ಯುಕ್ತನು
ಕಕ್ಕುಲತೆ ಮಗನಾಗಿರುವನೈ
ಚೊಕ್ಕ ನಡತೆಯ ತಾನು ಉಳುವಪ್ಪನೆಂಬ ಸಜ್ಜನನ ।
ಮಕ್ಕಳಾಗಿರಲಿಲ್ಲ ವೀತ
ಗಕ್ಕ ನಾಗಮ್ಮನೆಂಬ ಸತಿಯೀ
ತಕ್ಕವಳು ತಾನಿರುವಳಿವನಿಗೆ ನೀತಿ ಭೂಷಿತೆಯು ॥೨೬॥

ಕರೆದು ಮಕ್ಕಳಂ ಕೊಟ್ಟರೀತಗೆ
ಗುರುವರೇಣ್ಯರು ಜಗದುಗುರುಗಳು
ಹರುಷದಿಂ ಕುಳಿತಿರುವ ಸಮಯದಿ ತಾವು ಮಠದಲ್ಲಿ ।
ಎರಗಿದನು ತಾಂ ಬಂದು ಯತಿಗಳ
ಚರಣ ಕಮಲಕೆ ಭಕ್ತಿಯಿಂದಂ
ಹರುಷದಿಂ ಮೇಣ್ ತರುಣ ಶಿವರುದ್ರಪ್ಪ ಧನಯುತನು ॥೨೭॥

ಕೇಳಿದರು ತಾವ್ ರಾಜ ರಾಜರು
ಹೇಳುನಿನಗಾಗಿಷವೆ ಮಕ್ಕಳು
ಬಾಲಕರು ತಾವಿದ್ದರೇನೆ ಮನೆಯು ಶೋಭಿಪದು ।
ಹೇಳಿದನು ಗುರುಗಳಿಗೆ ವಿನಯದೆ
ಶೀಲಯುತ ಶಿವರುದ್ರಪ್ಪನು ತಾಂ
ಕೇಳುವದು ಶ್ರೀ ಪೂಜ್ಯಪಾದಕೆ ಮಕ್ಕಳಿಲ್ಲೆನಗೆ ॥೨೮॥

ಬರುವರೇ ಗುರುಸಿದ್ಧ ಗುರುಗಳ
ದರುಶನಕೆ ಗದ್ದಿಗೆಯ ನಿಮ್ಮಯ
ಧರುಮ ಪತ್ನಿಯು ಮಠದೆ ನಮ್ಮಯ ಕೇಳಿದರು ಸ್ವಾಮಿ ।
ಬರುವಳೆಂದಳು ತಾನು ಧನಿಕನು
ಗುರುಗಳೆಂದು ಒನ್ನಿರಿಬ್ಬರು
ಹರಕೆಕೊಡುವೆನು ಶಿವನ ಕರುಣದೆ ಮಕ್ಕಳಾಗುವವು ॥೨೯॥

ಬಂದರಾತರುವಾಯ ಸತಿಪತಿ
ಹೊಂದಿ ಸಂತೋಷವನು ಗುರುಗಳ
ಚಂದವಿಹ ಪಾದಕೆ ವಂದನೆ ಗೈದರೈ ಅವರು ।
ನಂದದಿಂದಂ ಹರಕೆ ಕೊಟ್ಟರು
ಬಂಧುರರು ವರ ಸಿದ್ಧಪುರುಷರು
ಕುಂದಿರದ ಸಚ್ಚರಿತರಾಗಿಹ ಜಗದಗುರುವರರು । ॥೩೦॥

ಕರಸಿ ಮಠದಲ್ಲಿರುವ ವೈದ್ಯನ
ಕರುಣದಿಂ ರುದ್ರಯ್ಯ ನೀತನ
ಹರುಷದಿಂದರಹಿದರು ಕೊಡಲಿಕೆ ಮಕ್ಕಳಾಗಲಿಕೆ ।
ಗುರುವರೇಣ್ಯರು ಭೇಷಜವನಾಂ
ತರುಣ ಧನಿಕನ ಧರ್ಮಪತ್ನಿಗೆ
ಪರಮ ಯತಿಗಳು ಹೇಳಿದಂದದಕೆ ಕೊಟ್ಟನೌಷಧವ ॥೩೧॥

ಹರಣಗೈದವರಿವರು ಹಲವರ
ಹರಕೆಯಿಂದಂ ಬಂಜೆ ತನವನು
ಪರಮ ಪೂಜ್ಯರು ವೈದ್ಯಯನು ಪ್ರೋತ್ಸಾಹಿಸಲು ಹಾಗೆ ॥
ಹರುಷದಿಂ ಔಷಧವ ಕೊಡಲಿ
ಕ್ಕೊರೆದರೈ ತಾವು ವೈದ್ಯನಾತಗೆ
ತರಣಿಯೊರೆದೊಲು ಬೆಳಕ ನೀಡಲು ತಾನು ಮನುಜರಿಗೆ ॥೩೨॥

ಮಕ್ಕಳಾದವು ಸಾವುಕಾರಗೆ
ಕುಕ್ಕಿಸುವ ಕಣ್ಗಳನು ಸಕಲರ
ಚೊಕ್ಕ ಕೀರ್ತಿಯು ದೀಪ್ತಿಯಿಂದಂ ಯತಿಯ ಹರಕೆಯೊಲು ।
ಅಕ್ಕರದೆ ಮೇಣ್ ಪದುಳದಿಂದಂ
ಸೊಕ್ಕು ಗೊತ್ತಿರದಿದ್ದ ಧನಿಕನು
ತಕ್ಕ ಮಾರ್ಗದೆ ಸಾಗುವಾತನು ಬಾಳ್ವೆ ಮಾಡುವನು ॥೩೩॥

ಹಿಂದೆ ಹೇಳಿದ ಹಾಗೆ ನಾನಿಮ
ನಿಂದು ಪೇಳ್ವೆನು ಬಸವದೇವನ
ಮುಂದಣ ಸು ಕಥೆಯ ಬಹು ಸಂಕ್ಷೇಪದೊಳು ಜನರೇ ।
ನಂದದಲಿ ಕೇಳ್ವರೇ ಭಕ್ತರೆ
ತಂದೆ ಬಸವನು ಜಂಗಮಾವಳಿ
ಗೊಂದು ದಿನ ಸಹ ಬಿಡದೆ ಲಕ್ಷಾಂತರ ಜನಕೆ ತಾನು । ॥೩೪॥

ಭೋಜನವ ಸಲ್ಲಿಸುತಲಿರುವದು
ರಾಜರುಣ್ಣುವ ತೆರದ ಭೋಜನ
ಸೋಜಿಗವ ಸಲೆ ಹೊಂದಿ ಬಸವನ ವೈರಿಗಳು ತಾವು ।
ರಾಜನಿಗೆ ಬಿಜ್ಜಳಗೆ ಪೇಳ್ದರು
ರಾಜನೇ ತವ ಮಂತ್ರಿ ಬಸವನು
ಸಾಜವಿದು ತವ ಧನದ ಕೋಶವ ಹಾಳುಮಾಡುವನು ॥೩೫॥

ಉಣ್ಣಿಸುವನ್ನೈ ಲಕ್ಷಗಟ್ಟಲೆ
ಗನ್ನ ಮಂತ್ರಿಯು ಜನಕೆ ಭೋಜನ
ಚೆನ್ನವಾದುದು ನೀನು ಭೋಜನ ಮಾಡುವಂತಹದು ।
ನಿನ್ನ ಸೇವಕನವನು ಮಾಡುವ
ಗನ್ನ ವ್ಯಯ ನಿನ್ನಂದಲಾಗದು
ಕಣ್ಣುಗಳ ತೆರೆದಿನ್ನು ನೋಳ್ಪುದ ಬಸವನಾಟವನು ॥೩೬॥

ಸಂಬಳವ ನೀ ಕೊಡುವದನಿತಾ
ಸಂಬಳದೆ ತಾನಾಗುತಿಪುದೇಂ
ನಂಬಿಯವನನು ಹಣದ ಕೋಶವನವನಿಗೆ ಗೊಪ್ಪಿಸಿದೆ ।
ನಂಬಿರುವೆ ನೀ ಹಿರಿಯ ಕಳ್ಳನ
ನಂಬಿ ಕಳ್ಳಗೆ ಕೊಟ್ಟಿರುವೆ ನೀ
ತುಂಬಿದಂತಹ ಹಣದ ಮನೆಯಾ ಬೀಗಕೈಯನ್ನು ॥೩೭॥

ನೋಡು ರಾಜನೆ ಹೋಗಿ ನೀನೆ
ನೋಡು ಕೋಶದೊಳುಳಿದಿಹುದೆ ಧನ
ನೋಡಿದೊಡನೆಯೆ ತಿಳಿದು ಬರುವದು ಹಣವವು ಹೋದುದು ।
ಜಾಡಿ ಪೇಳ್ವರ ಮಾತು ತೋರಿತು
ನಾಡೆ ಸತ್ಯವು ಬಿಜ್ಜಳರಸಗೆ
ಕೂಡಲೇ ತಾಂ ಕರೆಸಿ ಬಸವನ ಬಸವಗುಸುರಿದನು ॥೩೮॥

ಕೇಳು ಮಂತ್ರಿಯೆ ನೀನು ನಿತ್ಯವು
ಕೂಳು ಸಲ್ಲಿಪೆಯಂತೆ ಜನರಿಗೆ
ಮೇಲು ಮೃಷ್ಟಾನ್ನವನು ಲಕ್ಷಾಂತರರಿಗದ ನಿಜವೇ ।
ಹೇಳಿದನು ಮಂತ್ರೀಶ ಬಸವನು
ಕೇಳಿದುದು ನೀವ್ ಸತ್ಯವಿರುವದು
ಕೇಳಿದನು ಭೂಪತಿಯು ವ್ಯಯವದು ಸಾಗಿಸುವೆ ಹೇಗೆ ॥೩೯॥

ಹಾಳು ಮಾಡುವೆ ನನ್ನ ಧನವನು
ತಾಳಿ ವಿಶ್ವಾಸವನು ನಿನ್ನೊಳು
ಕೀಲಿಕೈಯನು ಕೊಟ್ಟೆನೈ ನಾಂ ಕೋಶದಾ ಹಣದ ।
ಸಾಲುವದೆ ನಾನೀವ ಸಂಬಳ
ಮೇಲು ಭೋಜನ ನೀನು ಸಲ್ಲಿಪ
ಹೇಳು ಲಕ್ಷಾಂತದ ಜನರಿಗೆ ನಿತ್ಯವೂ ನೀನು ॥೪೦॥

ಹೇಳಿದನು ಬಿಜ್ಜಳಗೆ ಬಸವನು
ತಾಳದಿರಿ ನೀವ್ ಮುನಿಸು ಸುಮ್ಮನೆ
ಸಾಲುವೊಲ್ ನಾ ಮಾಳ್ಪವ್ಯಕೆನಗೀಯುಪನು ತಾನು ।
ಕೇಳುವದು ಶ್ರೀ ಸಂಗಮೇಶನು
ತಾಳದಿರಿ ಸಂಶಯುವ ಮನದಲಿ
ಕೇಳಿ ಬಸವನ ಮಾತು ನೃಪತಿಯು ಲೆಕ್ಕವಿದ್ದನಿತು ॥೪೧॥

ತೋರಿಸಲು ನಡೆ ಧನದ ಕೋಶಕೆ
ಭೂರಿ ತೋಷದೆ ಬಸವ ತದುಪಲಿ
ತೋರಿಸುವನ್ಯೆ ಬನ್ನಿರೆಂದನು ತಾನು ಭೂಪತಿಗೆ ।
ತೋರಿಸಿದನುರೆಲೆಕ್ಕದೊಲು
ಧೀರ ಬಸವನು ರತ್ನಗಳ ಮೇಣ್
ತೋರಿಸಿದನ್ಯೆ ಬೆಳ್ಳಿ ಹೊನ್ನಾದಿಗಳ ಧನವೆಲ್ಲಾ ॥೪೨॥

ಮಾಡಿರಲು ಶೋಧವನು ಕೆಲವರು
ನಾಡೆ ಲೆಕ್ಕವನೆಂಟ್ಟು ದಿವಸವು
ಮಾಡಿದನು ಬಿಜ್ಜಳನು ಪಲದಿನವೆಣಿಕೆ ಧನವೆಲ್ಲಾ ।
ನೋಡಿ ಧನದಲಿ ಕೊರತೆಯಿಲ್ಲದು
ನಾಡೆ ಬಿಜ್ಜಳ ನಾಚಿ ಮನದೊಳು
ಕೂಡಲೇ ಬಸವನಿಗೆ ಪೇಳ್ದನು ತಪ್ಪು ಕ್ಷಮಿಸೆಂದು ॥೪೩॥

ಬಸವ ದೇವನು ನುಡಿದನಾ ಮೇಲ್
ವಸುಮತೀಶಗೆ ಪರರ ಧನವನು
ಕಸದ ಸರಿಯೆಣಿಸುವೆನು ಬೇಕಾಗಿಲ್ಲ ಧನ ನಿಮ್ಮ ।
ಅಸಮ ಶಕ್ತನು ಸಂಗಮೇಶನು
ನಸುವು ಕೊರತೆಯು ವ್ಯಯಕೆ ನನ್ನಯ
ಪಶುಪತಿಯು ತಾಂ ಬೀಳದೊಲು ನನಗೀಯುವನು ಧನವ ॥೪೪॥

ಮುಗಿದು ಹೋಯಿತು ಮಾತು ತಾನದು
ಹೊಗಳಿದರು ಪ್ರಜರೆಲ್ಲರು ಬಸವನ
ತೆಗಳಿದರು ಬಲು ಚಾಡಿ ಪೇಳ್ವರ ನಿಖಿಲ ಜನರಾಗೆ ।
ಜಗಕೆ ಪೂಜ್ಯನು ಬಸವದೇವನು
ಜಗವನುದ್ಧರಿಸಲಿಕೆ ಜನ್ಮಿಸಿ
ಜಗದೊಳೀ ಸಾರಿರುವ ಜಗದೀಶ್ವರನು ನಿಜವವನು ॥೪೫॥

ಕಂಡು ಬಸವನ ಶರಣ ಹರಳಯ್ಯ
ನುಂಡವೋಲ್ ಸುಧೆ ಹರ್ಷಬಟ್ಟನು
ಮಂಡೆಬಾಗಿಸಿ ಪಾವನಗೆ ಶರಣಾರ್ಥಿಯೆನಲಾಗೆ ।
ಪಂಡಿತನು ಘನ ಧರ್ಮದರಿವಿನ
ಗಂಡುಗಲಿ ತಾನಾದ ಬಸವನ
ಖಂಡ ಮೋದದೆ ಶರಣು ಶರಣಾರ್ಥಿಯೆನೆ ಹರಳನಿಗೆ ॥೪೬॥

ಅಧಿಕವಾದದ್ದೊಂದು ಬಸವನ
ಸದಯನಾ ಶರಣಾರ್ಥಿಯನು ತಾಂ
ಚದರು ಹರನು ಮುಟ್ಟಿಸಲು ಸಲೆಗೈದನೈ ತಾನು ।
ಮುದದೆ ಜೋಡನು ಚನ್ನವಾಗಿರು
ವದಕೆ ತನ್ನಯ ತನ್ನ ಪತ್ನಿಯು
ತೆಗೆದು ತೊಗಲನು ತೊಡೆಯ ತುಸು ಹಚ್ಚಿದನು ಜೋಡಕ್ಕೆ ॥೪೭॥

ತೆಗೆದು ಕೊಂಡವುಗಳನು ಹೋದನು
ಜಗದ ಜ್ಯೋತಿಯ ಬಸವರಾಜನ
ಮಿಗೆ ಮಮತೆಯಿಂದಿಟ್ಟು ಮುಂಗಡೆ ಜೋಡಹರಳಯನು ।
ಮುಗಿದು ಕೈಗಳನಣ್ಣ ಬಸವಗೆ
ಸಗುಣ ಮಣಿಗಳೆ ಮೆಡಿರಿಯಿವುಗಳೆ
ನಗುತೆ ಮೆಲ್ಲಗೆ ಹರಳನೆಂದನು ನಮ್ಮ ಭಾವದೊಳು ॥೪೮॥

ತಿಳಿಯಿತಾಗಳೆ ಬಸವ ಸೂರ್ಯಗೆ
ಸಲೆ ಶರಣು ಹರಳಯ್ಯ ತನ್ನಯ
ಚೆಲುವೆ ತನ್ನಯ ಸತಿಯ ತೊಡೆಗಳ ಚರ್ಮವನ್ನವಕೆ ।
ಬಲು ಮಮತೆಯಿ ಹಚ್ಚಿದಂಥದು
ಬಳಿಕ ನುಡಿದನು ಶರಣರೇ ಇದು
ಕಳೆಯಲಾಗದು ನಿಮ್ಮಯುಪಕೃತಿ ಹಲವು ಜನ್ಮದೊಳು ॥೪೯॥

ನುಡಿದು ಬಸವನು ತಾನು ತೆರನೀ
ಕಡು ವಿನಯದಿಂ ಶರಣ ಹರಳಿಗೆ
ಬಿಡದೆ ಕಣ್ಣೀರುದಿರುಸುತ್ತಲೆ ನುಡಿದನೈ ಮತ್ತೆ ।
ಮೆಡಲಿಕಿವುಗಳು ಸಂಗಮೇಶನೆ
ಪೊಡವಿಯೊಳು ತಕ್ಕವನು ಶರಣರೆ
ಮೆಡಲು ತಕ್ಕವರಲ್ಲ ಮನುಜರು ನುಡಿದು ತಾನಿಂತು ॥೫೦॥

ಉದುರಿಸುತೆ ಕಣ್ಣೀರ ನಿಂತನು
ವಿದಿತವಾಯಿತು ಶರಣ ಹರಳಿಗೆ
ನಿಧಿಯು ಕರುಣೆಯ ಬಸವರಾಜನು ಮೆಡನು ಜೋಡೆಂದು ।
ಚದುರ ಶರಣನು ಜೋಡನವುಗಳ
ಪದುಳವಿಲ್ಲದ ಮನದೆ ಕೊಂಡನು
ಮುದದೆ ಬಸವಗೆ ಮುಗಿದು ಕೈಗಳ ಸಾಗಿದನು ಮನೆಗೆ ॥೫೧॥

ವಾರಿಯಲಿ ಮಧುವರಸನೆಂಬುವ
ಹಾರುವನು ತಾಂ ನೋಡಿ ಶರಣನ
ದೂರದಲಿ ಹೋಗುವನ ಬಳಿಯಿಹ ಜೋಡ ನೋಡಿದನು ।
ಧೀರ ಶರಣನ ಕರೆದನಾಗಳು
ಕಾರುಣಿಕ ತಾಂ ಬಂದು ಬಿಟ್ಟನು
ಭೂರಿ ಗರ್ವದೆ ಜೋಡು ಬೇಕೆನಗೆಂದು ಹೇಳಿದನು ॥೫೨॥

ಆಗಳಾ ಹರಳಯ್ಯ ಪೇಳ್ದನು
ಸಾಗಲಾರವು ನಿಮಗೆ ಜೋಡಿವು
ತ್ಯಾಗಿ ಜನ ಶಿವಶರಣರೆ ತಾವ್ ಮೆಡಲು ತಕ್ಕವರು ।
ಆಗಲಾರೆವು ನಾವು ಯೋಗ್ಯರು
ಹೀಗೆ ಪೇಳ್ದೊಡೆ ಕೇಳ್ವೆನೇ ನಾಂ
ಸಾಗಲಾರದು ನಿನ್ನ ಜಂಭವು ನನ್ನ ಮುಂದೆಂದೂ ॥೫೩॥

ಕೊಡು ನನಗೆ ಬೆಲೆ ಕೊಡುವೆನವುಗಳ
ಕಡು ಮುನಿಸಿನಿಂ ಮದುವರಸ ತಾಂ
ನುಡಿದ ಕೂಡಲೆ ಶರಣನೆಂದನು ಬೆಲೆಯ ಬೇಡೆನಗೆ ।
ಮಡಿರಿ ದೊರೆಗಳೆ ಮಚ್ಚಿಯಿವುಗಳ
ನುಡಿದು ಪರಿಯೀ ಜೋಡನಿತ್ತನು
ಹಿಡಿದು ತನ್ನಯ ದಾರಿ ಹೋದನು ಶರಣ ಹರಳಯನು ॥೫೪॥

ಮೆಟ್ಟ ಕೂಡಲೆ ಜೋಡನವುಗಳ
ದಿಟ್ಟ ಪಾರ್ವನು ಮೈಗೆ ಬೆಂಕಿಯು
ನಿಟ್ಟ ತೆರ ತಾನಾಗಿ ಬಿಟ್ಟಿತು ಕೆಟ್ಟನೆ ನಲವನು ।
ಬಿಟ್ಟು ಹೋಯಿತು ಗರ್ವವವನದು
ಹುಟ್ಟಿತೈ ಸದ್ಬುದ್ಧಿ ತದುಪರಿ
ಗಟ್ಟಿದುವು ಶಿವಶರಣ ಹರಳಯ ಶ್ರೇಷ್ಠನಾಗಿಹನು ॥೫೫॥

ಎಂದು ತನ್ನೊಳು ತಿಳಿದುಕೊಂಡನು
ಬಂದು ಜ್ವರ ಮಲಗಿದನು ಕೂಡಲೆ
ಮುಂದೆ ನಾನಿನ್ನೇನು ಮಾಡಲಿ ಸಾವು ಬಂತೆಂದು ।
ಹೊಂದಿ ದಾರುಣ ಚಿಂತೆಯಾತನು
ಮುಂದೆ ನಿಂದಿಹ ಕೂಲಿಯವಳನು
ಬಂದುರಾಗ್ರಣಿ ಬಸವ ಮಂತ್ರಿಯ ಕೇಳಕಳಿಸಿದನು ॥೫೬॥

ನಡೆದ ಸಂಗತಿ ಪೇಳಿಯವಳಿಗೆ
ಪಡೆಯಲಿಕೆ ಗುಣಮಾಳ್ಪುದೇನದು
ಗಡನೆಯವರಿಂ ಕೇಳಿಬರಲಿಕೆ ತಿಳಿಸಿದನು ತಾನು ।
ಮೃಡನ ಭಕ್ತಳು ಲಿಂಗವಂತಳು
ಕಡು ಸುಶೀಲೆಯು ಕೂಲಿಯವಳಿರೆ
ಬಿಡದೆ ಮುಖದಿಂ ಶಿವನ ಸ್ಮರಿಸುತೆ ಬಸವನಾಲಯಕೆ ॥೫೭॥

ಹೋಗಿ ಬಸವನ ಕಣ್ಣೆಯಾದಳು
ಬಾಗಿ ಕೈಗಳ ಮುಗಿದು ಪೇಳ್ದಳು
ತ್ಯಾಗವೀರಗೆ ಸರ್ವ ಸಂಗತಿ ತಿಳಿಸಿದಳು ತಾನು ।
ಆಗ ಪೇಳ್ದನು ಅಣ್ಣ ಬಸವನು
ಹೋಗುವದು ರುಜೆ ಪರಳ ಶರಣನ
ಹೋಗಿ ಭಾವಿಗೆ ನೀರ ತಂದಾ ನೀರಿನಿಂದವನು ॥೫೮॥

ಶಿವನ ನಾಮಸ್ಮರಣೆ ಮಾಡುತೆ
ಭವಿಯು ಮಾಡಲಿ ಸ್ನಾನವನು ತಾಂ
ಜವದೆ ಗುಣ ಹೊಂದುವನು ಬಿಡದಲೆ ಹೇಳು ಹೀಗವಗೆ ।
ಅವಿರಳಾನಂದದೊಳು ಬಂದಾ
ಸವಿನಯದೆ ತನ್ನೊಡೆಯ ಗೊರೆದಳು
ಭುವಿಯ ಮೇಲಣ ಸಾಂಬನಾಗಿಹ ಬಸವ ಪೇಳಿದುದು ॥೫೯॥

ಕೇಳಿಕೊಂಡನು ಬಸವ ಪೇಳ್ದುದು
ತಾಳಿ ಧೈರ್ಯವ ಶರಣ ಪರಳನ
ಹೇಳಿದನು ತರಲಿಕ್ಕೆ ಬಾವಿಯ ನೀರನಾ ಸತಿಗೆ ।
ಕಾಲು ದೆಗೆಯಿತು ನಾನು ಶ್ರೇಷ್ಠನು
ಕೀಳ ನಾ ಸಮಗಾರ ಹರಳಯು
ತಾಳಿದೀಯಭಿಮಾನವಾತನ ವಿಪದ ಕಾಲದೊಳಾ ॥೬೦॥

ತಂದಳಾಕೆಯು ನೀರ ಸತ್ವರ
ತಂದ ನೀರಿಂ ಸ್ನಾನ ಗೈದನು
ಮಂದಮತಿ ಮಧುವರಸ ಪಾರ್ವರ ಕೂಡಲೇ ಅವನು ।
ಹೊಂದಿದನು ಗುಣ ಬಳಿಕವವನೊಳು
ಹೊಂದಿತುದ್ಭಾವ ಭಕ್ತಿ ಹರಳನಂದು
ಕೊಡ ಬಯಸಿದನು ಹರಳನ ಸುತಗೆ ಮಗಳನ್ನ ॥೬೧॥

ಮತ್ತೆ ಮುಂದಣ ಸಂಧಿಯೊಳು ನಾ
ನುತ್ತಮನ ಶ್ರೀ ಬಸವರಾಜನ
ಚಿತ್ತವಿಸಿರ್ಪೆ ಮಿಕ್ಕ ಕಥೆಯನು ಕಥಿಸುವೆನು ಮುದದೆ ।
ಚಿತ್ತ ತಾಂ ಸಚ್ಛಾಂತಿ ಪಡೆವುದು
ಚಿತ್ತಜಾರಿಯ ಭಕ್ತವರ ಕಥೆ
ಚಿತ್ತವಿಟ್ಟೊರೆ ಕೇಳಿದವರದು ಪುಣ್ಯ ಕಥೆಯಿದುವು ॥೬೨॥

ಪರಮ ಪಾವನ ಭಾಲಲೋಚನ
ಸುರಪನಿಂದಂ ಪೂಜೆಗೊಂಬುವ
ಸರುವ ಲೋಕದ ಜನಕನಾಗಿಪ ಪಾರ್ವತೀಶ್ವರಗೆ ।
ಪೊರೆಯುತಿಪ ಮೂಲೋಕ ಕರುಣದೆ
ಧರಿಸಿರುವ ತಾಂ ರುಂಡ ಮಾಲೆಯ
ಸ್ಮರನ ಮೇಣ್ ಮುಪ್ಪುರದಹಿಸಿದ ಶಿವಗೆ ಜಯ ಜಯವು ॥೬೩॥

( ಹದಿಮೂರನೆಯ ಸಂಧಿ ಮುಗಿದುದು )



# ಹದಿನಾಲ್ಕನೆಯ ಸಂಧಿ

ಸೂಚನೆ:– ಸಲಹಿರುವಸಲೆ ಪುತ್ರನಂದದಿ
ಹಲಕರಣೆ ಶ್ರೀ ಪಟ್ಟದಪ್ಪಗೆ
ಚೆಲುವು ಮಠವನ್ನೀಯೆ ಕಟ್ಟಿಸಿ ತಾವು ಶ್ರೀಯವರು ।

ಶ್ರೀ ಶಿವನು ಕೈಲಾಸನಾಥನು
ಶೇಷಗಳ ಭೂಷಣನು ಸಾಂಬನು
ನಾಶಮಾಡುವ ಭಕ್ತಜನಗಳ ಗೈದ ಪಾಪವನು ।
ತೋಷದೊಳು ಮೆರೆವವನು ನಿರುತವು
ರಾಶಿಯಾಗಿಯ ದಯದ ಮೂಜಗ
ದೀಶ ಗೌರೀಪತಿಯು ಪೊರೆಯಲಿ ನಮ್ಮನನು ದಿನವು ॥೧॥

ಶ್ರೀ ಜಗದ್ಗುರುವರನ ಬಳಿಯಲಿ
ನೈಜಭಕ್ತಿಯ ಭಾವದಿಂದಂ
ರಾಜಿಸುವ ಹಲಕರ್ಣಿಪಟ್ಟದ ಸ್ವಾಮಿ ಮಾಸಿಸಿರೆ ।
ಮೂಜಗದಪತಿ ಕರುಣದಿಂದಂ
ಸಾಜವಂತರು ನೆಲೆಸಿಬಿಟ್ಟರು
ಸೋಜಿಗವು ಕಡೆತನಕ ಶ್ರೀಗಳು ಸನ್ನಿಧಿಯೊಳವರು ॥೨॥

ಜಗದ ಗುರುಗಳು ಮೊದಲಿಗಿದ್ದರು
ಸೊಗಸಿನಿಂದಂ ಮರಡಿ ಮಠದಲಿ
ಸುಗುಣಿಗಳು ಕೆಂಪಯ್ಯ ಸ್ವಾಮಿಗಳೆನಿಸುತಿರಲಾಗೆ ।
ಜಗದ ಜನಕನ ಭಕ್ತಜನರೇ
ಮಿಗೆ ನಿಮಗೆ ಗೊತ್ತಿರುವದದುವು
ಮಿಗಿಲು ಕೀರ್ತಿಯನಲ್ಲಿಯೂ ಪಡೆದಿರ್ದರೀಯುತಿಯು ॥೩॥

ಇವರ ಸದ್ಯಶ ಕೇಳಿ ಬಂದರು
ಸವಿನಯದೆ ಶಿವರುದ್ರಪ್ಪನವರು
ಜವದೆ ಬುಗಡೀ ಕಟ್ಟೀ ಮಠದಾ ಸ್ವಾಮಿಗಳು ತಾವು ।
ಅವರು ಬಲು ತಾವ್ ಸ್ವಚ್ಛ ಹೃದಯರು
ಭವಿಸಿ ಮನದಲಿ ಭಕ್ತಿ ಇವರಲಿ
ದಿವಿಜರೋಲಿಹ ಯತಿಯ ಪಾದಕೆ ನಮನ ಮಾಡಿದರು ॥೪॥

ಇರಲಿವರು ಹದಿನಾಲ್ಕು ವರ್ಷದ
ಹರೆಯದವರೆಳೆವಯಸಿನವರೇ
ಹರುಷದಿಂ ಶ್ರೀಸ್ವಾಮಿ ಕೆಂಪಯನವರು ಕೇಳಿವರು ।
ಇರುವಿರಾವೂರವರು ಪೇಳ್ವದು
ಸರುವ ನಿಮ್ಮಯ ವೃತ್ತ ಕೇಳ್ವೆನು
ಧರೆಯ ಮೇಲಣ ಶಿವಗೆ ಕೂಡಲೇ ಸರ್ವವೃತ್ತವನು ॥೫॥

ತಿಳಿಸಿದರು ಬಹುವಿನಯದಿಂದಂ
ಬಳಿಕ ಪೇಳ್ದರು ತಮ್ಮ ಸನ್ನಿಧಿ
ಕಳೆಯಲಿಕೆ ನನ್ನಾಯ ಬಂದೆನು ಕರುಣ ಮಾಡುವದು ।
ಕಳೆಯರೆಂದರು ನೀವು ನನ್ನಯ
ಬಳಿಯೊಳಗೆ ಸಲೆ ನಿಮ್ಮ ಕಾಲವ
ಬಲುವು ಸಂತೋಷದಲಿ ಸಮ್ಮತಿಸಿದರು ಸ್ವಾಮಿಗಳು ॥೬॥

ಇದ್ದು ಬಿಟ್ಟರು ಯತಿಯ ಬಳಿಯಲಿ
ಶುದ್ಧ ಮನಸಿನ ಪಟ್ಟದೇವರು
ಬುದ್ಧಿಯಿವರಲಿ ಪಟ್ಟದವರಲಿ ತಂದೆ ಮಕ್ಕಳೊಲು ।
ವೃದ್ಧಿಯಾಗುತೆ ಪ್ರೇಮವಿದ್ದಿತು
ಸುದ್ದಿಯವರದು ಚನ್ನವಾಗಿದೆ
ಸಿದ್ಧರೀ ಇಂತಹರ ಕೆಲವರ ಜೋಕೆ ಮಾಡಿಹರು ॥೭॥

ಹೋದರಾ ತರುವಾಯ ಕೆಂಪಯ
ರೀದಯಾಮಯರೊಡನೆ ತಾವೂ
ಮೋದದಿಂ ಶಿವಯೋಗ ಮಂದಿರದಲಿ ವಾಸಿಸಲು ।
ಹೋದರಲ್ಲಿಯ ಪಾಠಶಾಲೆಗೆ
ಬೋಧವಾಗದೆ ಹೋಯ್ತು ಸಂಸ್ಕೃತ
ಹಾದಿ ಹಿಡಿದರು ಬಳಿಕ ಹಲಕರಣಿಯ ಯತಿವರರು ॥೮॥

ಬಂದ ನಂತರ ಮರಡಿ ಮಠಕಾ
ನಂದದಿಂ ಕೆಂಪಯ್ಯಸಿದ್ಧರು
ಬಂದರೈ ತಾವ್ ಮತ್ತೆ ಸಿದ್ಧರ ಬಳಿಯೊಳಿರಲಿಕ್ಕೆ ।
ಹೊಂದಿ ಸಂತೋಷವನು ಮಠದಲಿ
ತಂದೆಗಳು ಕೆಂಪಯ್ಯ ಗುರುಗಳು
ಬಂಧುರರು ತಾವಿಟ್ಟುಕೊಂಡರು ಪಟ್ಟದಪ್ಪನನು ॥೯॥

ಪರಮ ಗುರುಗಳು ಸಿದ್ಧ ಕೆಂಪಯ
ರುರು ಮಮತೆಯಿಂ ಕಲಿಯ ಸಂಸ್ಕೃತ
ಕರುಣೆಗಳು ಕಲಿಸಿದರು ತಮ್ಮಯ ಪಾಠಶಾಲೆಯಲಿ ।
ಮೆರೆಯುತಿಪ ಪಲಕರಣೆಯೂರಿನ
ಹಿರಿಯ ಮಠದಾ ಪಟ್ಟದೇವರು
ತರುಣ ಶಿವರುದ್ರಪ್ಪನವರನು ತಾವು ಪ್ರೇಮದೊಳು ॥೧೦॥

ಹೋದರೈ ತಾವ್ ಪಟ್ಟದೇವರು
ಮೋದವಿಲ್ಲದೆ ಪಾಠಶಾಲೆಗೆ
ಹೋದರೈ ನಾಲ್ಕಾರು ತಿಂಗಳು ಸಂಸ್ಕೃತವು ತಾನು ।
ಈ ದಯಾಳುವಿಗದವು ಬರದಕೆ
ಮೇದಿನಿ ಶಿವನಾದ ಕೆಂಪಯ
ಸೋದರರು ನಿಜ ಸರ್ವ ವಿಶ್ವದ ಕಳಿಸಿದರು ಬಳಿಕ ॥೧೧॥

ಕಲಿಯಲಿಕೆ ಡ್ರಾಯವ್ಹರನ ಕೆಲಸವ
ಚೆಲುವು ಕೊಲ್ಲಾಪೂರ ನಗರಕೆ
ಕಲಿತು ಬಂದರು ಕೆಲಸವನ್ನಾ ಕೆಲವು ತಿಂಗಳಲಿ ।
ಕಲಿತರೈ ತಾವ್ ಮತ್ತೆ ಯತಿಗಳು
ಕೆಲಸ ಫೋಟೋಗ್ರಾಫರಲ್ಲಿಯೆ
ಬಳಿಕ ಪಟ್ಟದ ದೇವರಿವರಿಗೆ ಮಾಡಹಚ್ಚಿದರು ॥೧೨॥

ತಮ್ಮ ಮೋಟಾರವನು ಸಾಗಿಸು
ವೊಮ್ಮನದ ಸಿದ್ಧೇಶ್ವರರು ತಾವ್
ಹಮ್ಮೀರದ ಶ್ರೀ ಪಟ್ಟದೇವರು ಪ್ರೇಮದಿಂದೆ ಬಲು ।
ತಮ್ಮ ಕೆಲಸವ ಗೆಯ್ದು ಪರಿಯಾ
ತಮ್ಮ ಗುರುಗಳ ಸೇವೆಗೆಯ್ದರು
ನಮ್ಮ ಬುಗುಡೀ ಕಟ್ಟಿ ಮಠದಾ ಪಟ್ಟದಪನವರು ॥೧೩॥

ಆದ ಕಾರಣದಿಂದಲೇನೋ
ತಾವಮಾವಾಸ್ಯ ದಿನ ಹೋಪುದು
ಭುವಿಯಮೇಲವತರಿಸಿದಂತಹ ಸಾಂಬರಾದಿವರು ।
ತಾವು ಬಿಟ್ಟರು ಮರಡಿಮಠಕಾ
ಶ್ರೀವಿದಾನಂದದಲಿ ಮೊದಲಿಗೆ
ದೇವರೀ ಬರತೊಡಗಿದರು ಹುಕ್ಕೇರಿ ಸ್ಟೇಶನದ ॥೧೪॥

ಬಳಿಯೊಳಿಹ ಬಾಡಿಗೆಯ ಕೋಣೆಗೆ
ಕಳೆಯಲಿಕೆ ದುಃಖಗಳ ಭಕ್ತರ
ತಳೆದು ಸಂತೋಷವನಮಾವಾಸ್ಯ ದಿನ ತಪ್ಪದಲೆ ।
ನೆಲೆಗೊಳಿಸಿದರು ಭೋಜನದ ಗೃಹ
ಒಲು ಕರುಣೆಗಳು ಜನರಿಗೋಸುಗ
ಸಲೆಗೊಳಿಸಿದರು ಭೇಷಜಾಯ ತಾವು ಮತ್ತಲ್ಲಿ ॥೧೫॥

ಬಿಡಿಸಿ ಕೆಲಸವ ಡ್ರಾಯವ್ಹರನದು
ನಡೆ ನಡಿಸಲು ಪ್ರಸಾದ ಸಲ್ಲಿಪ
ಬಿಡದ ಕಾರ್ಯವ ಮೇಣು ಭೇಷಜನೀವ ಕೆಲಸಗಳು ।
ಗಡ ನಡಿಸಲಿಕೆ ಪಟ್ಟದೇವರ
ಕಡು ನಲುಮೆಯಿಂದಿಟ್ಟುಬಿಟ್ಟರು
ಜಡಜ ಸಮವಿಹ ಚಾರು ಚರಣರು ಜಗದ ಗುರುವರರು ॥೧೬॥

ನಡೆದಿರಲು ತಾವಲ್ಲಿಯೆರಡೂ
ತಡೆಯಿರದೆ ಜನಹಿತದ ಕಾರ್ಯವು
ಬಿಡದೆ ಕೆಲಮಾಸವುರೆಯಾಹುಕ್ಕೇರಿ ರೋಡಿನಲಿ ।
ಕೆಡಕು ಮನಸಿನ ಕೆಲವು ಜನಗಳು
ನಡೆಯದೋಲಾ ಕಾರ್ಯ ಯತಿಗಳ
ಬಿಡದೆ ವಿಘ್ನವನೆಸಗುತಿದ್ದರು ಕೊನೆಗೆ ಶ್ರೇಯವರು ॥೧೭॥

ಬಾಡಿಗೆಗೆ ಮನೆ ದೊರೆಯದಂದದಿ
ಮಾಡಿದುದರಿಂ ಯತಿಗೆ ರಿಪುಗಳು
ನೋಡಿಯವರಾಟವನು ಸ್ವಂತಪೆ ಭವನ ಕಟ್ಟಿಸಲು ।
ಮಾಡಿದರು ಯೋಜನೆಯ ಶ್ರೀಗಳು
ಕೂಡಿ ಹತ್ತಿದರು ಯತ್ನಕೆ
ಬೇಡುಬೇಕಾಗಿತ್ತು ಸ್ಟೇಶನ ಬಳಿಯೊಳಗೆ ತಮಗೆ ॥೧೮॥

ಜಂಗಮರು ಸದ್ಭಕ್ತರಾಗಿಹ
ಮಂಗಲದ ಕೃತಿ ಗೆಯ್ಯುವಂತಹ
ತುಂಗ ಕೀರ್ತಿಯನಾಂತ ಚೆಟ್ಟೀರಾವ ಸಾಹೇಬಗೆ ।
ಮಂಗಲಾಕೃತಿಯಾದ ಶ್ರೀಯತಿ
ಪುಂಗವರು ಹೇಳಿದರು ಕೂಡಿಸಲು
ಭಂಗವಾಗದ ತಾನು ಗೋಬಳಗುಡ್ಡ ಬಳಿಯೊಳಿಹ ॥೧೯॥

ನೆಲವ ಕಟ್ಟಿಸಲಿಕ್ಕೆ ಕಟ್ಟಡ
ನೆಲವಿರಲು ಸರಕಾರದವರು ತಾಂ
ಬಲು ವಿನಯದೊಳು ಮಾಮಲೇದಾರನುರೆ ಹೇಳಿದನು ।
ಸಲೆಯಿರುವದಧಿಕಾರವೆಲ್ಲವು
ನೆಲದಗಡ ಬೆಳಗಾವಿಯೊಳಗಿಹ
ಗೆಲವ ಪೊಂದಿದ ಹಿರಿಯ ಮತದ ಕಲೆಕ್ಟರರಕಡೆಗೆ ॥೨೦॥

ಪರಮ ಪೂಜ್ಯರೆ ದಾನವೀರರೆ
ಬರುವದೆನ್ನಯಕೂಡವಲ್ಲಿಗೆ
ಹಿರಿಯಮತರಿಗೆ ಹೇಳುವದು ನೀವ್ ನಿಮ್ಮಾಲಯಕೆಯನು ।
ಹರುಷದಿಂ ತಾವು ಕೊಡಿಸುವರು ನೆಲ
ಗುರುಗಣಾಗ್ರೇಸರರೆ ನೈಜವು
ತ್ವರಿತದೊಳು ಗಮಿಸಿದರು ದ್ವಯರು ಶುಭದಿನದೊಳೊಂದು ॥೨೧॥

ಹೋದರಿಬ್ಬರು ಮನೆಗೆ ಹಿರಿಮತ
ಮೋದದಿಂದ ಕಲೆಕ್ಟರರು ತಾವ್
ಸಾದರದೆ ಮೇಣ್ ಭಕ್ತಿಯಿದಂ ಸ್ವಾಗತವಮಾಡಿ ।
ಆ ದಯಾನಿಧಿಯಾದ ಯತಿಗಳ
ಪಾದಕಮಲಕೆ ನಮಿಸಿ ಮುದದಿಂ
ಹೋದರೈ ವಿಶ್ರಾಮ ಭವನಕೆ ಯತಿಯ ಕರಕೊಂಡು ॥೨೨॥

ಉಚ್ಚ ಪೀಠದ ಮೇಲೆ ಗುರುಗಳ
ಸ್ವಚ್ಛ ಮನದಿಂ ಕೂಡ್ರಿಸಿದಪೋಲ್
ಉಚ್ಚ ಕೀರ್ತಿಯನಾಂತ ಶ್ರೀಗಳ ದಿವ್ಯಪಾದವನು ।
ಮೆಚ್ಚಿ ಮೋದದೆ ನಮಿಸಿ ತದುಪರಿ
ಕೆಚ್ಚಿದೆಯ ಸಾಹೇಬನು ನಮಿಸಲಿ
ಕುಚ್ಚರವದಿಂ ಕರೆದನಾಗಳು ಮನೆಯ ಜನರನ್ನು ॥೨೩॥

ಪ್ರೀತಿಯಿಂದಂ ಬನ್ನಿರೆಂದರು
ನೀತಿ ಭೂಷಿತ ಚಟ್ಟಿಯವರಿಗೆ
ಕುಳಿತುಕೊಳ್ಳಲು ಸೂಚಿಸಿದರೈ ಕಾಷ್ಠದಾಸನದಿ ।
ಖ್ಯಾತರಾದ ಕಲೆಕ್ಟರರು ತಾವ್
ಕೂತ ನಂತರ ಚಿಟ್ಟಿ ದೊರೆಗಳು
ಪೂತ ಮೂರ್ತಿಗಳಾದ ಶ್ರೀಮಜ್ಜಗದಗುರುಗಳನು ॥೨೪॥

ಆಗ ಮನೆಗೆ ಬರುವ ಕಾರಣ
ಭೋ ಗುರುವರರೆ ಪೇಳಿರೆಂದರು
ತ್ಯಾಗಮೂರ್ತಿಗಳಾಗ ಪೇಳ್ದರು ತಾವು ಸಾಹೇಬಗೆ ।
ಈಗ ಬಂದೆವು ನಿಮಗೆ ಹೇಳಲಿ
ಕೀಗಿರುವ ಹುಕ್ಕೇರಿ ಸ್ಟೇಶನ
ಭಾಗದೊಳು ತಾಂ ಗುಡ್ಡ ಗೋಬಲವೆಂದಿರುವದಲ್ಲಿ ॥೨೫॥

ಅದಕೆ ಪತ್ತಿ ನೆಲವು ಬೇಕಾ
ಗಿದೆ ದವಾಖಾನೆಯನು ಸ್ಥಾಪಿಸ
ಲದನು ತಾವ್ ಕೊಡಿಸಿದರೆ ನಮ್ಮಯ ಕೆಲಸವಾಗುವದು ।
ಮುದದೆ ಸ್ವಾಮಿಯ ಮಾತು ಕೇಳ್ದರೆ
ಮುದದೊಳೆಂದರು ಕೊಡಿಸುವೆನು ನಾ
ನದುವು ಕೈಯೊಳಗುಂಟು ನಮ್ಮಯ ಚಿಂತೆಬಿಡಿರದರ ॥೨೬॥

ಆಯಿತೆಂದರು ಜಗದ ಗುರುಗಳು
ನ್ಯಾಯನಿಷ್ಟುರ ಸಾಹೇಬರಿಗಾ
ಕಾಯಜನ ಗೆದ್ದಿರುವ ಯತಿಪದ ವಂದಿಸಿದ ಮೇಲೆ ।
ಕಾಯಜನಹಾಗಿರುವ ಗುರುಗಳು
ಬಾಯಿಯಿಂ ಶಿವನಾಮ ಸ್ಮರಿಸುತೆ
ರಾಯ ಆರ್. ಎಸ್. ಹಿರಿಯಮಠರಿಗೆ ಬಂದರೈ ಹರಸಿ ॥೨೭॥

ಕಳಿಸಲಿಕೆ ಸ್ವಾಮಿಯನು ಬಂದರು
ಬಳಿಕ ಹಿರಿಯಮಠ ಸಾಹೇಬರು ಮೇಣ್
ಕಳಿಸಲಿಕೆ ಸಾರಿದರು ಚೆಟ್ಟೀರಾವ ಸಾಹೇಬರರು ।
ಕಳಿಸಿದರು ಹೊರಗಿರುವ ಶ್ರೀಗಳ
ಚೆಲುವು ಮೋಟಾರದ ಸಮೀಪಕೆ
ಬಲು ಮುದದೆ ತಾವ್ ಬಂದು ದ್ವಯ ಸಾಹೇಬರು ಸಜ್ಜನರು ॥೨೮॥

ಹೋಗಿಬಿಟ್ಟರು ಜಗದ ಗುರುಗಳು
ತ್ಯಾಗವೀರರು ಮಠಕೆ ಹುಬ್ಬಳ್ಳಿ
ಹೋಗದೇ ಹಿಂದುಳಿದರಾಗಳು ಚೆಟ್ಟಿ ದೊರೆಯವರು ।
ಸಾಗಿಬಿಟ್ಟವು ಕೆಲವು ದಿನವಾ
ಮೇಗೆ ಸರಕಾರವದು ಮಾಡಿತು
ರಾಗವಿಂ ನೆಲವದು ಲಿಲಾವವ ಗುರುವರರು ತಾವು ॥೨೯॥

ಕೊಂಡರಾ ನೆಲವನು ಲಿಲಾವದಿ
ಗಂಡುಗಲಿಗಳು ದಾನಕಾರ್ಯದಿ
ಕೊಂಡರ್ರೈ ನಾಲ್ವತ್ತು ಎಕರೆ ನೆಲವನಾದಿನವು ।
ಬಂಡುಣಿಯು ಸದ್ಗಂಧ ಸುಮವನು
ಕಂಡು ಪಡುವೋಲ್ ಹರ್ಷಬಟ್ಟರು
ಪಂಡಿತರು ಘನ ಧರ್ಮದಲಿ ಶಿವಯೋಗಿಯಿವರಾಗೆ ॥೩೦॥

ಅಲ್ಲಿ ಗೋಬಲ ಗುಡ್ಡವಿರುವದು
ಮಲ್ಲಿಕಾರ್ಜುನ ದೇವ ಮಂದಿರ
ವಲ್ಲಿ ಗುಡ್ಡದಮೇಲೆ ಮೆರೆವುದು ಚಿಕ್ಕಗುಡಿಯದುವು ।
ಎಲ್ಲ ಬಲ್ಲವರಾದ ಶ್ರೀಗಳು
ಸಲ್ಲಿಸಲು ನಿಜ ಸೇವೆ ಜನರಿಗೆ
ಮೆಲ್ಲೆದೆಯ ಆರೋಗ್ಯ ಭವನವ ಕಟ್ಟಿಸಲು ತಾವು ॥೩೧॥

ಇರುವ ಗೋಬಲ ಗುಡ್ಡ ಹತ್ತಿರ
ದೊರೆದ ನೆಲವ ಲಿಲಾವದೊಳಗಾ
ಹುರುಪಿನಿಂ ಕಟ್ಟಿಸಲು ಕಟ್ಟಡ ಮೊದಲು ಮಾಡಿದರು ।
ಪರಮ ಗುರುಗಳು ಜಗದ ಗುರುಗಳು
ಹಿರಿಯ ಕಿರಿಯವು ಪಲವು ಕಟ್ಟಡ
ತ್ವರದಿಂ ಕಟ್ಟಿಸಿ ಬಿಟ್ಟರಾತಾಣದಲಿ ಚೆನ್ನಾದ ॥೩೨॥

ಇಟ್ಟರಾತಾಣದಲಿ ಶ್ರೀಗಳು
ಬೆಟ್ಟದೊಲು ಚಲಿಸದಿಹ ಧೀರರು
ಮೊಟ್ಟ ಮೊದಲೊಳಗನ್ನವಿಕ್ಕುವ ಕಾರ್ಯ ಜನಗಳಿಗೆ
ಇಟ್ಟರಲ್ಲಿಯೇ ಕೊಡುವ ಭೇಷಜ
ಕಟ್ಟಡವ ತಾವ್ ಪೂಜ್ಯಪಾದರು
ಬಿಟ್ಟು ಕೈ ಸೈಲನ್ನು ಹೆಚ್ಚಿಗೆ ಪಣವ ವ್ಯಯಗೈದು ॥೩೩॥

ಜ್ಞಾಣ ಡಾಕ್ಟರನನ್ನು ನೇಮಿಸಿ
ಮಾಣದೇ ಸಲೆ ಸಾಗುವ್ಪೋಲದು
ತಾನು ಸಿಗುವ್ಪೊಲ್ ಸರ್ವಜನಗಳಿಗೌಷಧವು ಬಿಡದೆ ।
ಜ್ಞಾಣ ಜಾಣರು ಮಾಡಿರುವರಾ
ಸ್ಥಾನದೊಳು ದ್ವಯ ಪುಣ್ಯ ಕಾರ್ಯವ
ಮಾನ ನಿಧಿಗಳು ಪ್ರಣುತ ಗುರು ಸಿದ್ಧೇಶ್ವರರು ತಾವು ॥೩೪॥

ಬರುತಲಿದ್ದರು ಹಿಂದಿನಂತೆಯೆ
ಹರುಷದಿಂದಂ ಜಗದ ಗುರುಗಳು
ಮೆರೆವ ಗೋಬಲಗುಡ್ಡ ಬಳಿಯಿಹ ತಮ್ಮಯಾಶ್ರಮಕೆ ।
ಹಿರಿಯ ಯತಿಗಳು ಭಕ್ತಜನಗಳ
ಕರುಣದಿಂ ಕಂಟಕವ ಕಳೆಯಲು
ತೊರೆದು ಹುಬ್ಬಳ್ಳಿ ಮಠವ ಪ್ರತ್ಯಮಾವಾಸ್ಯೆಯಾದಿನವು ॥೩೫॥

ಬರುತಲಿದ್ದರು ಹವೆಯ ಪಲ್ಲಟ
ನೆರೆಗೊಳಿಸಲಿಕೆ ಮತ್ತೆ ಶ್ರೀಗಳು
ಗುರು ಸಮೂಹದ ಹಿರಿಯರಾದೀ ಪುಣ್ಯ ಚರಿತರಿಗೆ ।
ಮೆರೆವ ಹುಬ್ಬಳ್ಳಿಯೂರ ಹವೆಯದು
ಊರು ಅಪಾಯವು ಮಾಡುತಿದ್ದಿತು
ಪರಮ ಪೂಜ್ಯರು ಬರಲು ಕಾರಣವಿತ್ತು ಮತ್ತಿದಾವು ॥೩೬॥

ಇರಲು ಬೇಕಾಗಿದ್ದರಲ್ಲಿಯೆ
ಗುರುವರರಿಗೀ ಹೆಚ್ಚು ದಿನಗಳು
ಪರಮ ಪೂಜ್ಯರು ವಾಸಿಸುತ್ತಿರ ಹರ್ಷದಿಂ ತಾವು ।
ನೆರ ನಡೆವವೊಲು ಹಿಂದೆ ತಮ್ಮಯ
ವರ ಮಠದ ಕೆಲಸಗಳು ಸಕಲವು
ಬರುತಲಿದ್ದರು ಸುವ್ಯವಸ್ಥೆಯ ಮಾಡಿ ಸುಮತಿಗಳು ॥೩೭॥

ಸಾಗಿದವು ಕೆಲವರ್ಷವೀ ಪರಿ
ಸಾಗರರು ಕಾರುಣ್ಯದೀ ಶಿವ
ಯೋಗಿಗಳಿಗಾನಂದದಲಿ ಗಡ ಕಾಲವದು ತಾನು ।
ತ್ಯಾಗ ವೀರರು ಮತ್ತೆಕೊಂಡರು
ರಾಗದಿಂ ಹನ್ನೆರಡು ಎಕರೆ
ಭೋಗಿ ಭೂಷನ ದಯದೆ ನೆಲವನು ಮೊದಲನೆಲ ಬಳಿಯೆ ॥೩೮॥

ಎಲ್ಲ ನೆಲವದು ಕೂಡಿಯಾಗಿಪು
ದಲ್ಲಿ ಯೈವತ್ತೆರಡು ಎಕರೆ
ಯಲ್ಲಿ ಗೋಬಳಗುಡ್ಡ ಬಳಿಯಲಿ ಜಗದ ಗುರುಗಳದು ।
ಅಲ್ಲಿಯೇ ತಮಗೊಂದು ಮಠವನು
ಚಲ್ಲಿಯಾದದು ಕೊರಯಿ ಕಟ್ಟಿಸಿ
ಗೆಲ್ಲವಡೆದೀ ಶ್ರೀಗಳಿಗೆ ಹರಕರ್ಣಿ ಸ್ವಾಮಿಗಳು ॥೩೯॥

ಮಾಡಿದರು ಬಿನ್ನಪವ ವಿನಯದೆ
ಮಾಡಿದರು ಶ್ರೀಯವರು ಮಾನ್ಯವ
ಕೂಡಲೇ ಹಲಕರಣಿ ಸ್ವಾಮಿವಿನಂತಿಯನು ತಾವು ।
ಕಾಡದೇವರ ಭಕ್ತವರ್ಯರು
ನೋಡಿರಾ ಮಠಕಾಗಿ ಕೊಡರು
ನಾಡೆಲಾನಿಪ ನೆಲವ ಹನ್ನೆಡೇಕರೆಯ ಮತ್ತೆ ॥೪೦॥

ಮೊದಲು ಕೊಂಡಾರೋಗ್ಯಭವನಕೆ
ಪದುಳದಿಂ ತಾವ್ ಸ್ವಾಮಿರತ್ನರು
ಚೆದುರರಿವರಾ ನೆಲಕೆ ಹತ್ತಿಯೆ ಇರುವದಾ ನೆಲವು ।
ಸದಯ ಮೂರ್ತಿಗಳಾದ ಶ್ರೀಗಳು
ಮುದದೆ ಮಠವನು ಕಟ್ಟಸಿರುವರು
ಕಾದಲದೆದೆಯದ ಪಟ್ಟದೇವರಿಗಾಗಿ ತಾವಲ್ಲಿ ॥೪೧॥

ಕಟ್ಟಿಸಿರುವರು ಹೊಸತೆರದೊಳದು
ಕಟ್ಟಡವ ಬಹು ರಮ್ಯವಾದುದು
ಕಟ್ಟಡಕೆ ಮಾಡಿದರು ವ್ಯಯ ನಾಲ್ವತ್ತು ಸಾವಿರವು ।
ಬಿಟ್ಟು ಬಿಡದೇ ಸಾಗುವ್ಹೇಲಾ
ಮೆಟ್ಟಿನೊಳು ಭೋಜನವು ಜನರಿಗೆ
ಬಿಟ್ಟು ಕೈ ಸೈಲನ್ನು ಕೊಂಡರು ಮಠಕೆ ಹೊಲಗಳನು ॥೪೨॥

ತೋಟ ಹೊಲ್ಲಗಳ ಕೂಡಿಕೊಂಡರು
ಸಾಟಿಯಿರದೀ ಪೂಜ್ಯಪಾದರು
ಕಾಟ ಜನಗಳ ಕಳೆವ ರೈವತ್ತಿ ಕರೆಯು ತಾವು ।
ಹಾಟಕದ ಸಮಗುಣಗಳಾಗಿಹ
ಶಾಟಿ ಧಾರಿಗಳಿವರು ಕೊಂಡರು
ತೋಟ ಹೊಲ ಜತೆ ನೆಲವ ನೈವತ್ತೇಕರೆಯ ಮರಡಿ ॥೪೩॥

ಕೊಟ್ಟರೀ ಪರಿನೂರು ಎಕರೆ
ಪಟ್ಟದಪ್ಪನ ವಶಕೆ ಭೂಮಿಯು
ಸುಟ್ಟು ಕಾಮನ ಗುರುಗಣಾಗ್ರಣಿಯಾದ ಶ್ರೀಯವರು ।
ಕಟ್ಟು ಮಾಡಿಹರಿವರು ಜನರಿಗೆ
ಬಿಟ್ಟು ಬಿಡದೆ ಪ್ರಸಾದ ಸಲ್ಲಿಪ
ಪಟ್ಟು ತೋಷವನೊಪ್ಪಿಹರು ತಾವ್ ಪಟ್ಟದಪನವರು ॥೪೪॥

ಮಠದ ಹೊಲ ದೊಡೆತನವಿವೆಲ್ಲವು
ಪಟುಗಳಾದೀ ಪೂಜ್ಯಪಾದರು
ಸಟೆ ನುಡಿಯದಿಪ ಪಟ್ಟದಪ್ಪಗೆ ಕೊಟ್ಟು ಬಿಟ್ಟಿಹರು ।
ದಿಟದ ಮೂರ್ತಿಗಳಾದ ಪೇಣ್ ಪಾ
ಸಟಿಯಿರದಿಪ ಗುರುಗಳೊರೆದೊಲು
ಚಟುಲ ಮನವಿಲ್ಲದೆ ಮಾಳ್ಪರು ಕಾರ್ಯವನ್ನವರು ॥೪೫॥

ತಮ್ಮ ನಂತರ ಚನ್ನ ಸಾಗಲಿ
ತಮ್ಮ ಯೌಷದ ಸದನವೆಂದಾ
ನಮ್ಮ ಸರ್ವ ಸ್ವಾಮಿವರ್ಯರು ಕೊಟ್ಟಿಹರು ತಾವು ।
ಒಮ್ಮನದ ಶ್ರೀ ಜಗದ ಗುರುಗಳು
ತಮ್ಮ ಮನಸಿಗೆ ಯೋಗ್ಯವೆನಿಸಿದ
ಚಿಮ್ಮುವಾನಂದದಲಿ ಕೋ-ಆಪರೇ-ಟಿ-ನಾಮಕದ ॥೪೭॥

ಗನ್ನ ಸೊಸಾಯಿಟಿಯ ವಶದಲಿ
ಗನ್ನ ವಾದಾಸ್ತಿಯನು ತಮ್ಮಯ
ಚನ್ನ ಕಾರ್ಯವಗೆಯ್ವ ಶ್ರೀಗುರುಸಿದ್ಧ ಯತಿವರರು ।
ಚನ್ನ ಕಟ್ಟದ ಪಲವಿರುಪವಾ
ಚಿನ್ನದಂತಹ ಪವೆಯ ಸ್ಥಾನದಿ
ಮುನ್ನ ಪೇಳದೆ ಭೂಮಿಯೆನಿತಿಹುದೆಂಬುಪದು ನಿಮಗೆ ॥೪೭॥

ಬಲು ಸಮರ್ಥರ ಶ್ರೀಯವರದಾ
ನೆಲದ ಕಟ್ಟಡಗಳ ಬೆಲೆಯು ತಾಂ
ತಿಳಿದು ಬರುವದು ಲಕ್ಷಮೇಲಿಪ್ಪತ್ತು ಸಾವಿರವು ।
ಚೆಲವು ಭಾವನೆಯುಳ್ಳ ಶ್ರೀಗಳು
ಸಲೆ ದವಾಖಾನೆಯನು ಸಾಗಿಪ
ವೊಳಿತು ಕಟ್ಟನು ಮಾಡಿ ಸೊಸಾಯಟಿಗೆ ಕೊಟ್ಟಿಹರು ॥೪೮॥

ಹೀಗೆಯಾ ಸ್ಥಾನದಲಿ ಸಾಗಿಪೆ
ಯೋಗಿವರ್ಯರ ಪುಣ್ಯ ಕಾರ್ಯಗ
ಳಾಗಿ ನಂದಾ ದೀಪ ವೆಸೆವ ಪರೋಪಕಾರಕವು ।
ಭಾಗಿ ನಡೆಯುವ ಸರ್ವರೊಂದಿಗೆ
ತ್ಯಾಗವೀರರು ಸ್ವಾಮಿ ಮಣಿ ತಾ
ವಾಗಿಹರುವರ ಕೀರ್ತಿ ಸಲೆ ಸೀಮಂತ ಮಣಿನಿಜವು ॥೪೯॥

ಅಲ್ಲಿ ಸೊಸಾಯಟಿಗೆ ನಾಮವ
ಬಲ್ಲಿರಾ ಗುರುಸಿದ್ಧ ವೀಶ್ವರ
ಸಲ್ಲಿಸಿರುವರು ಮೊದಲ ಸೊಸಾಯಟಿಗೆ ಗುರುವರರು ।
ಬೆಲ್ಲದೊಲು ಸವಿ ಮಾತನಾಡುವ
ಚೆಲ್ಲಮನಸಿನ ಜಗದ ಗುರುಗಳ
ದೆಲ್ಲ ಕಡೆ ಸಲೆ ಬಿದ್ದು ಬಿಟ್ಟಿದೆ ಕೀರ್ತಿ ಚಂದ್ರಿಕೆಯು ॥೫೦॥

ಶ್ರೀ ಜಗದ್ಗುರುವರರ ಭಕ್ತನು
ರಾಜಿಸುವ ಹುಬ್ಬಳ್ಳಿ ಪುರದೊಳು
ನೈಜವಂತನು ವಾಸಗೆಯ್ದನು ಸೌಖ್ಯದಿಂ ತಾನು ।
ಸಾಜವರ್ತನದಿಂದ ತನ್ನಯ
ಭೂಜರಾಗಿಹ ಸುರರ ಶ್ರೀಗಳ
ರಾಜ ರಾಜರ ಪೂಜ್ಯಪಾದರ ಪ್ರೇಮ ವಡೆದವನು ॥೫೧॥

ಇರುವದ್ಕೆ ತಾಂ ಬೆಂಡಿಗೇರಿ
ಕರುಣೆಗಾಲಪನಾಮ ಕೇಳಿರಿ
ಮೆರೆಯುವನು ಲಿಂಗಪ್ಪನಾಮವನಾಂತ ಸಜ್ಜನನು ।
ಹಿರಿಯ ಮನಸಿನ ಮನುಜನಾಗಿಹ
ಹರನ ಪಾದದ ಭಕ್ತನಾಗಿಹ
ಹರುಷಿ ಗುರುಸಿದ್ಧಪ್ಪನಾತ್ಮಜನಿವನು ಲಿಂಗಪನು ॥೫೨॥

ಬರುತಿರುವನೈ ಪರಮ ಮಠಕಾ
ಪರಮ ಯತಿಗಳ ಮೊದಲಿಗಾಗಿಹ
ಗುರುವರರ ಗುರುಸಿದ್ಧದೇವರ ಪೀಠ ದರ್ಶನಕೆ ।
ಹರುಷದಿಂದೀ ಜಗದ ಗುರುಗಳ
ದರುಶನವ ಮೇಣ್ ಪೊಂದುತಿದ್ದನು
ತೊರೆಯದೆ ತಾನೊಂದು ದಿನವೂ ಭಕ್ತವರನಿವನು ॥೫೩॥

ಬರುಬರುತೆ ವರ್ಧಿಸುತ ಪ್ರೀತಿಯು
ಗುರುಗಳಲಿ ಮೇಣ್ ಭಕ್ತ ನಿಪನಲಿ
ಹರುಷ ಪಡೆಯುತಿದ್ದರಿಬ್ಬರು ದರ್ಶನದೆ ತಾವು ।
ಕರುಣದಿಂದಂ ಜಗದ ಗುರುಗಳ
ಹರಕೆಯಿಂದಲಿ ಮತ್ತು ಲಿಂಗಪ
ಮೆರೆಯುವನು ಸಲೆ ಧನವರ್ಜಿಸಿ ಸಾಂಪ್ರದಿ ತಾನು ॥೫೪॥

ಮಾಡಿದನು ತಾಂ ಬೇಡಿಗೇರಿ
ನಾಡೆ ಲಿಂಗಪ ಮಠದ ಹಿತಕರ
ಗಾಢ ಭಕ್ತಿಯ ಭಾವದಿಂದಂ ಬಿಡದೆ ಕಾರ್ಯಗಳ ।
ಮಾಡಿಹನು ಮೇಣ್ ಪೂಜ್ಯಪಾದರು
ಮಾಡುತಿಹ ಕೆಲಸದಲಿ ನೆರವನು
ನೋಡಿರೀತನು ತೆಗೆದುಕೊಳ್ಳದೆ ಕಾಸು ಸಹ ಮಠದ ॥೫೫॥

ಭಕ್ತವತ್ಸಲರಾದ ಶ್ರೀಗಳು
ಮುಕ್ತಿ ಸಲೆ ಸೀಮಂತ ರತ್ನರು
ಭಕ್ತ ನೀತನುಃಗೆಯ್ದು ತಮ್ಮಯ ಮಠದ ಕೆಲಸವನು ।
ಮೌಕ್ತಿಕದ ನಿಭ ಹಸನ ಮನಸಿನ
ಯುಕ್ತಿ ನಿಧಿಯಾಗಿರುವ ಶ್ರೀಗಳು
ಭಕ್ತನೀತಗೆ ಲೇಖವನು ತಾವ್ ಬರೆದು ಕೊಟ್ಟಿಹರು ॥೫೬॥

ಮಾಡಿಹಿರಿ ಬಹು ದಿವಸ ನಮ್ಮಯ
ಬೇಡ ದೇನನು ಮಠದ ಕಾರ್ಯವ
ಮಾಡಿಹಿರಿ ಮೇಣ್ ನಮಗೆ ನೆರವನು ನಮ್ಮ ಕಾರ್ಯದಲಿ ।
ನೋಡಿ ನಿಮ್ಮಯ ಶ್ರೇಷ್ಠ ಭಕ್ತಿಯಃ
ನಾಡೆ ನಾವು ಸಂತೋಷದಿಂದಂ
ಮಾಡದೇ ಮುಖದಿಂದ ಸ್ತುತಿ ಬರಿ ನಿಮಗೆ ನಾವಿಂದು ॥೫೭॥

ಬರೆದು ಕೊಡುವೆನು ಲೇಖವನು ನಾ
ನೊರೆದ ನುಡಿಗಳ ನಿಮ್ಮ ಯೆದುರೊಳು
ಗುರುವರೇಣ್ಯರು ಹೇಳಿಯೀಪರಿ ಕೊಟ್ಟರೈ ಲೇಖ ।
ಪರಮ ಭಕ್ತಗೆ ಲಿಂಗಪನಿಗಾ
ಪರಮ ಗುಣಗಳ ನಿಧಿಕವಾಗಿಯೆ
ಹಿರಿಯ ಮನಸಿನ ಶ್ರೀಗಳರಿಯುತಿದ್ದರೈ ತಾವು ॥೫೮॥

ಶ್ರೀಗಳು ಗುಣಗ್ರಾಹಿಗಳು ಬಲು
ರಾಗ ಭಕ್ತರ ಮೇಲೆ ಹೆಚ್ಚಿಗೆ
ತ್ಯಾಗಿಗಳು ತಾವ್ ಮಾಡುತಿದ್ದರು ಪರಮ ಯೋಗಿಗಳು ।
ಸಾಗಿದರು ಸನ್ಮಾರ್ಗ ಬಿಡದಲೆ
ನೀಗುವನಕಾ ದೇಹ ಜೀವವು
ನಾಗಭೂಷನ ಭಕ್ತಮಣಿ ಗುರುಸಿದ್ಧ ನೃಪವರನು ॥೫೯॥

ವಂದಿಸುವ ಶ್ರೀ ಬಸವದೇವಗೆ
ತಂದೆಯಾಗಿಹ ಪತಿತ ಜನರಿಗೆ
ನಂದಿವಾಹನ ಪರಮ ಭಕ್ತಗೆ ಘನಸಮರ್ಥನಿಗೆ ।
ಇಂದುವಿನ ಸಮ ಶಾಂತನಾಗಿಹ
ಸುಂದರಾಂಗಗೆ ಧರ್ಮ ಸೂರ್ಯಗೆ
ಕಂದಿರದವರ ಪುಣ್ಯಚರಿತಗೆ ನೀತಿ ಪ್ರತ್ಥಳಿಗೆ ॥೬೦॥

ಕ್ರಾಂತಿಕಾರಗೆ ಧರ್ಮದಲಿ ಸಲೆ
ಭ್ರಾಂತಿ ಜಾತಿಯ ಕಳೆದ ವೀರಗೆ
ಶಾಂತಿಯಿಂ ನೆಲೆಗೊಳಿಸಿದಾತಗೆ ನಮ್ಮ ನಾಡಿನಲಿ ।
ಸಂತತವು ನಿಜ ಧರ್ಮ ಸೇವೆಯ
ನಾಂತು ಪುರುಷನು ಗೈದ ಮಹಿಮಗೆ
ಕಂತುವಿನ ಜಯಿಸಿರುವ ಪ್ರಣೆತಗೆ ನಮ್ಮ ನತಿಯಿರಲಿ ॥೬೧॥

ಕಂದುಗೊರಳಗೆ ಮದನ ವೈರಿಗೆ
ನಂದಿವಾಹಗೆ ಚಂದ್ರ ಭೂಷಗೆ
ದಂದ ಶೋಕವಿಭೂಷನಿಗೆ ರಜತಾದ್ರಿಮಂದಿರಗೆ ।
ಅಂಧಕಾದಿ ಮದಾಂಧ ದೈತ್ಯರ
ಕೊಂದು ದಿವಿಜರ ಸಲಹಿದಾತಗೆ
ಸ್ಕಂದ ಗಣಪತಿ ಪಿತಗೆ ಪರಮೇಶ್ವರಗೆ ಮಂಗಲವು ॥೬೨॥

(ಹದಿನಾಲ್ಕನೆಯ ಸಂಧಿ ಮುಗಿದುದು)

§ ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಪ್ರಸನ್ನ §



# ಹದಿನೈದನೆಯ ಸಂಧಿ

ಸೂಚನೆ:– ಪಡೆಯೆ ದರ್ಶನ ಪೂಜ್ಯಪಾದರ
ಕಡು ಭಕುತಿಯಿಂ ಬಂದುಬಿಟ್ಟರು
ಕಡು ಸುಕೀರ್ತಿಯನಾಂತ ಶ್ರೀ ಮೈಸೂರು ನೃಪತಿಗಳು ।

ಶ್ರೀ ಶಶಿವಿಭೂಷಣ ಮದನಪರ
ಕೋಶ ಗುಣಮಣಿ ಶೂಲಧೃತಕರ
ವಾಸಿಸಿದ ಕೈಲಾಸ ಗಿರಿಯೊಳು ಪಾರ್ವತೀಶ್ವರನು ।
ದಾಸರಂ ಕಡು ದಯದೆ ಸಲಹುವ
ಪೋಷಕನು ತಾಂ ವಿಶ್ವವೆಲ್ಲವ
ತೋಷದೊಳು ಚಿರಕಾಲ ಶೋಭಿಪ ಶಿವ ಪೊರೆಯಲೆಮ್ಮ ॥೧॥

ಕೇಳಿಯೀಪರದಾನ ವೀರರ
ಶೀಲಭೂಷರು ಕೀರ್ತಿಗಾನವ
ಪೇಲು ಮೈಸೂರರಸ ಜಯಚಾಮರು ನೃಪೋತ್ತಮರು ।
ಕೇಳಿದರು ದರ್ಶನದ ಲಾಭವ
ಶೂಲರೂಪರೆ ಪಡೆಯ ಬಯಸುವೆ
ಮೇಲೆ ನನ್ನಯ ಮಾಡಿ ಕೃಪೆಯಪ್ಪಣೆಯ ನೀಯುವದು ॥೨॥

ಹರಕೆಯೊಂದಿಗೆ ಕೊಟ್ಟರಪ್ಪಣೆ
ಪರಮ ಗುರುಗಳು ಜಗದ ಗುರುಗಳು
ಬರಲು ದರ್ಶನಕಾಗಿ ಮೈಸೂರದವನರೇಶರಗೆ ।
ಹರುಷದಿಂ ಸಾರಿದರು ಹುಬ್ಬಳ್ಳಿ
ಪುರಕೆ ಮೈಸೂರವನಿಪಾಲರು
ಗುರುವರರ ದರ್ಶನಕೆ ಶುಭದಿನ ಸೇವಕರ ಸಹಿತ ॥೩॥

ಬರುತಿಪರು ಮೈಸೂರ ರಾಜರು
ಪುರಕೆ ಹುಬ್ಬಳ್ಳಿಯೆಂಬ ವಾರ್ತೆಯು
ಹರಡಿಬಿಟ್ಟತು ಪುರದೊಳೆಲ್ಲೆಡೆ ಮತ್ತೆಸುತ್ತಿಲ್ಲ ।
ನೆರೆಯಿತಾಗಳ್ ನೋಡಲವರನು
ಹರುಷದಿಂ ಜನ ಲಕ್ಷಗಟ್ಟಲೆ
ಕರೆದುಕೊಂಡರು ಜಗದ ಗುರುಗಳು ಪ್ರೇಮದಿಂ ನೃಪರ ॥೪॥

ಬಂದು ಯತಿಗಳ ದಿವ್ಯ ಚರಣಕೆ
ವಂದನೆಯ ನೆಸಗಿದರು ರಾಜರು
ಮುಂದೆ ಗೆಯ್ದರು ಪಾದಪೂಜೆಯ ಜಗದ ಗುರುವರರ ।
ಹೊಂದಿ ಸಂತೋಷವನು ನೃಪತಿಗೆ
ತಂದೆಗಳು ಬಡಜನರ ಸ್ವಾಮಿಗ
ಳೆಂದು ಹರಕೆಯ ರೂಪದಿಂದಂ ಕೊಟ್ಟರೈ ತಾವು ॥೫॥

ರಾಜ ರತ್ನಗೆ ಸನದುಗಳ ಕೆಲ
ರಾಜಿಸುವ ಸದ್ಗ್ರಂಥಗಳ ಕೆಲ
ತೇಜವುಳ್ಳ ಸುವರ್ಣ ರುದ್ರಾಕ್ಷಿಗಳ ಸುಮಾಲೆಯನು ।
ರಾಜ ಮಣಿಗಳು ಬಳಿಕ ಗುರುಗಳ
ರಾಜರಿಗೆ ಬಿನ್ನಪವ ಗೈದರು
ಮೂಜಗದ ಪತಿಯಂತಿರುವ ಗುರುವರರೆ ಕೊಡಿರೆನಗೆ ॥೬॥

ಪರಕೆ ತಮ್ಮ ಸುಧಾವಚನದಿಂ
ಹರಸಿದರು ಶ್ರೀ ಪೂಜ್ಯಪಾದರು
ದೊರೆಗಳೇ ನೀವಾಗುವಿರಿ ದೊರೆ ನಾಡಿಗೆಮ್ಮೆಲ್ಲಾ ।
ಸರುವ ಜನಗಳು ತೋಷವಡೆವೊಲು
ನೆರೆಯೆಸಗುವಿರಿ ನಿಮ್ಮಯಾಳಿಕೆ
ಹರುಷ ಬಟ್ಟರು ಕೇಳಿಯಾತಿಗಳ ಹರಕೆ ನೃಪತಿಗಳು ॥೭॥

ಹೋದರೈ ಮತ್ತೊಮ್ಮೆ ವಂದಿಸಿ
ಸಾದರದೆ ಗುರು ಚರಣರಾಜರು
ಸಾದರದೆ ಮೇಣ್ ಪ್ರೇಮ ಪೂರ್ವಕ ನೃಪರ ಕಳಿಸಿದರು ।
ಈ ದಯಾ ಮೂರ್ತಿಗಳು ಶ್ರೀಗಳು
ಮೇದಿನಿಯೊಳಗೆ ಜನಿತ ಸಾಂಬರು
ಬೋಧಕರು ಗುರುಸಿದ್ಧರಾಜರು ಹುಬ್ಬಳ್ಳಿಯ ಪುರದ ॥೮॥

ಇತ್ತು ಮೊದಲೊಳು ಮಠದ ಪದ್ಧತಿ
ಚಿತ್ತವಿಸಿರೈ ಶ್ರೋತ್ರರೆ ಹೀ
ಗಿತ್ತು ವರ್ಷದೊಳೊಂದು ಸಲ ಭಿಕ್ಷೆಯನು ಮಾಡಲಿಕೆ ।
ಸತ್ತಮರು ಶ್ರೀ ಜಗದ ಗುರುಗಳು
ಹೊತ್ತಿನೊಳು ಚೆಲು ಹೋಗುತಿರೆ ತಾ
ವೆತ್ತಲಿಕೆ ಭಿಕ್ಷೆಯನು ಹುಬ್ಬಳ್ಳಿ ಪುರದೊಳಗೆ ಜಿಡಸೆ ॥೯॥

ಹೋಗಿ ಮನೆಯಲಿ ಭಕ್ತನೊಬ್ಬನ
ಯೋಗಿಗಳು ತಾವ್ ಕುಳಿತು ಕರೆಯಿಸಿ
ರಾಗದಿಂದಂ ಭಕ್ತರೆಲ್ಲರ ಭಿಕ್ಷೆ ನೀಯಲಿಕೆ ।
ಸಾಗಿದನಿತವರಿಂದೆ ಧನವ
ನೀ ಗುರುಗಳುರೆ ಮೋದದಿಂದಂ
ಹೋಗುತಿದ್ದರು ಕೊಂಡು ಧನವನು ತಮ್ಮ ಸನ್ಮಠಕೆ ॥೧೦॥

ಕೊಡುತಿದ್ದವು ಧನವು ಭಿಕ್ಷೆಯು
ಕೂಡಲೇ ಕೆಲ ದಿವಸದಲ್ಲಿದು
ಜೋಡಿರದ ಘನಮಠದ ಯತಿಗಳಿಗೆನಿತು ಸಾವಿರವು ।
ಗಾಢ ಕೀರ್ತಿಯನಾಂತ ಶ್ರೀಗಳು
ಮಾಡ ಭಿಕ್ಷೆಯ ಹೋಗಲಿಲ್ಲವು
ನಾಡೆ ತೊರೆದರು ರೀತಿಯಾ ಗುರುಸಿದ್ಧ ಯತಿವರರು ॥೧೧॥

ಸಂತತಿಯು ತಾನಿರದ ಹಲರಿಗೆ
ಸಂತತಿಯು ಕೊಟ್ಟಿಹರು ಸಿದ್ಧರು
ಶಾಂತ ಮೂರ್ತಿಗಳಿವರು ತಾವವರೆಲ್ಲ ವಂಶವನು ।
ಈಂತು ಕರುಣವನುಳಿಸಿ ಜಗದ
ಲಂಥವರ ಬಲು ಹರಕೆವಡೆವರು
ಕಂತುರಿಪುವಿನ ಭಕ್ತಮಣಿಗಳು ಪುಣ್ಯದೇಹಿಗಳು ॥೧೨॥

ಕಳೆದಿಹರು ಹಲ ಜನರ ರುಜೆಗಳ
ಗೆಲವ ಬಲು ಪೊಂದಿರುವ ಸಿದ್ಧರು
ಕಳೆದಿಹರು ಭೇಷಜವ ಕೊಡದೇಹರಸಿ ಮುಖದಿಂದೆ ।
ಕಳೆಯಲಿಕೆ ತಾಂ ಸಾಧ್ಯವಿಲ್ಲದ
ಬಲುಹು ಬಲ್ಲವರಾದ ಡಾಕ್ಟರ
ಬಲುವು ಬಲ್ಲವರೆಂದು ಮೆರೆಯುವ ವೈದ್ಯರವರಿಂದೆ ॥೧೩॥

ಹಿರಿಯ ಬೇನೆಯ ಕಳೆದಿರುವರೀ
ಹಿರಿಯ ಸಿದ್ಧರು ಪರಸಿ ಕೆಲವರ
ಸರಿ ಇರುವದೇ ಪುಣ್ಯಕಿಹದಲಿ ಜಗದ ಗುರುವರರು ।
ಪರಮ ಪುಣ್ಯವನದನು ಪಡೆದರು
ಪರಿಪರಿಸಿ ಮೇಣ್ ದೈನ್ಯ ಹಲವರ
ಪರಿಸಿ ದಯದಿಂ ಧನಿಕರಾಗಿಸಿ ಜನಗಳನ್ನಂಥ ॥೧೪॥

ಭೂತ ಬಾಧೆಯ ಹಲವರೀ ಪ್ರ
ಖ್ಯಾತ ಯತಿಗಳು ದೂರಗೆಯ್ದರು
ನೀತಿ ಪಥವನು ಬಿಡದೆ ನಡೆದಿಹ ಪ್ರಣಿತ ಗುರುವರು ।
ಸಾತಿಶಯ ಸಚ್ಛೀಲರಾಗಿರೆ
ಪೂತ ದೇಹಿಗಳಿವರು ಯತಿಗಳು
ಮಾತುಗಳ ಪ್ರಿಯವಾದ ನುಡಿಯು ಜ್ಞಾನ ಭೂಷಿತರು ॥೧೫॥

ಧನದ ದಾನವ ಮಾಡಿದವರೀ
ಘನ ಮಹಿಮರನು ಮೀರಿದಂತಹ
ವಿನುತ ಭಾರತ ದೇಶದೊಳು ಕೆಲರಿಹ ಮನಿಜವಿದುವು ।
ತನಯರನು ಕೊಡಲರಿಯರವರ್ಕೈ
ಪ್ರಣಿತ ಗುರುಗಳು ಶಕ್ತಿಯುತರಾ
ಧನದ ದಾನವನೆನಿತು ಗೆಯ್ದರು ಸಾಟಿಯಲ್ಲವರು ॥೧೬॥

ಘನ ಮಹಿಮ ಗುರುಸಿದ್ಧರಾಜರು
ಧನದ ದಾನವ ಗೈದರಲ್ಲದೆ
ತನಯರನು ಕೊಟ್ಟಿಹರು ಹಲರಿಗೆ ವಿದಿತವಿದೆ ನಿಮಗೆ ।
ವಿನುತರಿವರೊಲು ಭೂತ ಪೀಡೆಯ
ಮನುಜರಿರುವರು ಕಳೆದವರು ಕೆಲ
ಘನವ ಪಡೆದಿಹ ನಮ್ಮ ನಿಂದಲಿ ಮಾಂತ್ರಿಕರು ತಾವು ॥೧೭॥

ಬಲರಹಿತರು ಮಾಂತ್ರಿಕರುಗಡ
ಒಲವು ಬಲಯುತರಾದ ಯತಿಗಳು
ಒಲುವಸಗಿಡೊಲು ಧನದ ದಾನವ ಮಾಡಲಿಕ್ಕವರು ।
ನಿಲಯರಾದ ಪರೋಪ ಕೃತಿಗಳ
ಒಲು ಸಮರ್ಥಗುರೂತ್ತಮರು ತಾವ್
ತುಲರಹಿತರೀ ಪತ್ತು ಲಕ್ಷವು ದಾನ ಮಾಡಿಪರು ॥೧೮॥

ಬೇನೆಗಳ ಕಳೆಯುವರು ವೈದ್ಯರು
ಬೇನೆಗಳ ಪೂರ್ಣ್ ಕಳೆಯುವರು ತಾವ್
ಜ್ಞಾನಿಗಳು ಡಾಕ್ಟರರು ಪಲಪರ ಸತ್ಯವಾದುದಿದು ।
ಜಾಣರವರೊಳಗಿಲ್ಲ ಶಕ್ತಿಯು
ದಾನವಿನುತೆಸಗುತಿಪ ಯತಿಯೊಲು
ತಾನು ಮಕ್ಕಳ ಕೊಡುವ ಬಲವದುವಿಲ್ಲವು ಭಯರೊಳು ॥೧೯॥

ಕಳೆಯಲಾರರು ಜನರ ಬಡತನ
ಪಲಪರಿದ್ದರು ಸಾವುಕಾಗರು
ಕಳೆದಿಪರು ಪಲ ಜನರ ಬಡತನ ಸಿದ್ಧ ಮಣಿಯಿವರು ।
ಇಳೆಯ ಮೇಲಣ ಧನಿಕರೆಸಗಿದ
ತಳೆವ ಶಾಟಿಯ ಯತಿ ಮಣಿಗಳೀ
ಸಲೆ ಯೆಸಗಿಪರು ಕಾರ್ಯತಪ ಧನ್ಯರೈ ಇವರು ॥೨೦॥

ಸಿದ್ಧ ಪುರುಷರು ಮಾಡಬಲ್ಲರು
ಸಿದ್ಧರಿವರೊಲು ಸಕಲ ಕಾರ್ಯವ
ಸಿದ್ಧರಿವರೋತ್ ಧನದ ದಾನವ ಮಾಡಲಿಲ್ಲವರು ।
ಬುದ್ಧಿಗಳಿಗೀ ಸಮವಿರುವ ಪ್ರ
ಸಿದ್ಧ ಲಿಂಗಾಯತರ ಧರ್ಮದೊ
ಳಿದ್ದರು ಅತಿ ವಿರಳರೆಂಬುದು ಸತ್ಯಸಂಗತಿಯು ॥೨೧॥

ಸೆನಪಿಡಿರಿ ನೀವ್ ಸರ್ವಭಕ್ತರೆ
ಘನಮಹಿಮರಾಗಿರುವ ಶ್ರೀಗಳ
ವಿನುತರಲ್ಲಿಹ ಸಕಲ ಬಲ ವಿದ್ದವರು ಮತ್ತಾರೂ ।
ಜನಿಸಿದದರತಿ ವಿರಳ ವಿಂದಿಗೆ
ಮನುಜ ವಂಶದಿ ಸರಿ ಇವರುಗಳ
ಜನ ಜನಿತವಾಗಿರುವ ಭಾರತದಲ್ಲಿ ಮೇಣ್ ಜಗದಿ ॥೨೨॥

ಸಿದ್ಧ ಪುರುಷರು ದೂರವಿರುವರು
ತಿದ್ದಲಾಗದ ಬಾಳೆ ತೊಡಕಿಂ
ಸಿದ್ಧರಿವರಿಗೆ ಜಗದ ಗುರುಗಳು ಪರಮ ಮಠಕೊಂದು ।
ಶುದ್ಧ ಮನದಿಂ ಧರ್ಮಸೇವೆಯ
ಬುದ್ಧಿಗಳು ಮಾಡಿಹರು ನೈಜವು
ಸಿದ್ಧರಲಿ ವೈಶಿಷ್ಟ್ಯ ವೀಪರಿಯಿರುವ ದಿವರುಗಳ ॥೨೩॥

ಪೇಳುವೆವು ಮತ್ತೊಮ್ಮೆಯದನೇ
ಕೇಳುವದು ಮನಗೊಟ್ಟು ಶ್ರೋತೃರೆ
ಪೋಲು ಶ್ರೀಗಳಲಿದ್ದ ವಿಧವಿಧ ಶಕ್ತಿಗಳನೆಲ್ಲ ।
ತಾಳಿರುವವಾ ಶಕ್ತಿ ಒಡದಲೆ
ಕೇಳಿರೈ ಇದ್ದಂಥ ವ್ಯಕ್ತಿಯು
ಮೇಲೆನಿಪ ಭಾರತದೊಳಿದ್ದರು ವಿರಳ ನಿಜವವರು ॥೨೪॥

ಗಳಿಸಲಿಕೆ ಸಿದ್ಧಿಗಳ ಕಷ್ಟವ
ಒಲುವೆಸಗ ಬೇಕಾಗುವದು ಗಡ
ನೆಲ ಬೇಕಾಗುವದು ಕಾಡೊಳು ಯೋಗ ಮಾಡಲಿಕೆ ।
ಕಳೆಯ ಬೇಕಾಗುವದು ಕಾಲವ
ಮೆಲೆದು ಫಲಗಳ ಕಂದಮೂದವ
ಕಳೆಯ ಬೇಕಾಗುವದು ದ್ವಾದಶ ವರ್ಷಗಳನಲ್ಲಿ ॥೨೫॥

ಬಳಿಕ ಲಭಿಪವು ಸಿದ್ಧಿಗಳು ತಾವ್
ಗಳಿಸಿ ಕೊಡನಿತವರು ಗಳಿಗವು
ನೆಲಿಸಿದದರಿಂ ಪಡೆಯ ಸಿದ್ಧಿಯ ಕಾಡಿನಲಿ ತಾನು ।
ಬಲುವು ಕೀರ್ತಿಯನಾಂತ ಜಗದೊಳು
ಬಲುವು ಬಲಯುತಸಿದ್ಧ ಪುರುಷನು
ತಳೆದಿಹನು ತಾಂ ಕಾಡ ಸಿದ್ಧಾಭಿದೆಯ ಲೋಕದೊಳು ॥೨೬॥

ಅಡವಿಯೊಳು ವಾಸಿಸಿದರಿಂದಂ
ಪಡೆದಿಹನು ತಾಂ ನಾಮವೊಬ್ಬನು
ಬಿಡದೆ ಅಡವಿಯ ಸ್ವಾಮಿಯೆಂಬುದು ನಾಡಿನೊಳಗೆಮ್ಮ ।
ಪಡೆಯದೇ ಆಕಷ್ಟನಸುವೂ
ಅಡವಿಯಲಿ ಗುಹೆಯಲ್ಲಿ ನೆಲಸದೆ
ಮೃಡನು ಕೊಟ್ಟಿರೆ ಸಿದ್ಧಿ ಬಲವಾ ಜಗದ ಗುರುಗಳಿಗೀ ॥೨೭॥

ಮಾಡಲಿಕೆ ಕಲ್ಯಾಣ ಜನಗಳ
ಮಾಡಿ ಕಷ್ಟವ ಗಳಿಸಿಕೊಂಬರು
ನಾಡೆ ಸಿದ್ಧಿಯ ಸಿದ್ಧ ಪುರುಷರು ಪುಣ್ಯ ದೇಹಿಗಳ
ಜೋಡಿಯಲ್ಲ ಸಿದ್ಧರಿವರಿಗೆ
ಮಾಡಿದರು ತಾವೆನಿತು ದಾನವ
ನಾಡಿನೊಳಗಿಹ ಬಾಳ್ವೆಗಾರರು ಧನವ ತಾವುಗಳು ॥೨೮।

ಧನದ ಬಲದಿಂದಾಗದೆಂದೂ
ತನಯರನು ಬಂಜೆಯರಿಗೀವುದು
ಧನದೆ ಬಾರದು ಹೋದ ಜೀವವು ಮರಳಿ ತಾನೆಂದೂ ।
ತನಯರನು ಕೊಡಬಲ್ಲರೈ ಮೇಣ್
ತನುವ ತೊಲಗಿದ ಪ್ರಾಣತರಿಸಲು
ಘನಮಹಿಮರೀ ಶಕ್ತಿವಂತರು ಸಿದ್ಧಜನರಿವರು ॥೨೯॥

ಬಲುವಿನಯಿಗಳು ಶಾಂತನಿಧಿಗಳು
ಬಲು ಕರುಣೆಗಳು ಮೃದು ಹೃದಯಿಗಳು
ಕಳೆಯಲಿಲ್ಲರಗಳಿಗೆ ಪರಹಿತ ತೊರೆದು ಕಾಲವನು ।
ಪರರ ಗುಣ ವತ್ಯಲ್ಪವಿದ್ದರು ಗಿರಿ ಸಮಾನವು ತಿಳಿಯುತಿದ್ದರು
ನೆಲಸಿರುವ ಪರರಲ್ಲಿ ಗುಣವನು ತಿಲದನಿತು ತಾವ್ ತಿಳಿಯುತಿದ್ದರು
ನೆಲದ ಮೇಲಿನ ಸಾಂಬರಿವರು ಗಿರಿಯ ಸಮಾನವದು ॥೩೦॥

ಮಾಡಿಪರು ಪರಮೋಮಕಾರವ
ನಾಡೆ ಜನಗಳ ಮೇಲೆ ಶ್ರೀಗಳು
ಜೋಡಿಯಿಲ್ಲವು ಗುರು ಸಮೂಹದೊಳಿವರಿಗಾರಾರೂ ।
ಮಾಡಿದರೆ ಸ್ತುತಿಯ ನನ್ನದು
ಮಾಡಬೇಡಿರಿ ಸ್ತುತಿಯ ನನ್ನದು
ಕೂಡಲೇ ತಾವುಸುರುತಿದ್ದರು ಸೇರದಕೆ ತಮಗೆ ॥೩೧॥

ಸ್ವಾಮಿ ರತ್ನರು ಜಗದ ಗುರುಗಳು
ಪ್ರೇಮದಿಂ ಧನ್ಯರನು ತಾವುರೆ
ನಾಮದೊಂದಿಗೆ ನೀವು ನೀವೆಂದೊರೆಯುತಿರೆ ಬಿಡದೆ ।
ಸೀಮೆಯಿರದೀ ಕೀರ್ತಿವಂತರು
ಕೋಮಲಾಂಗರು ನುಡಿಯುತಿದ್ದರು
ಹೇಮದಂತಹ ಗುಣದ ಯತಿಗಳು ನಾನು ನನ್ನೆಂಡ ॥೩೨॥

ದೇವ ಲೋಕದೆ ದರೆಗೆ ಬಂದರು
ತಾವು ಜನಿಸಿ ಮನುಜರೂಪದೆ
ಪಾವನರು ಸಲೆ ಲೋಕ ಕಲ್ಯಾಣಾರ್ಥ ಯತಿಯಿವರು ।
ದೇವಲೋಕದ ಸಿದ್ಧನಾಗಲಿ
ದೇವ ಲೋಕದ ರುದ್ರನಾಗಲಿ
ಪಾವ ಕಾಂಬಕನಂಶವಾಗಲಿ ಶ್ರೀಗಳಿರಬಹುದು ॥೩೩॥

ದೇಶದೊಳು ಭಾರತದ ರಾಷ್ಟ್ರವು
ಶೇಷ ಗಣದೊಳಗಾದಿ ಶೇಷನು
ಭೂಷಣದಿ ನವರತ್ನಹಾರವು ಶ್ರೇಷ್ಠವಾದಂತೆ ।
ರಾಶಿಯಂತಹ ಪುಣ್ಯ ಕೃತಿಗಳ
ಭೂಶಿವನು ತಾವಾದ ಗುರುಸಿ
ದ್ಧೇಶ ಗುರುಗಳು ಶ್ರೇಷ್ಠರಾಗಿರೆ ಗುರುನಿಕಾಯದೊಳು ॥೩೪॥

ಮೃಗಗಳಲಿ ಮೃಗರಾಜನಂದದಿ
ಖಗಗಳಲಿ ತಾಂ ಗರುಡನಂದದಿ
ನಗಗಳಲಿ ಹಿಮ ಶೈಲದಂದದಿ ಶ್ರೇಷ್ಠವಾಗಿರಲು ।
ಜಗದ ಗುರುಗಳು ಮೂರುಸಾವಿರ
ಮಿಗಿಲು ಮಠದಾ ಸ್ವಾಮಿರಾಜರು
ಜಗದಿ ಯತಿಗಳ ವೃಂದದಲಿ ಗುರುಸಿದ್ಧಯತಿವರರು ॥೩೫॥

ಫಲಗಳಲಿ ಮಾವಣ್ಣಗಳ ತೆರ
ಹೊಳೆಗಳಲಿ ಮಂದಾಕಿನಿಯ ತೆರ
ನೆಲದೊಳಗೆ ಶ್ರೀ ವೀರಶೈವರ ಧರ್ಮವಿವೃತಾ ತಾವು ।
ಬಲುಹು ಪರತರವಾದ ತೆರದೊಳು
ಸಲೆಯುಪಕೃತಿಗಳೆಸಗುವವರಲಿ
ಬಲು ಗರಿಷ್ಠರು ಶ್ರೀ ಜಗದ್ಗುರುವಿವರು ಹುಬ್ಬಳ್ಳಿಯ ॥೩೬॥

ವೀರಶೈವ ಸುಧರ್ಮ ಭೂಷರು
ವೀರಶೈವ ಸುಧರ್ಮ ಸಾಗರ
ತಾರಕೇಶ್ವರರಿವರು ಹುಬ್ಬಳ್ಳಿ ಮಠದ ಸ್ವಾಮಿಗಳು ।
ವೀರ ಶೈವರ ಸುಹಿತ ಕಾರರು
ವೀರ ಶೈವ ಸಮಾಜ ದೇಳ್ಗೆಗೆ
ಸಾರ ಚರಿತರು ತನು ಮನೋಧನ ಸಲ್ಲಿಸಿದನರರು ॥೩೭॥

ಜಗವನೆಲ್ಲವ ತುಂಬಿ ತುಳುಕುವ
ಮಿಗೆ ಮಮತೆಯಿಂ ಜಗವ ಸಲಹುವ
ಸಗುಣ ಮಣಿಗಳ ಕೋಶನಾಗಿಹ ಪಾರ್ವತೀಶ್ವರನು ।
ಅಘವ ನಮ್ಮಯ ಕ್ಷಮಿಸಿ ಪೊರೆಯಲಿ
ಸಗುಣಗಳ ದಯದಿಂದ ಲೀಯಲಿ
ಹೊಗಳುವೊಲು ಸಲೆನಾಮ ತನ್ನಯ ಬುದ್ಧಿಯನು ಕೊಡಲಿ ॥೩೮॥

ಶಾಂತಿ ಸೌಖ್ಯಾದಿಗಳ ನೀಯಲಿ
ಕಂತುವಿನರಿಪುವಾದ ಸಾಂಬನು
ಚಿಂತೆಯೆಂಬುವ ದೈತ್ಯನನು ಸಂಹರಿಸಲೈ ಜವದೆ ।
ಸಂತತವೂ ತಾಂ ನಡೆಸಲೆಮ್ಮನು
ನ್ನಾಂತು ಕರುಣವ ನೀತಿ ಪದದೊಳ
ನಂತನಾಗಿಹ ಶಿವನು ಕೊಡಲಾರೋಗ್ಯ ಭಾಗ್ಯವನು ॥೩೯॥

ಕೊಡಲಿ ಬಲವನು ಬುದ್ಧಿಯನು ಮೇಣ್
ಕೊಡಲಿ ವಿದ್ಯೆಯ ಹೆಚ್ಚಿಗಾತನು
ಕೊಡಲಿ ದೀರ್ಘಾಯುಷ್ಯವನು ಸಂಪದವ ತಾನಧಿಕ ।
ಜಡಧಿಯನು ಸಂಸಾರದೆಂಬುವ
ಕಡು ದಯದೆ ತಾಂ ದಾಂಟಿಸಲಿ ಸಲೆ
ಬಿಡದೆ ಪೊರೆಯಲಿ ನಿರುತ ನಮ್ಮನು ಚಂದ್ರಶೇಖರನು ॥೪೦॥

ಸ್ಮರಿಸುವದು ಚಿರಕಾಲ ಮನದಲಿ
ಪರುಷದಿಂ ಶಿವನಾಮ ನೀವುರೆ
ತೊರೆದು ಪಾಪದ ಕಾರ್ಯವೆಲ್ಲವ ಪುಣ್ಯ ಕೃತಿಗೆಯ್ದು ।
ಹರ ಸದಾಶಿವ ಭಕ್ತ ವತ್ಸಲ
ಪರಮ ಪಾವನ ಮೂರ್ತಿ ಶಂಕರ
ಜಾಹ್ನವೀ ಧರನ ॥೪೧॥

ನಂದಿವಾಹನ ನೀಲಕಂಧರ
ಮಂದರಾ ಚಲ ಧಾಮರುಮುನಿ
ವಂದಿತಾಂಘ್ರಿ ಪಯೋಜವ್ಯಾಘ್ರ ಜಿನವಸನಮೃಡನ ।
ಇಂದು ಶೇಖರ ಭಾಲಲೋಚನ
ಸ್ಕಂದ ಗಜಮುಖ ಪಿತ ಜಟಾಧರ
ದಂದ ಶೋಕ ವಿಭೂಷ ಪುರಹರ ಧವಲ ತನುಯುತನ ॥೪೨॥

ಅಥಣಿ ಕಡೆಗಿಪ ದೊಡ್ಡವಾಡದಿ
ಚತುರನಾದಪ್ಪಣ್ಣ ಗೌಡನ
ಸುತಗೆ ಶಿವಗೌಡನಿಗೆ ಭೀಕರ ರೋಗವಾಗಿರಲು ।
ಪ್ರಥಿತವಿಹ ಡಾಕ್ಟರನ ಕಡೆಯಿಂ
ಸತತವುಪಚಾರವುರ ಸಾಗಿತು
ಹಿತವ ಹೊಂದದೆ ರೋಗಿಯೇನು ತಾನು ಬಳಲುತಿರೆ ॥೪೩॥

ಉಳಿದ ಲಕ್ಷಣ ತೋರಲಿಲ್ಲವು
ಕಳೆದು ಕೊಂಡರು ಕಾಲು ಸರ್ವವು ಸು
ಬಲು ನಿರಾಶೆಯ ಹೊಂದಿದರು ಮನೆ ಮಂದಿಯಾವಾಗೆ ।
ಬಳಿಕ ದೇವರ ನಾಮ ನೆನೆಯುತೆ
ಮಲಗಿದನು ಅಪ್ಪಣ್ಣ ಗೌಡನು
ಚೆಲುವು ಸ್ವಪ್ನವು ಬಿದ್ದಿತಾಗಳು ಬಳಿಕ ಗೌಡನಿಗೆ ॥೪೪॥

ಹೋಗು ಕೆಂಪಯನವರ ಮಠಕಾ
ಬೇಗನೇ ನೀ ಸುತನೊಡನೆ ಗಡ
ಬಾಗಿ ಸ್ವಾಮಿಯ ಚರಣ ಕಮಲಕ್ಕಂಬಲಿಯು ಕುಡಿಸು ।
ಹೋಗಿ ಬಿಡುವದು ನಿಮ್ಮ ಮಗನನು
ರೋಗ ತೀವ್ರವೆ ಎಂದು ತದುಪಂ
ರಾಗದಿಂ ಸಂತೋಷದಿಂದಂ ಮರುದಿವಸ ತಾನು ॥೪೫॥

ಮಗನ ಕರಕೊಂಡವನು ನಡೆದನು
ಮಿಗೆ ಮುದದೆ ಮನೆ ಮಂದಿಗಾಗಳು
ಸುಗುಣೆಯಪ್ಪಣ್ಣ ಗೌಡ ನೊರೆದಾ ಸ್ವಪ್ನ ವಿಷಯವನ್ನು ।
ಜಗದ ಜನಕನ ನಾಮ ನೆನೆಯುತೆ
ಮಿಗಿಲು ಮಠಕಾ ಹೋಗಿ ಮನದೊಳ
ಗೊಗೆದ ಭಕ್ತಿಯ ಭಾವದಿಂದಂ ಸ್ವಾಮಿ ಚರಣವನು ॥೪೬॥

ನಮಿಸಿ ಶಿರ ಸಾಷ್ಟಾಂಗದಿಂದಂ
ನಮಿಸಲಿಕೆ ಹಚ್ಚಿದನು ಮಗನನು
ಸುಮನ ಸಮಮೃದು ಹೃದಯಿಗಳಿಗಾ ಮಗನ ಸ್ಥಿತಿಯನ್ನು ।
ಮಮತೆಯಿಂ ಬಲು ಪೇಳಿ ತದುಪರಿ
ಸುಮರೇ ತಾವುಳಿಸಿಕೊಳ್ಳಿರಿ
ಪ್ರಮುದ ಗೊಳಿಸಿರಿ ನಿಮ್ಮ ಭಕ್ತನ ದಯದೆ ನೀವೆಂದು ॥೪೭॥

ಹೇಳಿದನು ಕೆಂಪಯ್ಯನವರಿಗೆ
ತಾಳಿ ಮುದವಪ್ಪಣ್ಣ ಗೌಡನು
ಹೇಳಿದರು ಕೆಂಪಯ್ಯ ಸಿದ್ಧರು ನಿಮ್ಮ ಮಗನಿವನು ।
ಬಾಳುವನು ಬಹು ದಿವಸ ಜಗದಲಿ
ತಾಳದಿರಿ ನೀವ್ ಚಿಂತೆನಸುವೂ
ಕಾಲ ದೆಗೆವದು ಬೇನೆ ಕೂಡಲೆ ಕುಡಿಸಿರಂಬಲಿಯ ॥೪೮॥

ಎಂಟು ದಿವಸವು ಬಿಡದೆ ಕುಡಿಸಿರಿ
ಕಂಟಕವು ಬೇನೆಯದು ಹೋಹುದು
ಬಂಟನಾಗಿಹ ಸಿದ್ಧರಲಿ ಕಡುಕಾಡ ದೇವರದು ।
ಉಂಟು ಮಠದಲಿ ಗಡಿಯು ನೀವ್
ಎಂಟೊಡಲ ನೋಲಿರುವ ಸಿದ್ಧನ
ದೆಂಟು ದಿನ ದರ್ಶನವ ಪಡೆವುದು ಮತ್ತ ನೀವುಗಳು ॥೪೯॥

ಒರೆದ ತೆರದೊಳು ಸ್ವಾಮಿ ಕೆಂಪಯ
ಪರುಷದಿಂ ನೆಲೆಸಿದರು ಮಠದಲಿ
ಕರುಣೆಯಪ್ಪಣ ಗೌಡ ಶಿವಗೌಡರು ದಿವಸವೆಂಟು ।
ವರುಶನವ ಶ್ರೀ ಕಾಡದೇವರ
ಗುರುವಿನಾ ತಾವ್ ಪಡೆವದಲ್ಲದೆ
ಪರಮ ಕೆಂಪಯ ಸ್ವಾಮಿದರ್ಶಪಡೆಯುತಿರೆ ನಿತ್ಯ ॥೫೦॥

ಕುಡಿಯ ಹತ್ತಿದ ಬಳಿಕ ವಂಬಲಿ
ಬಿಡದೆ ಶಿವಗೌಡನು ಮಮತೆಯಿಂ
ಕಡು ಭಕುತಿಯಿಂ ತಾನು ಮೈಯಲಿ ಬೇನೆಯಿದ್ದಾಗೆ ।
ನಡೆಯಿತ್ತೈ ಶಿವಗೌಡನನು ತಾಂ
ಕೆಡಕು ಬೇನೆಯು ಬಿಟ್ಟು ತೀವ್ರತೆ
ಕುಡಿದ ಮರುದಿನ ಕಾಲ ಕೀಳಲು ಹತ್ತಿತಾ ರುಜೆಯು ॥೫೧॥

ಕಳೆದ ನಂತರ ವೆಂಟು ದಿವಸಗ
ಳಿಳಿದು ಹೋಯಿತು ರೋಗ ಸರ್ವವು
ಬಳಿಕ ನಡೆದರು ತಂದೆ ಮಕ್ಕಳು ತಮ್ಮ ಗ್ರಾಮಕ್ಕೆ ।
ಇಳೆಯ ಮೇಲಣ ಸಾಂಬರಾಗಿಹ
ಬಲು ಮಮತೆಯಿಂ ಪೊರೆವ ಭಕ್ತರ
ನಿಲಯ ಸದ್ಗುಣರಾದ ಕೆಂಪಯನವರ ಪದಕೆರಗಿ ॥೫೨॥

ನೋಡಿ ಯತಿಗಳ ಮಹಿಮೆ ಕಣ್ಣಿಂ
ನಾಡೆ ವರ್ಧನ ವಾಯ್ತು ಭಕ್ತಿಯು
ಗೌಡನಲಿ ದೊಡವಾಡ ಗ್ರಾಮದ ಸ್ವಾಮಿ ಪಾದದಲಿ ।
ಮಾಡಿದನು ತಾಂ ಭಕ್ತಿಯಿಂದಂ
ಗೌಡನಾ ತರುವಾಯ ಹುಟ್ಟಿದ
ನೋಡಿರೈ ಪುತ್ರನಿಗೆ ಕೆಂಪಪನಾಮ ಕರಣಪನು ॥೫೩॥

ಕೇಳಿ ಜನರಿಂ ಜಗದ ಗುರುಗಳ
ಮೇಲು ಕಾರ್ಯಂಗಳನು ತಾನುರೆ
ಕೇಳಿಯವರುರು ಮಾಳ್ಪದಾನದ ಕಾರ್ಯವನು ಮತ್ತು ।
ತಾಳಿ ಮನದೊಳು ಭೂರಿ ಹರ್ಷವ
ಕೇಳಿರೈ ಅಪ್ಪಣ್ಣ ಗೌಡನ
ಶೂಲ ಭಕ್ತನ ಬಯಕೆಯಾಯಿತು ತನ್ನ ಹೊಲವೊಂದು ॥೩೪॥

ದಾನ ಮಾಡುವ ಪರಮ ಗುರುವಿಗೆ
ತಾನು ಶ್ರೀ ಗಳಿಗರಹಿತನ್ನಯ
ಮಾನಸದಿ ಭವಿಸಿರುವ ವಾಂಛೆಯ ಕೂಡಲೇ ತಾನು ।
ಸಾನುರಾಗದೆ ಮೋದದಿಂದಲಿ
ಜಾಣ ಗೌಡನು ದೊಡ್ಡವಾಡದ
ಮಾನ ನಿಧಿಗಳಿಗೊಪ್ಪಿಸಿದನೈ ಸತ್ತಿಯೂರೊಳಿಹ ॥೩೫॥

ತನ್ನ ಹೊಲ ವಿಪ್ಪತ್ತು ಎಕರೆ
ಚನ್ನವಾದುದು ಪುಣ್ಯವಡೆಯಲು
ಚಿನ್ನದಂತಹ ಗುಣದ ಶ್ರೀಗಳು ಹರುಷದಿಂದೆ ಬಲು ।
ನನ್ನಿ ನುಡಿಯುವ ಗೌಡನವನನು
ಸನ್ನುತರು ಹೊಗಳಿದರು ಮುಖದಿಂ
ಗನ್ನ ತ್ಯಾಗವು ನಿಮ್ಮದೆಂದರು ಗೌಡನಿಗೆ ತಾವು ॥೩೬॥

ದೊಡ್ಡವಾಡದ ಬಳಿಯೊಳಿಹುದಾ
ದೊಡ್ಡ ಹೊಳೆ ಕೃಷ್ಣಾಂಬೆ ತೀರದಿ
ಗುಡ್ಡವಿಲ್ಲದ ಸತ್ತಿಯೆಂಬುವ ಧಣಿ ಮಾರ್ಗದಲಿ ।
ದೊಡ್ಡವರು ನಿಜದಾನಿಗಳು ಬಲು
ಗೊಡ್ಡು ಜನ್ಮವು ದಾನಮಾಡದ
ಹೆಡ್ಡ ಮನುಜನ ಜನ್ಮ ಜಗದಲಿ ಸತ್ಯವಾದುದಿದು ॥೩೭॥

ಪ್ರೀತಿಯಿಂದಪ್ಪಣ್ಣ ಗೌಡನು
ಖ್ಯಾತ ಮಠದಾ ಮೂರುಸಾವಿರ
ನೀತಿ ಪುಣ್ಯಳಿ ಜಗದ ಗುರುಗಳಿಗುಸುರಿದನು ಹೀಗೆ ।
ಮಾತು ನನ್ನದು ನಡೆಸುವದು ಪ್ರ
ಖ್ಯಾತರೇ ನಾಂ ಸಾಯುವಾಗಳು
ಪಾತಕಿಗೆ ದರ್ಶನವ ತಮ್ಮಯ ಕೊಡಲು ಬರಬೇಕು ॥೫೮॥

ಏನು ಹೇಳುವಿರಿದನು ಗೌಡರೆ
ನಾನಿರುವೆನೇ ಬಂದು ಸ್ಥಳದಲಿ
ಪ್ರಾಣ ನಿಮ್ಮಯ ಹೋಪ ಸಮಯವು ತಿಳಿವುದೆಂತನಗೆ ।
ನಾನು ಕೊಡುವೆನು ನಿಮಗೆ ವಚನವ
ಸಾನುರಾಗದೆ ಸಾಧ್ಯವಿರದದು
ತಾನು ಕಡೆಗಾಣಿಪನು ಶಂಭುವು ನನ್ನವಚನವನು ॥೫೯॥

ಕಳೆದ ಮೇಲ್ ಕೆಲವರ್ಷಗಳು ತಾವ್
ಬಲು ಮಮತೆಯಿಂ ಹೋಗಿ ಬಿಟ್ಟರು
ಚೆಲುಮನಸಿನಪ್ಪಣ್ಣ ಗೌಡನು ದರ್ಶನಕೆ ಯತಿಯ ।
ಬಳಿಯೊಳಿಹ ಪುಕ್ಕೇರಿ ರೋಡಿಗೆ
ತಳೆದು ವಿಶ್ವಾಸವನು ಮನದೊಳು
ನೆಲಸಿರಲು ಬೇಕೆಂದು ಹುಬ್ಬಳ್ಳಿ ಶ್ರೀಗಳಲ್ಲೀನೆ ॥೬೦॥

ಇರದಿರಲು ಶ್ರೀ ಜಗದ ಗುರುಗಳು
ಕರುಣೆಗಳು ತಾವ್ ಸ್ಥಾನ ದೊಳಗಾ
ತೊರೆಯದೇ ಆಶಯನು ಶ್ರೀಗಳ ದಾರಿನೋಡುತ್ತೆ ।
ಗುರುಗಳಾಶ್ರಮದೊಳಗೆ ವಾಸವ
ಹರುಷದೊಳು ಮಾಡಿದನು ಗೌಡನು
ಜ್ವರವು ಬರಹತ್ತಿದವು ಗೌಡನಿಗೆ ಬಳಿಕವಾಶ್ರಮದಿ ॥೬೧॥

ಮಲಗಿದನು ದಾರಿಯನು ನೋಡುತೆ
ತುಲವಿರದ ಶ್ರೀ ಜಗದ ಗುರುಗಳ
ಬಲು ಭಕುತಿಯಿಂ ರೋಗ ಪೀಡಿತ ಗೌಡನಾವಾಗೆ ।
ಕಳೆಯಲಿಲ್ಲವು ಜ್ವರವು
ಘಲಗಿ ಬಿಟ್ಟನು ತೊಲಗಿಪಂಗನು
ಸಲೆ ಯುಸುರಿನಿಪ್ಪತ್ತು ದಿನ ಗುರುಗಳನು ನೆನೆಸುತ್ತೆ ॥೬೨॥

ಜಗದ ಗುರುಗಳಿಗಿದುವು ಸರ್ವವು
ಒಗೆಗೆ ಗೊತ್ತಾಗಿತ್ತು ಗೌಡನು
ಮಿಗೆ ಭಕುತಿಯಿಂ ದಾರಿ ನೋಳ್ಪನ ತಮ್ಮದೆಂಬುವದು ।
ಸುಗುಣ ಗೌಡನ ರೋಗ ಬಿಡದದು
ನಗ ನಿವಾಸ ನೊಳೈಕ್ಯವಡೆವನು
ಹೊಗಳಿಕೆಗೆ ಸತ್ಪಾತ್ರರಾಗಿಪ ಯತಿವರರು ತಿಳಿದು ॥೬೩॥

ಹೊರಟು ಬಂದರು ತಮ್ಮ ಮಠದಿಂ
ದರುಶನವ ಕೊಡಲಿಕ್ಕೆ ಗೌಡಗೆ
ಪರಮ ಗುರುಗಳು ವಚನವಿತ್ತೊಲು ಗೌಡನಿಗೆ ತಾವು ।
ತ್ವರದೆ ಕಾರೊಳು ಬಂದು ಬಿಟ್ಟರು
ಮೆರೆಯುತಿಪ ಹುಕ್ಕೇರಿ ರೋಡಿನ
ನೆರೆಯೊಳಿರುವಾ ತಮ್ಮಯಾಶ್ರಮದೊಳಗೆ ಶ್ರೀಯವರು ॥೬೪॥

ಬಂದು ಗೌಡನ ಬಳಿಗೆ ಶ್ರೀಗಳು
ತಂದೆಗಳು ಬಲು ಪ್ರೀತಿಯಿಂದಂ
ವಂದಿಸುವ ಕೈ ಮುಗಿದು ಗೌಡಗೆ ಹರಕೆಯನು ಕೊಟ್ಟು ।
ಮುಂದೆ ತಾವ್ ತುಸು ಹೊತ್ತು ಕುಳಿತರು
ಸುಂದರು ಚೆಲು ಮಾತನಾಡುತೆ
ಹೊಂದಿಬಿಟ್ಟನು ಮರಣ ಗೌಡನು ಕೂಡಲೇ ತಾನು । ॥೬೫॥

ಸೋಮ ಶೇಖರ ನೀಲಕಂಧರ
ಕಾಮ ಸಂಹರ ಶೂಲ ಧೃಶಕರ
ಸಾಮಚಾಜಿನ ವಸನ ಶಂಕರ ಗಿರೀಶ ಶೂಲಧರ ।
ವ್ಯೋಮಕೇಶ ಗಜಾಸ್ಯಪಿತ ಶಿವ
ಹೇಮ ಪರ್ವತ ಸದನ ಶಾಂಭವ
ತಾಮರಸ ಭವ ವಿಷ್ಣ ಪೂಜಿತ ಪಾದನಿಗೆ ಜಯವು ॥೬೬॥

( ಹದಿನೈದನೆಯ ಸಂಧಿ ಮುಗಿದುದು )

§ ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಪ್ರಸನ್ನ §



# ಹದಿನಾರನೆಯ ಸಂಧಿ

ಸೂಚನೆ:–

ಕೇಳಿ ಕೀರ್ತಿಯ ಜಗದ ಗುರುಗಳ
ತಾಳಿ ಹರ್ಷವ ತಾವು ಬಂದರು
ಮೇಲು ಯತಿಗಳು ಸೇಗುಣಸಿ ಸ್ವಾಮಿಗಳು ದರ್ಶನಕೆ ।

ಶ್ರೀ ಗುಹ ಗಣಪ ಜನಕ ಶಂಕರ
ನಾಗಭೂಷಣ ಸರ್ವ ಮಂಗಲ
ನಾಗ ಚರ್ಮಾಂಬರ ಸದಾಶಿವ ಭಕ್ತವತ್ಸಲನು ।
ನಾಗಜಾಪತಿ ವೃಷಭ ವಾಹನ
ಯೋಗಿಜನ ಹೃದ್ಭವ ವಾಸನು
ರಾಗದಿಂದಂ ಪೊರೆಯಲನುದಿನ ನಮ್ಮನೆಲ್ಲರನು ॥೧॥

ಜಗದ ಗುರು ಗುರುಸಿದ್ಧರಾಜರು
ಮಿಗಿಲು ಸಾಹಸಿಗಳು ಸುಧೀರರು
ನಗನಿವಾಸನ ಪೂರ್ಣ ಕೃಪೆಯಂ ಹೊಂದಿದಂಥವರು ।
ಮಿಗೆ ಚೆಲುವು ಮಾಡಿದರು ಮಹಿಮರು
ಸುಗುಣಗಳು ತಮ್ಮಾಳ್ಕೆ ತಮ್ಮಯ
ಮಿಗೆ ಮೆರೆಯುತಿಹ ಮೂರುಸಾವಿರ ಮಠದ ಹುಬ್ಬಳ್ಳಿಯ ॥೨॥

ಹಲವು ಕಾರ್ಯಕ್ಷೇತ್ರಗಳಲುರೆ
ಒಲುವು ಚತುರತೆಯಿಂ ಕೆಲಸವ
ಬಲು ಸಮರ್ಥರು ಜಗದ ಗುರುಗಳು ಮಾಡಿಹರ ತಾವು ।
ಆಲಸತನವನ್ನರಿಯದವರೀ
ಗೆಲುವಿನಲ್ಲಿಯೆ ಕಳೆದು ದಿನಗಳ
ತುಲದಿಂದ ಗುರುಸಿದ್ಧರಾಜೇಶ್ವರರು ಶ್ರೀಯವರು ॥೩॥

ಹಲವು ಪುಸ್ತಕಗಳನು ಮುದ್ರಿಸಿ
ಸಲೆ ಪ್ರಕಟಗೊಳಿಸಿದರು ಯತಿಗಳು
ಚೆಲವಿರುವ ಶ್ರೀ ಕಾಡಸಿದ್ಧೇಶ್ವರ ವಚನ ಮತ್ತೆ ।
ಹಲವು ಲೇಖಕರಿಂದ ಬರೆಸಿದ
ಬಲುವು ಪ್ರಿಯವಾಗಿರುವ ಪುಸ್ತಕ
ಗೊಳಿಸಿದರು ತಾವ್ ಪ್ರಕಟವನ್ನು ಪ್ರಶಸ್ತಿ ಹರಿಹರನ ॥೪॥

ಅಚ್ಚುಹಾಕಿಸಿ ಗ್ರಂಥಗಳನಾ
ವುಚ್ಚ ಕೋಟಿಯ ಸ್ವಾಮಿರತ್ನರು
ಹೆಚ್ಚಿನಾನಂದದಲಿ ಕೊಟ್ಟರು ಗ್ರಂಥಗಳನೆಲ್ಲಾ ।
ಇಚ್ಛೆಯಿರುವಾ ಓದುವವರೊಳು
ಬಿಚ್ಚುಮನಸಿನ ಜನಗಳಿಗೆ ತಾವ್
ಕೆಚ್ಚೆದೆಯ ಗುರುಸಿದ್ಧ ದೇವರು ಬೆಲೆಯ ಕೊಳ್ಳದಲೆ ॥೫॥

ಮಾಡಿದರು ದಾನವನು ಶ್ರೀಗಳು
ನಾಡೆ ಪ್ರುಸ್ತಕ ರೂಪದಿಂದಂ
ಕೇಡು ಭಕ್ತರಿಗಾಗದೊಲು ರಕ್ಷಿಸುವ ಕರುಣೆಗಳು ।
ಮಾಡುತಿದ್ದರು ಶೋಧ ಮಹಿಮರು
ಮಾಡಿ ವಿತರಣಮಾರ್ಗ ನಿರುತಂ
ನಾಡಿನಲಿ ಕೀರ್ತಿಸಿದ ವಿರತರು ಧನದ ವೈರಿಗಳು ॥೬॥

ಕಾಡದೇವರ ಮಠದವರುನುತ
ಕಾಡದೇವರ ಪರಮ ಭಕ್ತರು
ಮಾಡಿದವರು ಪರೋಪಕೃತಿ ಬಹು ಬಿಡದೆ ಜನ್ಮದಲಿ ।
ಮಾಡುವರು ಬಹು ಮಮತೆ ಜನರನು
ಮಾಡಲಿಲ್ಲವು ಪಾಪಕಾರ್ಯವ
ನಾಡಲಿಲ್ಲವು ಪುಸಿನುಡಿಯನೀ ಜಗದ ಗುರುವಿವರು ॥೭॥

ಮೆರೆವ ಕೊಲ್ಲಾಪುರದ ಕಡೆಗಿಹ
ಹಿರಿ ಕಿರಿಯ ಹಳ್ಳಿಯೊಳು ಹರಡಲು
ಪರಮ ಸಿದ್ಧನ ಕಾಡಸಿದ್ಧೇಶ್ವರನ ವಚನಗಳ ।
ಪರಮ ಸಿದ್ಧರು ಕಳಿಸಿ ಕೊಟ್ಟರು
ತರುಣರನು ಕೆಲವರನು ಮುದದಿಂ
ಗುರುಗಳೊರೆದೊಲು ಮಾಡಿದರು ಸಲೆ ಕೆಲಸವನ್ನವರು ॥೮॥

ಮಾಡಿದರು ಧನನೆರವನವರಿಗೆ
ಮಾಡಿದಕ್ಕಾಕಾರ್ಯ ಸಮುಚಿತ
ಗಾಡ ತೋಷದೆ ಜಗದಗುರು ಗುರುಸಿದ್ಧಯೋಗಿಗಳು ।
ನೀಡುತಿದ್ದರು ಹೆಚ್ಚು ಹಣವನು
ಮಾಡಿದವರಿಗೆ ಕೆಲಸ ತಮ್ಮಯ
ಮಾಡಿದನಿತಲ್ಲದತಿ ಕೆಲಸವ ಸಂಯಮಿಗಳವರು ॥೯॥

ಇರುವದಾ ಭಾಗದಲಿ ವಿಶ್ರುತ
ಪರಮ ನಾಗಿಹ ಕಾಡದೇವರ
ಮೆರೆವ ಮಂದಿರ ಸಿದ್ಧಗಿರಿಯೆಂಬಲ್ಲಿ ಸುಂದರವು ।
ಇರುವರತ್ತಲೆ ಲಿಂಗವತರು
ಕರುಣೆ ಸಿದ್ಧೇಶ್ವರನ ಭಕ್ತರು
ಪರುಷದೊಳು ಬಲು ಕೆಲವರು ಮಹಾರಾಷ್ಟ್ರ ದೇಶದ ॥೧೦॥

ಸರ್ವ ಜಗವನು ಸಲಹುತಿರುವಾ
ಸರ್ವ ವಿಶ್ವದ ಜನಕನಾಗಿಹ
ಶರ್ವನಂಘ್ರಿಪಯೋಜಯುಗ್ಮಕೆ ನಮನ ವಿರಲೆಮ್ಮ ।
ಸರ್ವ ಸಂಕಟ ನಾಶವಡೆವುವು
ಸರ್ವ ದುಃಖಿತವು ಸುಟ್ಟುಹೋಹುದು
ಪಾರ್ವತೀಶನ ನಾಮ ನೆನೆದರೆ ಸರ್ವ ಜನರುಗಳ ॥೧೧॥

ಮನವು ನಿರ್ಮಲವಾಗಿ ಬಿಡುವದು
ತನುವಿಗಾಗದು ರೋಗ ಪೀಡೆಯು
ಜನರು ಸನ್ಮಾನವನು ಗೆಯ್ವರು ಸೌಖ್ಯವರ್ಧಿಸುವದು ।
ವಿನಯ ಗುಣವು ವಿಕಾಸವಡೆವದು
ಧನದ ಸಂಚಯವಾಗಿಬಿಡುವುದು
ನೆನೆಸಿದರೆ ಶ್ರೀ ಪಾರ್ವತೀಶನ ಪರಮ ನಾಮವನು ॥೧೨॥

ಹರನು ಗಿರಿಜಾವರನು ಸಾಂಬನು
ಸ್ಮರನ ತ್ರಿಪುರವ ದಹಿಸಿದಾತನು
ದುರಿತ ಭೂದರ ಶಂಬನಾಗಿಹ ಕೆಂಜಟಾಯುತನು ।
ಧರಿಸಿ ಮಂದಾಕಿನಿಯ ಜಡೆಯೊಳು
ಧರಿಸಿರುವ ವೀಣ್ ಶೂಲ ಕರದೊಳು
ಪರಮ ಪಾವನ ಮೂರ್ತಿ ವೃಷಭಾರೂಢ ಶಂಕರನು ॥೧೩॥

ಗಜಮುಖನ ಷಣ್ಮುಖನ ಜನಕನು
ತ್ಯಜಿಸಿದಾತನು ವಿಭವನೆಲ್ಲವ
ಸುಜನರನು ಕಡು ದಯದೆ ಪೊರೆವನು ಶಿಕ್ಷಿಪನು ಬಿಡದೆ ।
ಕುಜನರನು ತಾಂ ಚಂದ್ರ ಭೂಷನು
ಗಜದ ಚರ್ಮಾಂಬರನು ನಂದಿ
ಧ್ವಜನು ಮೂಲೋಕ್ಯೈಕ ಸುಂದರನಾದ ಪರಶಿವನು ॥೧೪॥

ಪಂಚವದನನು ನಿಟಿಲ ನೇತ್ರನು
ಪಂಚತತ್ವದ ಪ್ರಾಣನವನು ವಿ-
ರಂಚಿ ಶಿರವನು ಛೇದಿಸಿಹ ವಿಷ ಕಂಧರನು ಶಿವನು ।
ಚಂಚಲವು ತಾನಿರದ ಮನದ ಪ್ರ-
ಪಂಚವೆಲ್ಲವು ತುಂಬಿ ತುಳುಕುವ
ಪಂಚಶರಪಿತನಿಂದೆ ಪೂಜಿಸಿಕೊಂಬವಗೆ ನತಿಯು ॥೧೫॥

ಸೇಗುಣಸಿಯೆಂಬೂರಿನೊಳಗಿಹ
ಯೋಗಿಗಳು ಮುರಘಪ್ಪ ಯತಿಗಳು
ತ್ಯಾಗ ವೀರರ ಮೂರುಸಾವಿರ ಮಠದ ಶ್ರೀಯವರ ।
ಮೇಗೆ ಭಕ್ತಿಯು ಪುಟ್ಟಿ ಮನದ
ಲ್ಲಾಗೆ ಹೋದರು ಸ್ವಾಮಿದರ್ಶನ
ಕಾಗಿ ಹುಬ್ಬಳ್ಳಿ ಮೂರುಸಾವಿರ ಮಠಕೆ ತಾವುಗಳು ॥೧೬॥

ಹೆಸರು ಪಡೆದವರವರು ಸುತ್ತಲು
ಶಶಿ ಸಮಾನ ಸುಶಾಂತ ವೃತ್ತಿಯೊ
ಳೆಸೆವ ವಿರತರು ಪಡೆದವರು ವಾಕ್ ಸಿದ್ಧಿಯನು ತಾವು ।
ಬಸವ ದೇವನ ಬಳಿಯೊಳಿರ್ದಾ
ಹೆಸರಿಸಿದ ಬಹು ಶರಣ ಜನರಲಿ
ಶಶಿಧರನ ಮುಗ್ಧ ಸಂಗಯನಂತೆ ಲೋಕದೊಳು ॥೧೭॥

ಒನ್ನಿರೇದರು ಜಗದ ಗುರುಗಳು
ಸನ್ನುತರು ಶ್ರೀ ಮುರಘ ಯೋಗಿಗೆ
ನನ್ನಿಯೇ ಸಂತೋಷವಾಯಿತು ನೋಡಿ ನಿಮ್ಮನ್ನು ।
ರನ್ನಗಳು ಸಾಗರ ದೊಳಿರುವೊಲು
ಚಿನ್ನವಿರುವೊಲು ತಾನು ಖಣಿಯಲಿ
ಸನ್ನುತರೆ ತಾವಡಗಿ ಕೊಂಡಿವೆ ನಿಮ್ಮ ತನುವಿನಲಿ ॥೧೮॥

ಜ್ಞಾನ ರತ್ನವು ಸಿದ್ಧಿ ಹೋಮವು
ಮಾನಿಗಳೆ ತಾವ್ ಹೀಗೆ ದರ್ಶನ
ಸಾನು ರಾಗದೆ ಕೊಡಲು ಮೇಲು ಮ್ಮೇಲೆ ಸಾರುವದು ।
ದೀನ ಜನಗಳ ತಂದೆಯಂತಿಹ
ಜ್ಞಾನ ಸಾಗರ ಜಗದ ಗುರುಗಳ
ಕಾಣರ್ಕೈ ನಮಿಸಿದರು ಪಾದವ ಮುರಘ ಯೋಗಿಗಳು ॥೧೯॥

ಸುಮನ ಸಮ ಮೃದು ಹೃದಯಯುತರೇ
ಪ್ರಮುದ ಮೂರ್ತಿಯೆ ಸಿದ್ಧ ಪುರುಷರೆ
ನಮಿಸಬಾರದು ನೀವು ನನ್ನನು ಸ್ವಾಮಿಗಳೆಂದು ।
ನಮನ ಗೆಯ್ಯುತೆ ಮುಗಿದು ಕರಗಳ
ಪ್ರಮುದದಿಂದಂ ಜಗದ ಗುರುಗಳು
ವಿಮಲತರ ಮಾನಸದ ಶ್ರೀಗಳು ಬಂದ ಯತಿಗಳನು ॥೨೦॥

ಇಟ್ಟುಕೊಂಡರು ನಾಲ್ಕು ದಿವಸವು
ಪಟ್ಟು ಸಂತೋಷವನು ಗುರುಗಳು
ಸುಟ್ಟ ಕಾಮನ ಸೇಗುಣಸಿಯಾ ಮುರಘ ಯತಿಗಳನು ।
ಗಟ್ಟಿಗರು ಶ್ರೀ ಜಗದ ಗುರುಗಳು
ಕೊಟ್ಟು ಮನವನು ಸ್ವಾಮಿಯುವಗ
ನಿಟ್ಟರ್ಕೈ ತೋಷದಲಿ ಮಿಗಿಲುಪಚಾರ ವೆಸಗುತ್ತೆ ॥೨೧॥

ಇದ್ದರಾ ಸೇಗುಣಸಿ ಯತಿಗಳು
ಮುದ್ದಿನಿಂ ಶ್ರೀಯವರ ಮಠದಲಿ
ಗೆದ್ದವರು ಮೋಹವನು ಶ್ರೀ ಮುರುಘಪ್ಪ ಸ್ವಾಮಿಗಳು ।
ಸಿದ್ಧರಾದರು ಹೋಗಲೂರಿಗೆ
ಬುದ್ಧಿಗಳು ಹುಬ್ಬಳ್ಳಿ ಶ್ರೀಗಳು
ಸಿದ್ಧರವರನು ಹರಸಿ ತೋಷದೆ ಕಳಿಸಿದರು ಬಳಿಕ ॥೨೨॥

ಬಿಡದೆ ನೀತಿಯ ಪಥದೆ ನಡೆವುದು
ಕಡು ಸುಖವ ನೀಯುವದು ಪಥವದು
ಒಡವರಿಗೆ ನೆರವಾಗುವದು ತಾವ್ ತನು ಮನೋಧನದೆ ।
ಹಿಡಿಯುವದು ಸಜ್ಜನರ ಸಂಗತಿ
ಪಡೆಯುವದು ಶಿಕ್ಷಣವ ಸರ್ವರು
ನುಡಿಯುವದು ಮಾತುಗಳ ಹೆರವರ ಮನವು ನೋಯದೊಲು ॥೨೩॥

ಪತಿಯ ಪತ್ನಿಯ ವ್ರತಗಳಿರುವವು
ವ್ರತಗಳಲಿ ಬಲು ಹಿರಿಯವಾದವು
ಮತಿಯುತರು ಪರಿ ಪಾಲಿಸುವರಾ ಹಿರಿಯ ವ್ರತಗಳನು ।
ಮತಿಯಿರದ ಜನ ತೊರೆದಾವ್ರತ
ಕ್ಷಿತಿಯೊಳಪಮಾನವನು ಪಡೆಯುವರು
ಸತತ ದುಃಖವ ಭೋಗಿಪರು ವ್ಯಭಿಚಾರಿಗಳು ಬಿಡದೆ ॥೨೪॥

ಪತಿಯ ವ್ರತೆ ಪಡೆಯುವಳು ಮಾನವ
ಸತತ ಜನರಲಿ ಮತ್ತು ತನ್ನಯ
ಪತಿಯ ಗೃಹದಲಿ ತವರ ಮನೆಯಲಿ ಮಾನವನು ನಿರುತ ।
ಪತಿಯ ವ್ರತೆಯೀ ಜಗದ ಪಾರ್ವತಿ
ಪತಿಯವ್ರತೆಯೇ ಲಕ್ಷ್ಮೀದರೆಯೀ
ಪತಿಯ ವ್ರತೆ ಸರ ಸತಿಯು ಮರ್ತ್ಯದಸ್ತುತ್ಯಳೈ ಆವಳು ॥೨೫॥

ಗಳಿಸಿ ಕೊಂಬಳು ಪತಿಯವ್ರತೆ ಸಲೆ
ಬಲು ಮಮತೆಯಂ ತನ್ನ ಗಂಡನ
ಗಳಿಸಿ ಕೊಂಬಳು ಪ್ರೀತಿ ಮೈದುನ ಭಾವರಿವರುಗಳ ।
ಗಳಿಸಿ ಕೊಂಬಳು ಜನನಿ ಜನಕರ
ಗಳಿಸಿ ಕೊಂಬಳು ಬಂಧು ಜನಗಳ
ಗಳಿಸಿ ಕೊಂಬಳು ತನ್ನ ಮಕ್ಕಳ ಪ್ರೀತಿಯನ್ನಾಕೆ ॥೨೬॥

ನಿರುತ ಸುಖದಲಿ ಕಾಲಕಳೆವಳು
ಪೊರೆಯುವನು ಕಡು ಪ್ರೇಮದಿಂದಂ
ಗಿರಿಜೆಯರಸನು ಶಿವನು ಕೊಟ್ಟುರು ವೈಭವವ ತಾನು ।
ಪೊರೆವವರು ತಾವ್ ಪತ್ನಿಸುವ್ರತ
ಧರೆಯ ಮೇಲಿನ ದೇವರವರೇ
ಪೊರೆಯುವನು ಜಗದೀಶನವರನು ಕೊಟ್ಟು ವೈಭವವ ॥೨೭॥

ಕಳೆವನಾತನು ಕಾಲಸುಖದಲಿ
ಬಲುವು ಮಾನವ ಪಡೆಯುವನು ತಾಂ
ನೆಲದ ಮೇಲೀ ಸಕಲ ಜನಂ ಬದುಕುವನು ಮತ್ತೆ ।
ಬಲುವು ಕಾಲವು ಲೋಕದಲ್ಲೀ
ಗಳಿಸಿ ಕೊಂಡಾರೋಗ್ಯ ಭಾಗ್ಯವ
ಚೆಲುವು ಬಲಯುತವಾದ ಮಕ್ಕಳು ಜನಿಪರಾತನಿಗೆ ॥೨೮॥

ಮಡದಿ ಸಂಪ್ರೀತಿಯನು ಪಾಳ್ವಳು
ಬಿಡದ ಪತ್ನಿಯ ವ್ರತದ ಪತಿಯನು
ಪಡೆಯುವನು ತಾಂ ಸ್ವರ್ಗಸುಖವನು ಪೊಡವಿಯೊಳಗವನು ।
ಹಿಡಿದ ಕೆಲಸದಿ ಯಶವ ಪಡೆವನು
ನಡೆಯುವದು ಜನ ನಮ್ರತನದಿಂ
ಬಿಡದ ಮಡದಿಯ ವ್ರತವನಾವರ ಪುಣ್ಯನರನೊಡನೆ ॥೨೯॥

ಪತಿಯ ವ್ರತ ಪತ್ನಿಗಳ ವ್ರತವ
ನ್ನತಿಸುದೃಢ ಮನದಿಂದೆ ಪೊರೆವದು
ವ್ರತಗಳಿಂ ಪೊರೆದರಿಗೆ ಸತಿ ಪತಿಯೆಂಬುವದು ಧರ್ಮ ।
ವ್ರತವ ತೊರೆದಿಹ ನಾರಿನರರಾ
ಕಥಿಸಬೇಕೇ ವಾಸಿಸುವ ಮನೆ
ಚತುರರೇ ಮನೆಯಲ್ಲಿ ನೈಜವು ಸುಡುವ ಕಾಡದವು ॥೩೦॥

ಇರಲಿ ಬೇಕಾದನಿತು ದ್ರವ್ಯವು
ತೊರೆದವರು ಪತಿ ಪತ್ನಿ ಸುವ್ರತ
ದೊರೆಯಲಾರವು ಸೌಖ್ಯ ಶಾಂತಿಗಳವರಿಗೆಂದೆಂದೂ ।
ಇರಲಿ ಬಡತನ ಸಾಕನಿತುತಾಂ
ಮೆರೆವವರು ಸತಿ ಪತಿಯ ವ್ರತದಿಂ
ಪರಮ ಸುಖ ಶಾಂತಿಗಳ ಪಡೆವರು ತಾವು ಜಗದಲ್ಲಿ ॥೩೧॥

ಚೆಲುವು ಮನೆತನವದುವು ನೈಜವು
ಚಲಿಸದಿರದಾ ಹಿರಿಯ ವ್ರತದಿಂ
ಚಲುವೆನಿಸದದು ದ್ರವ್ಯದಿಂ ಬರಿ ಮನೆತನವು ತಾನು ।
ತುಳಿಯದೇ ದುರ್ಮಾರ್ಗವನ್ನಾ
ಬಲುಕೆಡಕು ವ್ಯಭಿಚಾರವೆಂಬುವ
ಸಲೆ ನಡೆದು ವರನೀತಿ ಪಥದಿಂ ಸೌಖ್ಯವುಂಬುವದು ॥೩೨॥

ಆಳುವೊಲು ಘನರಾಜ್ಯವನು ನಿಜ
ಮೇಲು ಯೋಗ್ಯತೆಯುಳ್ಳವರು ತಾವ್
ಶೀಲ ಸಂಪದಯುಕ್ತರಾಗಿಹ ಜಗದ ಗುರುವರರು ।
ಕಾಲ ಕಾಲನ ಬಯಕೆಯಂದದಿ
ಕಾಲಗಳೆದರು ಪೂಜ್ಯಪಾದರು ವಿ
ಶಾಲವಾದದ್ದೊಂದು ಸನ್ಮತ ಕಾರ್ಯ ನಡೆಸುವಲಿ ॥೩೩॥

ಇಂಥ ಘನಮಠದೊಡೆತನವನು ತ
ಪಾಂತರಿವರುರೆ ಮಾಡುತಿದ್ದರು
ಸ್ವಂತ ತಾವಾನಂದದಲಿ ಸಲೆ ಮೆರೆಯುತಿರಲಿವರು ।
ಅಂಥ ಚತುರರು ಪೂಜ್ಯ ಪಾದರು
ಕಂತುರಿಪುವಿನ ಪರಮ ಭಕ್ತರು
ಚಿಂತಿಸದೆ ಮಠದಾಳ್ಕೆ ಸಹಜವೆ ಮಾಡಿದರು ತಾವು ॥೩೪॥

ಇದ್ದರೂ ತನುವಿರದ ತೆರದೊಳ
ಗಿದ್ದ ಮಿಥಿಪುರದ ನೃಪನು ಪ್ರ
ಸಿದ್ಧವಿರುವಾ ಜನಕ ರಾಜನ ಹಾಗೆಯೇ ಇವರು ।
ಸಿದ್ಧ ಪುರುಷರು ಜಗದ ಗುರುವರ
ರಿದ್ದರೂ ವೈಭವದೊಳುರೆ ತಾವ್
ಬುದ್ಧಿಗಳು ವೈಭವವೆ ಇಲ್ಲದ ಹಾಗೆ ಸಾಗಿದರು ॥೩೫॥

ವಚನಿಕರು ಬಹು ಜಗದ ಗುರುಗಳು
ವಚನ ಕೊಟ್ಟದು ತಪ್ಪಲಿಲ್ಲವು
ಸುಚರಿತ ಶ್ರೀ ಪೂಜ್ಯಪಾದರಾಜನ್ಮದಲ್ಲೆಂದು ।
ಉಚಿತ ವಚನಗಳಾಡುತಿರುವೀ
ಶುಚಿ ಮನದ ಶ್ರೀ ಸ್ವಾಮಿ ರತ್ನರು
ಪ್ರಚುರರಾಗಿಹರೆಮ್ಮ ಕನ್ನಡ ನಾಡಿನಲ್ಲೆಲ್ಲಾ ॥೩೬॥

ಚಿಕ್ಕ ಮಕ್ಕಳ ಮೇಲೆ ಶ್ರೀಗಳು
ಕಕ್ಕುಲತೆ ಬಲು ಮಾಡುತಿದ್ದರು
ಮುಕ್ಕಿದರು ಮಣ್ಣನ್ನು ರಿಪುಗಳು ಸಂಯಮಿಗಳಿವರ ।
ಅಕ್ಕರವ ಬಲು ಮಾಡುತಿದ್ದರು
ಸೊಕ್ಕಿರದ ಬಡ ಮಂದಿಗಳನೀ
ಸಕ್ಕರೆಯ ತೆರ ಮಧುರ ವಚನದ ಸದ್ಗುರುಗಳಿವರು ।೩೭॥

ಮಾಡುತಿರಲಿಲ್ಲಾರ ದ್ವೇಷವ
ಕಾಡುವವರದು ಕ್ಷಮಿಸಿ ತಪ್ಪನು
ಮಾಡಿ ಬೋಧವನಂಥ ಜನರಿಗೆ ಬುದ್ಧಿಗಲಿಸುತಿರೆ ।
ನಾಡ ಭೂಷಣರಾದ ಶ್ರೀಗಳು
ಕಾಡದೇವರ ಪರಮ ಭಕ್ತರು
ಹಾಡಿ ಹರಸುವ ಹಾಗೆ ಜಗವೇ ಕಾರ್ಯವೆಸಗಿಹರು ॥೩೮॥

ಆರ ಬುದ್ಧಿಯು ನೆರವನೆಂದೂ
ವೀರ ವಿರತರು ಪಡೆಯಲಿಲ್ಲೀ
ಸಾರಗುಣ ಮಂದಿರರು ಪ್ರತ್ಯುತ್ಪನ್ನ ಮತಿಯುವರು ।
ಆರ ಮನನೋಯಿಸದವರಗಂ
ಭೀರರಾದೀ ಜಗದ ಗುರುಗಳು
ಮೂರುಸಾವಿರ ಮಠದ ಶ್ರೀ ಗುರುಸಿದ್ಧ ನೃಪವರರು ॥೩೯॥

ಮೇಲು ಯತಿಗಳು ಪ್ರೇಮದಿಂದಂ
ಕೇಳುತಿದ್ದರು ಕೆಲ ಜನರುಗಳ
ಕೇಳಿರೈ ಆಲೋಚನೆಯ ತಾವ್ ವರಸಿದ್ಧ ರಾದಿವರು ।
ಕೇಳಿದುದು ಬಂದರೆಯೆ ಮನಕೀ
ಶೂಲ ಭಕ್ತರು ಸಮ್ಮತಿಸುತಿರೆ
ಕೇಳಿದುದು ಮಗವೊಪ್ಪದಿದ್ದರೆ ತ್ಯಜಿಸುತಿರಲವನು ॥೪೦॥

ಕಳೆಯುವಲಿ ನಿಜ ಭಕ್ತರೆಡರನು
ಬಲು ಸಮರ್ಥರು ಪೂಜ್ಯಪಾದರು
ನೆಲದ ಮೇಲಣ ಗಣಪರಾಗಿರೆ ಯೋಗಿವರರಿವರು ।
ಹಲವು ವಿಧದಿಂ ಲಿಂಗವಂತರ
ಸಲೆಯೆಸಗಲಿಕ್ಕೀಳಿಗೆ ತಾವ್
ತಳೆದು ಬಂದಿಹ ಮತ್ತೆ ಜನ್ಮವ ಬಸವನಹುದಿವರು ॥೪೧॥

ಮಾಡಿದರು ವ್ಯಯ ಯೋಗ್ಯ ಕಾರ್ಯಕೆ
ನಾಡೆ ಹಣವನು ಮಠದಿ ಕೂಡಿದ
ಮಾಡಿದರು ಬಹು ಜನರ ಹಿತದಲಿ ಚತುರ ಯತಿಯಿವರು ।
ಗಾಢ ಧ್ಯೇಯದೆ ವೀರಗುರುಗಳು
ಮಾಡಿ ಹೋದರು ಕಾರ್ಯವೆಲ್ಲವ
ಮಾಡುವೆವು ನಿಮಗದು ನಿವೇದನ ಮುಂದೆ ತೋಷದಲಿ ॥೪೨॥

ಪಾರಮಾರ್ಥಿಕ ವಿಷಯದಲಿ ಮತ
ವೀರಶೈವರ ಸತ್ಯವಾಗಿದೆ
ಸೇರುವದು ಶಿವನಲ್ಲಿ ಜೀವವು ಶಿವನೆ ಆಗುವದು ।
ಸೇರಿ ಶಿವನಲ್ಲೈಕ್ಯವಾದರು
ವೀರಶೈವರು ಹಲಜನರುಗಳು
ಬೇರೆಯವರೊಲು ತರ್ಕದಿಂದಾಗಿಲ್ಲ ಸಿದ್ಧವಿದು ॥೪೩॥

ಅನುಭವದ ಸಿದ್ಧಾಂತವಿರುವದು
ಜನ ಜನಿತವಿಹ ವೀರಶೈವರ
ದಿನಪನಂದದಿ ತೊಳಪಧರ್ಮದ ಮತಗರಿಷ್ಠಬಹು ।
ಜನಗಳೇಳ್ಗೆಗೆ ಸ್ಥಾನವಾಗಿದೆ
ಘನತೆಯಿಂ ಪಡೆದಿರುವ ಧರ್ಮವು
ಮನಕೆ ಸಂತೋಷವನು ಮಾಳ್ಪದು ಸುಜ್ಞಜಕಿದುವು ॥೪೪॥

ಎಸೆವ ಹುಬ್ಬಳ್ಳಿ ಪುರದಿ ನೆಲಸಿದ
ಹಸನ ಮನಸಿನ ವೈದ್ಯನೊಬ್ಬನು
ವಿಷಮ ನೇತ್ರಾನ ಹಾಗಿರುವ ಶ್ರೀ ಜಗದ ಗುರುವರರ ।
ಅಸಮ ಭಕ್ತನು ಸುಣ್ಣದೆಂಬುವ
ಹೆಸರದುವು ತಾನಡ್ಡ ಹೆಸರಿದೆ
ಕುಶಲರಾಗಿಹ ಜಗದ ಗುರುಗಳು ವೈದ್ಯ ಸಂಗಪ್ಪಗಾ ॥೪೫॥

ಕೊಡುತಲಿದ್ದರು ಪ್ರತಿವರುಷವೂ
ಒಡವರಿಗೆ ಗಡ ಕೊಡಲಿಕಾಷಧ
ಬಿಡದೆ ಯತಿವರ ಗೈದ ನೂರ್ ರೂಪಾಯಿಗಳವರೆಗೆ ।
ನಡೆಯುವುದು ಕ್ರಮವದುವು ತಪ್ಪದೆ
ಪಡೆಯುವವು ನೆರವನ್ನು ಮುದದಿಂ
ದೃಢ ಮನದ ಸದ್ಭಕ್ತ ಯತಿಗಳ ವೈದ್ಯ ಸುಣ್ಣದನು ॥೪೬॥

ಭಜಿಸುವದು ನೀವೆಲ್ಲ ಶ್ರೋತ್ರರೆ
ಸುಜನರೇ ಮನದಲ್ಲಿ ಸಾಂಬನ
ರಜನಿನಾಥನ ಧರಿಸಿರುವ ಶ್ರೀ ಶಿವನ ನಾಮವನು ।
ತ್ರಿಜಗವನ್ನೀ ಸೃಜಿಸಿದಾತನ
ಗಜವದನ ಷಣ್ಮುಖರ ಜನಕನ
ಕುಜವು ತಾನಾಗಿರುವ ದೇವರ ವಿಶ್ವಪಾಲಕನ ॥೪೭॥

ಅಗಿರುವವೋ ಹಲವು ಹಸ್ತಗ
ಳಾವಗಿರುವವೋ ಹಲವು ಮಸ್ತಕ
ವಾವಗಿರುವವೋ ಹಲವು ಕಂಗಳು ಕರ್ಣಗಳು ಹಲವು ।
ತೀವಿರುವನೀ ವಿಶ್ವವೆಲ್ಲವ
ಪಾವನಾತ್ಮನು ಪುಣ್ಯರೂಪನು
ದೇವನಾ ಒಹು ಭಕ್ತಿಯಿಂದಂ ಸ್ಮರಣವೆಸಗುವದು ॥೪೮॥

ಭಕ್ತಜನಗಳಿಗಾಗಿ ತಾಳ್ದನು
ಭಕ್ತವತ್ಸಲನಾದ ದೇವನು
ಮುಕ್ತಿಸತಿ ಸೀಮಂತ ರತ್ನನು ಪಂಚಮುಖಗಳನು ।
ಶುಕ್ತಿಜದ ಸಮ ಶುಭ್ರಕಾಯದ
ಯುಕ್ತಿಸಾಗರನಿವನು ತಳೆದನು
ರಕ್ತದೋಲು ಕೆಂಪಾದ ಜಡೆಗಳ ತಾನು ಶಂಕರನು ॥೪೯॥

ತಾಳಿದನು ದಶಕರಗಳನು ಮೇಣ್
ತಾಳಿದನು ಹಸ್ತದಲಿ ಶೂಲವ
ತಾಳಿದನು ಪಾಣಿಯಲಿ ಮತ್ತೆ ಪಿನಾಕ ಶಸ್ತ್ರವನು ।
ಭಾಲದಲ್ಲನಲಾಕ್ಷವನು ತಾಂ
ಮೇಲು ರೂಪವ ಸಾಟಿಯಿಲ್ಲದ
ಮೂಲದಲ್ಲಾ ಶಿವನು ತೋರಿದನೀಂತು ಭಕ್ತರಿಗೆ ॥೫೦॥

ಬಳಿಕ ಚಂದ್ರನ ಧರಿಸಿದನು ತಾಂ
ಬಳಿಕ ಗಂಗೆಯ ಶಿರದೊಳಾಂತನು
ಬಳಿಕ ಗಜಚರ್ಮವನು ವ್ಯಾಘ್ರಾಜಿನವ ಧರಿಸಿದನು ।
ಕಳೆದು ಮೊದಲಿನ ಶುಭ್ರ ವಸ್ತ್ರವ
ತಳೆದು ಸರ್ಪಂಗಳನು ಪ್ರೇಮದೆ
ತಳೆದನ್ಯೆ ತರುವಾಯ ಕಂಠದಿ ರುಂಡಮಾಲೆಯನು ॥೫೧॥

ನಂದಿಯನ್ನೇರುವನು ಸಾಂಬನು
ಮಂದರಾಚಲವನ್ನು ತನ್ನಯ
ಮಂದಿರವ ತಾನೆಸಗಿಕೊಂಡನು ಸರ್ವಮಂಗಲನು ।
ತಂದೆಯಾತನು ಸಕಲ ಲೋಕದ
ಮಂದಹಾಸಿತ ವದನಯುಕ್ತನು
ನಂದಿಕೇತನವುಳ್ಳವನು ಕರುಣಾರ್ಣವನು ಹರನು ॥೫೨॥

ಮೊದಲು ದಕ್ಷ ಬ್ರಹ್ಮ ಸುತೆಯಾ
ಸುದತಿ ಮಣಿ ಸತಿ ದೇವಿಯನು ತಾಂ
ಮದುವೆಯಾದನು ಬಳಿಕ ಪಾರ್ವತಿ ಕರವ ಧರಿಸಿದನು ।
ಮೊದಲು ಹಡೆದನು ವೀರಭದ್ರನ
ಬುಧನ ಗಣಪನ ಬಳಿಕ ಹಡೆದನು
ಸದಯ ಸಾಂಬನು ಹಡೆದನ್ಯೆ ತರುವಾಯ ಷಣ್ಮುಖನ ॥೫೩॥

ಅಮರ ಪತಿಯಿಂ ವಿಧಿಹರಿಗಳಿಂ
ದಮಿತ ಮಹಿಮನು ಪೂಜೆಗೊಂಬನು
ಸುಮನ ಶರಣಂ ತ್ರಿಪುರಮಂ ದಹಿಸಿದನು ಶಂಕರನು ।
ಕಮಲ ಜವಶಿರವನ್ನು ಕಡಿದನು
ಕುಮತಿಗಳು ಮೇಣ್ ದುಷ್ಟರಾಗಿರು
ವ ಮರವೈರಿ ಜಲಂಧರಾಧಿಕರನ್ನು ವಧಿಸಿದನು ॥೩೪॥

ಸರ್ವ ಲೋಕವ ಸಲುಹುತಿರುವನು
ಸರ್ವ ಲೋಕದ ದೇವನೀತನು
ಸರ್ವ ಸಜ್ಜನರನ್ನು ಪ್ರೇಮದೆ ಕಾಯುವನು ತಾನು ।
ಸರ್ವ ಜೀವರ ಮನದಿ ಸಾಗಿದ
ಸರ್ವವೂ ವ್ಯಾಪಾರ ಬಲ್ಲನು
ಪರ್ವತವೆ ಧನುಮಾಡಿ ಕೊಂಡಿಹ ಪಾರ್ವತೀಶ್ವರನು ॥೩೫॥

ಸ್ಮರಣಗೆಯ್ದರೆ ನಾಮವಾತನ
ದುರಿತವೆಲ್ಲವು ನಾಶವಡೆವುದು
ಹರಣವಾಗುವವೆಲ್ಲ ಕಂಟಕ ಸೌಖ್ಯ ಲಭಿಸುವದು ।
ಧರೆಯ ಮೇಲ್ ಬದುಕುವದು ಬಹುದಿನ
ಹರನ ನಾಮವ ಸ್ಮರಣಗೆಯ್ಯುವ
ನರರು ನಿಖಿಲರು ಶಾಂತಿಯನು ಬಲು ಹೊಂದುವದು ತಾವು ॥೩೬॥

ಹೆರವರಿಗೆ ನೆರವಾಗುವವರನು
ಜರೆಯದವರನು ಪರಜನರುಗಳ
ತೊರೆಯ ದವರನು ಪತಿಯ ಪತ್ನಿಯ ಶ್ರೇಷ್ಠ ನೀತಿಯನು ।
ಕರುಣ ಮಾಳ್ಪರ ಪ್ರಾಣಗಳ ಮೇಲ್
ಪರ ಜನರ ತನ್ನಂತೆ ತಿಳಿಯುವ
ನರರ ಮೇಲತ್ಯಾಧಿಕ ಮಮತೆಯ ಮಾಳ್ಪನೀಶ್ವರನು ॥೩೭॥

ನಡೆದರೆಯೆ ಸಲೆನ್ಯಾಯದಿಂದಂ
ನಡೆದರೆಯೆ ಕಡು ಪ್ರೇಮದಿಂದಂ
ಬಿಡದೆ ಸರ್ವರು ತಮ್ಮ ತಪ್ಪೊಳು ಹಿಗ್ಗುವನು ಶಿವನು ।
ಪಡೆಯುವದು ಬೇಕಿಲ್ಲ ಪೂಜೆಯ
ಪಡೆಯುವದು ಬೇಕಿಲ್ಲ ಸ್ತುತಿಯನು
ನಡೆಯುವದು ಬೇಕವಗೆ ಸಕಲರು ಪಾಪವಾಗದೊಲು ॥೫೮॥

ಒಡವರಿಗೆ ನೆರವಾಗುತಿರುವದು
ಮೃಡನ ಪೂಜೆಯು ಭಜನೆಯಾತನ
ನುಡಿಯುವದ ಮುಖದಿಂದ ಸತ್ಯವ ಸ್ಮರಣವದು ಶಿವನ ।
ಬಿಡದಿರುವದೇ ಸತಿಯ ಪತಿಗಳ
ಕಡು ಹಿರಿಯ ವ್ರತಗಳನು ಧಾನ್ಯವು
ಮೃಡನ ಪಾರ್ವತಿ ನಾಯಕನನಾಪಂಚ ಮುಖದವನ ॥೫೯॥

ಪಾಪ ಪೋಪದು ನಾಮ ನೆನೆದರೆ
ಪಾಪಿಗಳದಿದು ಸತ್ಯವಿದ್ದರು
ಪಾಪಿಗಳ ತಾಂ ಪ್ರೇಮಮಾಡನು ನೀಲಕಂಧರನು ।
ಕೋಪನು ಕಡ ಜನರ ಮೇಲಾ
ಪಾಪರಹಿತನು ಪುಣ್ಯಗಾತ್ರನು
ತಾಪಗಳ ಸಜ್ಜನರ ಕಳೆದರೆ ಪೊರೆವ ಶಂಕರನು ॥೬೦॥

ಸುಮಗಳಿಗೆ ಬೇಕಾಗದಿದ್ದರು
ತಮಗೆ ತಮ್ಮಯ ಗಂಧದಿಂದಂ
ಪ್ರಮುದ ಗೊಳಿಪ್ಪದು ನರರ ಸಹಜವೆ ನರನು ಪೊಂದುವೊಲು ।
ಸುಮ ಸುಗಂಧದೆ ತೋಷವನು ಬಲು
ಕಮಲ ಶಿರಧರ ಶಿವನನೆನೆದರೆ
ತಮವು ಪಾಪದನಾಶವಡೆವದು ಶಿವನಿಚ್ಛೆಯಿರದೆ ॥೬೧॥

ದೇವರನು ಸ್ತುತಿಸುವದು ಭಜಿಪುದು
ಪಾವನನ ಮಾಂಗಲ್ಯ ನಾಮವ
ತೀವಿದಂತಹ ಭಕ್ತಿಯಿಂದಲಿ ಸ್ಮರಿಸುವದು ಮತ್ತೆ ।
ನಾವು ನೀವುಗಳೆಲ್ಲರೂ ಸಲೆ
ಭಾವದೊಳು ಧ್ಯಾನಿಪುದು ನಿತ್ಯವು
ಭಾವಜಾರಿಯ ಸಗುಣ ರೂಪವ ಬಿಡದೆ ಮುದದಿಂದೆ ॥೬೨॥

ಮಾಡುವದು ಪೂಜೆಯನು ನಿತ್ಯವು
ಗಾಢ ತೋಷದೆ ಪಾರ್ವತೀಶನ
ಮಾಡುವದು ಸ್ತ್ರೀ ಪುರುಷರೆಲ್ಲರು ಲಿಂಗ ಪೂಜೆಯನು ।
ನಾಡೆಲಿಂಗಾಯತರು ತಪ್ಪದೇ
ಜೋಡಿಯಿಲ್ಲೀ ಶ್ರೇಷ್ಠ ಕಾರ್ಯಕೆ
ಜೋಡಿಯಿಲ್ಲೀ ಪುಣ್ಯ ಕಾರ್ಯಕೆ ಮತ್ತೆ ಜಗದಲ್ಲಿ ॥೬೩॥

ಕಾಲ ಕಾಲಗೆ ನೀಲಕಂಠಗೆ
ಶೂಲ ಹಸ್ತಗೆ ವ್ಯಾಲಭೂಷಗೆ
ಭಾಲನಯಗೆ ಶೈಲ ಸದನಗೆ ಶೈಲಜಾಪತಿಗೆ ।
ಮಾಲೆ ಶಿರಗಳ ಧರಿಸಿದಾತಗೆ
ಪೀಲು ಮುಖ ಷಣ್ಮುಖರ ಪಿತನಿಗೆ
ಪಾಲಿಸುವ ತಾಂ ವಿಶ್ವವೆಲ್ಲವ ಶಂಭುವಿಗೆ ಜಯವು ॥೬೪॥

(ಹದಿನಾರನೆಯ ಸಂಧಿ ಮುಗಿದುದು )

§ ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಪ್ರಸನ್ನ §



# ಹದಿನೇಳನೆಯ ಸಂಧಿ

ಸೂಚನೆ:– ಮುಗಿದುದು ಬಸವಣ್ಣ ತನ್ನಯ
ಜಗದೊಳತರಿಸಿರುವ ಕಾರ್ಯವು
ಬಗೆಗೆ ತಿಳಿಯಿತು ಕೂಡಿ ಬಿಟ್ಟನು ಸಂಗಮೇಶನಲಿ

ವಿಶ್ವ ಮಿತ್ರನು ವಿಶ್ವ ಬಂಧುವು
ವಿಶ್ವ ಜನಕನು ವಿಶ್ವಪಾಲನು
ವಿಶ್ವವನು ತನ್ನೊಡಲೊಳಿರಿಸಿದ ಶಾಶ್ವತ ಶಿವನು ।
ವಿಶ್ವವೆಲ್ಲವ ತುಂಬಿ ತುಳುಕುವ
ವಿಶ್ವವೆಲ್ಲಕೆ ಸ್ವಾಮಿಯಾಗಿಹ
ವಿಶ್ವ ವಂದ್ಯನು ಪಾರ್ವತೀಶನು ಸಲಹಲೆಮ್ಮನ್ನು ॥೧॥

ಬಸವ ದೇವನ ಮಿಕ್ಕ ಕಥೆಯ
ನ್ನುಸುರುವೆವು ನಾವಿನ್ನು ಕೇಳಿರಿ
ಹಸನ ಮನಸಿನ ಭಕ್ತ ಜನರೇ ನಾವು ಸರ್ವವನು ।
ವೃಷಭ ದೇವನೆ ಜನಿಸಿ ಬಂದನೋ
ಪಶು ಪತಿಯ ನರರೂಪ ತಾಳ್ದನೋ
ಬಸವನೆಂಬುದು ತಿಳಿಯಲಿಲ್ಲದು ತಾನು ಜನರಿಗೆ ॥೨॥

ಮರುದಿವಸ ತಾಂ ಹೋಗಿ ಬಿಟ್ಟನು
ಶರಣ ಹರಳಯ ನಾಲಯಕೆ ಗಡ
ಕರಗಳನು ಮುಗಿದವಗೆ ಗೈದನು ತಾನು ಶರಣಾರ್ಥಿ ।
ಹರುಷದಿಂ ಶರಣಾರ್ಥಿಯೆಂದನು
ಶರಣ ಹರಳನು ಮಧುವರಸಗಾ
ಕರೆದು ಪ್ರೇಮದೆ ಮಣೆಯ ನಿಟ್ಟನು ಕೂಡ್ರಲಿಕ್ಕವಗೆ ॥೩॥

ಮೊಚ್ಚೆ ಮಾಡುವ ಕೆಲಸವನು ಸಲೆ
ಸ್ವಚ್ಛ ಮನಸಿನ ಶರಣ ಹರಳನು
ಸ್ವಚ್ಛವಸ್ತ್ರವ ಧರಿಸಿ ಮಾಡುತ ಲಿದ್ದನಾವಾಗೆ ।
ಹಚ್ಚಿ ಕೊಂಡಿರಿ ಹಣೆಗೆ ಭಸ್ಮವ
ನುಚ್ಚ ಧರ್ಮದ ಶರಣನಾತನು
ಕೆಚ್ಚೆದೆಯ ಶಿವ ಶರಣಧರಿಸಿರೆ ಲಿಂಗ ಕಂಠದಲಿ ॥೪॥

ತುಂಬಿದಾನಂದದಲಿ ಕುಳಿತಿರೆ
ಶಂಭುವಿನ ವರ ಭಕ್ತ ನಾತನು
ತುಂಬಿರುವ ಗಂಭೀರವದನನು ಶರಣ ಹರಳಯನು ।
ಶಂಭುವಿನವರ ನಾಮ ಭಜನೆಯ
ತಾಂ ಬಿಡದೆ ಸಲೆ ಮಾಡುತಿದ್ದನು
ಧಂಬ ವರಿಯದ ಪರಮ ಶರಣನು ಸತ್ಯಮಾಯದೊಳಗಾ ॥೫॥

ಕೇಳಿದನು ಮದುವರಸನಿಗೆ ತಾಂ
ಫಾಲಲೋಚನ ಭಕ್ತ ಶರಣನು
ಹೇಳುವದು ತಾವ್ ಬಂದ ಕಾರಣವೇದು ವಿನಯದಲಿ ।
ಶೀಲ ಸಂಪದದಿಂದ ಯುಕ್ತರೆ
ಕೀಳ ಮನುಜನು ನಾನು ನಿಮ್ಮಯ
ಮೇಲು ಯೋಗ್ಯತೆಯರಿಯದೇಯಪಮಾನ ಮಾಡಿಹೆನು ॥೬॥

ವಿದಿತ ವಿರಬಹುದುದುವು ನಿಮಗುರೆ
ಸದಮಲಾತ್ಮರೆ ನನ್ನ ತಪ್ಪನು
ಸದಯರೇ ಕ್ಷಮಿಸುವದು ಕರುಣದೆ ಪಾಪಿ ಬಲುನಾನು ।
ಮುದದೆ ನಿಮ್ಮಯ ಪುತ್ರನಿಗೆ ನಾಂ
ಚದುರರೇ ಮಗಳನ್ನು ಕೊಡಲಿಕೆ
ವಿಧು ಧರನ ಪ್ರೇರಣೆಯ ತೆರದೊಳು ನಾನು ಬಂದಿಹೆನು ॥೭॥

ಕೇಳಿ ನಕ್ಕರು ಶರಣ ಹರಳನು
ಹೇಳುವಿರಿ ನೀವೇನು ದೊರೆಗಳೆ
ಕೀಳರೆಂದೆಮ್ಮನ್ನು ಜರೆವಿರಿ ನೀವು ಹಾರುವರು ।
ಕೀಳರೇ ನಾವ್ ಮೊಚ್ಚಿಗಾರರು
ಮೇಲು ಕುಲಜರು ಲಿಂಗವಂತರು
ಹೇಳಿದೊಳು ನೀವ್ ನಿಮ್ಮ ಮಗಳನು ಮಾಡಿಕೊಂಬುವದು ॥೮॥

ಆಗದೆಂದಿಗೂ ನಾವಿರುವವೈ
ಭೋಗಿ ಭೂಷನ ಭಕ್ತ ಜನಗಳು
ಸಾಗುವರು ಸೂತಕವ ಬಿಟ್ಟು ರೇಲಿಂಗ ಧಾರಿಗಳು ।
ಆಗಿಹಿರಿ ಭವಿ ನೀವು ದೊರೆಗಳೆ
ಹೀಗಿಹುದು ದ್ವಯರಲ್ಲಿ ಭೇದವು
ಸಾಗಲಾರದು ನಮಗೆ ಹಾರ್ವರ ಹೆಣ್ಣು ಮಾಡುವದು ॥೯॥

ಅವಧರಿಸಿ ಶಿವಶರಣ ನುಡಿದುದು
ತವೆ ಬಳಿಕ ಮಧುವರಸನೆಂದನು
ಭವಿಸಿ ಮನದಿ ವಿವೇಕದಿಟವಿದೆ ನಿಮ್ಮ ಮಾತೆಂದು ।
ಸವಿನಯ ದೇಶ ಶರಣಾರ್ಥಿ ಗೈದನು
ಶಿವ ಶರಣಗಾ ಚಿಂತೆ ಮಾಡುತೆ
ಭವನ ಕೈದನು ತನ್ನನಂತರ ಮಧುವರಸ ತಾನು ॥೧೦॥

ದುಗುಡದಿಂ ಕಡುಮ್ಲಾನವಾಗಿದೆ
ನಗೆಮೊಗದ ಮಧುವರಸನದು ಮುಖ
ಸುಗುಣೆಯಾಗಿಹ ಕೂಲಿ ಮಾಡುವ ಸುದತಿ ಕೇಳಿದಳು ।
ಮಿಗೆ ಕರುಣದಿಂ ದೊರೆಯೆ ನಿಮ್ಮ
ಮೊಗವು ಸಣ್ಣಾಗಿರುವ ಬಗಿಯ ಯೇಂ
ಬಿಗಿದ ಕೊರಳಿಂದೆಲ್ಲ ಸಂಗತಿ ಯಾಕೆಗುಸುರಿದನು ॥೧೧॥

ಕೇಳಿಯಾತನ ಮಾತು ತದುಪರಿ
ಹೇಳಿದಳು ಮಧುವರಸ ಗಾಕೆಯು
ಕೇಳಿರೆನ್ನಯ ಮಾತು ದೊರೆಗಳೆ ನಮ್ಮ ಧರ್ಮದೊಳು ।
ತಾಳಿ ಧೈರ್ಯವ ಬಂದು ಬಿಟ್ಟರೆ
ಮೇಲು ಶರಣನು ನಿಮ್ಮ ಮಗಳನು
ಶೀಲವಂತನು ತೆಗೆದುಕೊಂಬನು ಮದುವೆಯಾಗುವದು ॥೧೨॥

ಹರುಷ ಬಟ್ಟನು ಮಧುವರಸ ಬಲು
ಗರತಿಯಾ ಹಂಚಿಕೆಯನಾಲಿಸಿ
ತೊರೆದು ಬ್ರಾಹ್ಮಣ ಜಾತಿಯನು ಮನೆ ಮಂದಿಯೊಡಗೂಡಿ ।
ಪರಮ ಲಿಂಗಾಯತರ ಧರ್ಮದಿ
ಮರು ದಿವಸವೇ ಕೂಡಿ ಬಿಟ್ಟನು
ಶರಣ ಪುತ್ರನವುದುವರಸಸುತೆಯಾಯ್ತು ಪರಿಣವು ॥೧೩॥

ಬಹು ಸಮಾರಂಭದೊಳನಂತರ
ಬಹು ಮಮತೆಯಿಂ ಲಗ್ನವಾಯಿತು
ಮಹಿಯೊಳಗೆ ಬಹು ಕೀರ್ತಿಸಿದ ಕಲ್ಯಾಣ ಪಟ್ಟದಿ ।
ಅಹಿ ವಿಭೂಷನ ಭಕ್ತನವನಲಿ
ಮಹಿತರಾಗಿಪ ಬಸವನಿವನು ನಿ
ವಹವ ಶರಣರ ಕೂಡಿ ಬಂದಿರೆ ಭೋಜನಕ್ಕಾಗೆ ॥೧೪॥

ಹೇಳ ಹೋದರು ಬಿಜ್ಜಳರಸಗೆ
ತಾಳಲಾರದೆ ಜೈನ ವಿಪ್ರರು
ಬಾಳುವೆಯ ನಾವ್ ಮಾಡೆವೀ ಕಲ್ಯಾಣ ಪಟ್ಟಣದಿ ।
ಕೀಳ ಜಾತಿಯ ಸಮ್ಮಗಾರಗೆ
ಮೇಲು ಜಾತಿಯ ವಿಪ್ರನಿಂದಂ
ಬಾಲಿಕೆಯ ತಾವ್ ಕೊಡಿಸಿ ಲಗ್ನವಮಾಡಿದರು ಪುರದಿ ॥೧೫॥

ಊರ ಹೊಲಗೇರಿಯನು ಬಸವನು
ಘೋರ ಸಾಹಸದೊಳೊಂದು ಮಾಡಲು
ಮೀರಿರುವ ಯತ್ನವನು ಗೆಯ್ಯಲು ಪತ್ತಿಹನು ತಾನು ।
ಊರು ನಿನ್ನದು ಬಿಟ್ಟು ಸರ್ವರು
ಬೇರೆ ಯೂರೊಳಗಿರಲು ಗಮಿಪೆವು
ಭೂರಿ ಸುಖದಿಂ ಬಾಳ್ವೆ ಮಾಡಲಿ ಲಿಂಗಯುತರವರು ॥೧೬॥

ಕೇಳಿ ರಾಜನು ಪ್ರಜೆಗು ಹೇಳಿದ
ತಾಳ ಬಿಟ್ಟುದು ಲಿಂಗವಂತರು
ಹೇಳಿದನು ಗಂಭೀರರವದಿಂ ದೂರ ತೊರೆಯದಿರಿ ।
ಶೂಲಕೇರಿಸಿ ಬಿಡುವೆನವರನು
ಬಾಲಿಕೆಯ ಕೊಟ್ಟವಗೆ ಕೊಂಡವಗೆ
ಹಾಳು ಗೆಡಹಲು ಕುಳಿತಿಹರು ಲಿಂಗಾಯುತರು ಪುರವ ॥೧೭॥

ಕಳಿಸಿದನು ಸೇವಕರ ಕಡೆಯಿಂ
ತ್ವರದೆ ಮಧುವರಸನನು ಹರಳನ
ಪರಮ ರೋಷದೆ ಕೇಳಿದನು ಬಿಜ್ಜಳನರೇಶ್ವರನು ।
ಹರಳನಣುಗಗೆ ಕೊಟ್ಟಿರುವೆಯಾ
ತೊರೆದು ಜಾತಿಯ ರೂಢಿಯನು ಮಧು
ವರಸನೇ ಮಗಳನ್ನು ಬ್ರಾಹ್ಮಣನಾಗಿರಲು ನೀನು ॥೧೮॥

ನಿಜವು ದೊರೆಯೇ ಕೊಟ್ಟುದುದನಾಂ
ತ್ಯಜಿಸಿ ಬ್ರಾಹ್ಮಣ ಜಾತಿ ಮೊದಲಲಿ
ನಿಜವಿರುವ ಲಿಂಗಾಯತರ ಸದ್ಧರ್ಮ ಕೈಕೊಂಡು ।
ಸುಜನ ಹರಳಗೆ ಲಿಂಗವಂತಗೆ
ನಿಜವು ಕೊಟ್ಟುದು ನಾನು ಪುತ್ರಿಯ
ವಿಜಯ ಶೀಲನೆ ವಿಪ್ರನಲ್ಲವು ಲಿಂಗಯುತ ನಾನು ॥೧೯॥

ನೃಪತಿಯೆಂದನು ಬಳಿಕ ದ್ವಯರಿಗೆ
ಕುಪಥವಿದು ನೀವ್ ಹಿಡಿದ ಪಥವಿದು
ಕುಫಲದಾಯಕನೈಜೆ ಬಹುಜನದೊಪ್ಪರಿದನೆಂದೂ ।
ಸುಪಥ ಹಿಡಿವೊಲು ಲಿಂಗವಂತರು
ಚಪಲತನವಿದು ಸಾಗದೊಲು ಮೇಣ್
ನೃಪತಿಯೆನ್ನಯ ಕಾರ್ಯವಿದುವೆ ನಿಮ್ಮ ನೀರ್ವದನು ॥೨೦॥

ಗಲ್ಲಿಗೇರಿಸಿ ಬಿಡುವದಾಗಿದೆ
ಕೊಲ್ಲಿಸಿಯೆ ನಾಂ ಬಿಡುವೆ ನಿಮ್ಮನು
ನಿಲ್ಲುವದು ದುಷ್ಕೃತ್ಯವೀಥದು ವೀರಶೈವರಲಿ ।
ಎಲ್ಲಿ ಮಾತಿದು ಸಮ್ಮಗಾರಗೆ
ಸಲ್ಲಿಪುದು ಕನ್ನೆಯನು ವಿಪ್ರನು
ಸಲ್ಲದಂತಹ ನಡತೆಯಿದು ಬಹುಜನಕೆ ನಮ್ಮಗಳ ॥೨೧॥

ಎಂದು ರೋಷಾವೇಶದಿಂದಂ
ನೊಂದ ಮನದಾ ನೃಪತಿಯೆಂದನು
ಬಂಧುರಾಗ್ರಣಿ ಚನ್ನಬಸವನು ಮಂತ್ರಿಯಿರಲಾಗೆ ।
ಹೊಂದಿ ಶಾಂತಿಯ ರಾಜಗೆಂದನು
ಬಂಧ ಜಾತಿಯ ಮುರಿದುಬಿಟ್ಟಿದೆ
ಸುಂದರವು ಮೇಣ್ ಸತ್ಯವಾಗಿಹ ನಮ್ಮ ಧರ್ಮವಿದು ॥೨೨॥

ಇರುವರಿಬ್ಬರು ಲಿಂಗವಂತರು
ಜರಗಿಪುದು ಗಡ ಮದುವೆಯವರಲಿ
ದೊರೆಗಳೇ ತಪ್ಪಿಲ್ಲವವರದು ತಿಳಿದು ನೋಡುವದು ।
ಕರುಣಿ ಹರಳಯ ಬಳಿಕ ಪೇಳಿದ
ನಿರುವೆನ್ನೈ ನಾಂ ಲಿಂಗವಂತನು
ದೊರೆಯೆ ಮಾಳ್ಪಿನು ಸಮ್ಮಗಾರನ ಹೋರೆಯನು ನಾನು ॥೨೩॥

ಹೋರೆಯಲಿ ಹಿರಿ ಕಿರಿಯ ಭೇಧವು
ವೀರಶೈವರಲಿಲ್ಲ ರಾಜನೆ
ಬೇರೆ ಮತದರದಿರುವದಾಪರಿ ಭೇದ ನಿಜವಿಪುದು ।
ವೀರಶೈವರ ಧರ್ಮತಾನಿದು
ತೀರ ಸ್ವಾತಂತ್ರ್ಯವನು ಪಡೆದಿದೆ
ವೀರ ಭೂಪನೆ ಮಾಡಬೇಡನ್ಯಾಯವನು ನೀನು ॥೨೪॥

ಕೇಳಲಾರೆನು ನಿಮ್ಮ ಮಾತನು
ಹೇಳಿರುವ ಶಿಕ್ಷೆಯಲಿ ಪಲ್ಲಟ
ಕೇಳಿರೈ ತಾನಾಗದೆಂದಿಗು ಬಾಯಿ ಮುಚ್ಚುವದು ।
ಹೇಳಿದನು ಸೇವಕರಿಗೊಯ್ಯಲು
ಶೂಲಕೇರಿಸಲಿಕ್ಕೆ ದ್ವಯರನು
ಹೇಳಿದೊಲು ನೃಪ ನೊಯ್ಯಬಂದರು ರಾಜ ಸೇವಕರು ॥೨೫॥

ತಾಳಿ ರೋಷವ ಚನ್ನಬಸವನು
ಹೇಳದನು ಬಲು ತಪ್ಪು ಮಾಳ್ಪಿರಿ
ತಾಳಿನಾ ನೀನ್ಯಾಯ ಬಿಟ್ಟೆನು ಮಂತ್ರಿಕಾರ್ಯವನು ।
ಹೇಳಿಯೀಪರಿ ಬಿಜ್ಜಳರಸಗೆ
ಶೂಲಭಕ್ತನು ಹೋಗಲೆದ್ದನು
ತಾಳಿ ಮಮತೆಯಃ ಹರಳ ಶರಣನ ಕಡೆಗೆ ನೋಡಿದನು ॥೨೬॥

ಆಗಳಾ ಹರಳಯ್ಯ ಶರಣನು
ರಾಗದಿಂ ಶರಣಾರ್ಥಿ ಗೈದನು
ಹೋಗುವೆನು ಜಗಬಿಟ್ಟು ಗುರುಗಳೆ ಕಡೆಯ ಶರಣಾರ್ಥಿ ।
ಯೋಗಿಗಳೆ ಸ್ವೀಕರಿಪುದೆನ್ನಯ
ಹೋಗಿ ಹೇಳಿರಿ ಅಣ್ಣ ಬಸವಗೆ
ಬಾಗಿ ಮಾಡುವ ಶರಣು ನನ್ನಯ ಚೆನ್ನಬಸವಣ್ಣಾ ॥೨೭॥

ಮಾಡಿದನು ಶರಣಾರ್ಥಿ ಹರಳಗೆ
ನೋಡಿ ಕರಣದೆ ಚನ್ನಬಸವನು
ಕೂಡಲೇ ದುಃಖಾಶ್ರು ಸುರಿದವು ದ್ವಯರ ಕಣ್ಣಿಂದೆ ।
ಕೂಡಲೇ ನಿಜಭವನಕೈದನು
ಗಾಢ ದುಃಖವ ಹೊಂದಿ ಮಹಿಮನು
ಮಾಡಿರುವ ನಿಜ ಧರ್ಮ ಸೇವೆಯ ಧರ್ಮಭೂಷಣನು ॥೨೮॥

ಹರಳ ಶರಣನ ಮಧುವರಸನನು
ತ್ವರದೊಳೊಯ್ದೊಪ್ಪಿಸಿದರಾಗಳು
ನರಪತಿಯ ಸೇವಕರು ವಧಿಕರ ವಶಕೆ ತಾವುಗಳು ।
ಧರಣಿಪತಿಯುಪ್ಪಣೆಯ ತೆರದೊಳು
ಹಿರಿಯ ಶರಣನ ಮಧುವರಸನನು
ಕರುಣವಿರದಾ ಕೊಲೆಯಕಾರರು ಬಿಟ್ಟರೈ ವಧಿಸಿ ॥೨೯॥

ಪಟ್ಟನೈ ಬಹುದುಃಖ ಬಸವನು
ಕೊಟ್ಟುದಕೆ ತಾವ್ ಪ್ರಾಣವುಭಯರು
ಕೆಟ್ಟ ರೂಢಿಯ ಮುರಿದುದಕೆ ಬಲು ಶ್ರೇಷ್ಠ ನರರವರು ।
ಬಿಟ್ಟು ಹೋಗುವದುಚಿತವಿರುವದು
ಪಟ್ಟಣವ ನೀ ಲಿಂಗವಂತರು
ಸಿಟ್ಟು ಸಹಿಸಿರಿ ಹಿಂಸೆಯಾಗದ ಹಾಗೆ ವರ್ತಿಸಿರಿ ॥೩೦॥

ಎಂದು ಹೇಳಿದನಣ್ಣ ಬಸವನು
ಮಂದಿಗೆಲ್ಲಾ ವೀರಶೈವರ
ಬಂದಿತೆಂದನು ಮುಗಿದು ನನ್ನವತಾರ ಕಾಲವದು ।
ಹೊಂದಿದರು ಬಹುದುಃಖ ಶರಣರು
ಹೊಂದಿದರು ಜಂಗಮರು ದುಃಖವ
ತಂದೆಯಂತಿಹ ಬಸವದೇವನ ಭಾಷಣವ ಕೇಳಿ ॥೩೧॥

ಹರಳ ಶರಣನ ಮಧುವರಸನನು
ನರಪತಿಯು ಕೊಲ್ಲಿಸಿದ ವೃತ್ತವು
ಸರುವ ನಗರದಿ ಹರಡಿಬಿಟ್ಟಿತು ಕೂಡಲೇ ತಾನು ।
ಮರುಗಿದರು ಬಲು ಲಿಂಗವಂತರು
ಮರುಗಿದರು ಹಿಂದುಳಿದ ಜನಗಳು
ಹರುಷಬಟ್ಟರು ಬ್ರಾಹ್ಮಣರು ಮೇಣ್ ಜೈನ ಧರ್ಮಿಗಳು ॥೩೨॥

ವಧಿಸಿದಕೆ ಭೂಪಾಲ ಬಿಜ್ಜಳ
ಮದುವರಸನನು ಹರಳ ಶರಣನ
ತರುಣರಿಹ ಜಗದೇವ ಬೊಮ್ಮರು ಶರಣರುಭಯತರು ।
ಅರಸನನು ಕೊಲ್ಲಲಿಕೆ ನಡೆದರು
ಮರೆದು ತಮ್ಮಯ ದೇಹದೆಚ್ಚರ
ಹಿರಿಯ ರೋಷದೆ ಹೋಗಿಬಿಟ್ಟರು ರಾಜಭವನದೊಳು ॥೩೩॥

ಒಬ್ಬನೇ ಕುಳಿತಿದ್ದನಾ ನೃಪ
ನುಬ್ಬಿನಲಿ ವಿಶ್ರಾಮ ಭವನದೊ
ಳಿಬ್ಬರೂ ಶಿವಶರಣರಲ್ಲಿಗೆ ಹೋದರಾವಾಗ ।
ನಿಬ್ಬೆರಗ ಹೊಂದಿದನು ಭೂಪತಿ
ಯಿಬ್ಬ ಶರಣರು ಬಂದುದೀಕ್ಷಿಸಿ
ಯಬ್ಬರದೊಳುಭಯತರು ಕಡಿದರು ಖಡ್ಗದಿಂದವನ ॥೩೪॥

ಕೊಂದು ನೃಪನನು ಹೋಗಿಬಿಟ್ಟರು
ಮಂದಿ ಕಣ್ಣಿಗೆ ಬೀಳದೇ ತಾವ್
ಹೊಂದಿ ಸಂತೋಷವನು ಶರಣರು ದ್ವಯರು ಕೋಪಿಗಳು ।
ಕೊಂದ ನೃಪತಿಯ ಸುದ್ದಿ ಹರಡಿತು
ಚಂದವಿಹ ಕಲ್ಯಾಣ ನಗರದಿ
ಹೊಂದಿದರು ಬಹುದುಃಖ ಪ್ರಜೆಗಳು ಕೇಳಿ ಸುದ್ದಿಯಿದು ॥೩೫॥

ಕೇಳಿ ವೃತ್ತವ ನೃಪನ ವಧಿಸಿದ
ತಾಳಿದನು ಬಹುದುಃಖ ಬಸವನು
ಹೇಳಿದನು ಶ್ರೀ ಚನ್ನಬಸವಗೆ ಹೋಗುವೆನು ನಾನು ।
ಮೇಲು ಕ್ಷೇತ್ರಕೆ ಸಂಗಮಕೆ ಗಡ
ಕಾಲ ದೆಗೆಯಿಂ ಜವದೊಳಿಲ್ಲಂ
ಕಾಲ ಬಂದುದು ಕೆಡಕು ಬಲುತಾಂ ಲಿಂಗವಂತರಿಗೆ ॥೩೬॥

ಹೇಳಿಯೀಪರಿ ಚನ್ನಬಸವಗೆ
ಕೇಳಿರೈ ಕೆಲ ಶರಣರೊಂದಿಗೆ
ತಾಳಿ ದುಃಖವ ಹೋಗಿಬಿಟ್ಟನು ಸಂಗಮದ ಕಡೆಗೆ ।
ಹೇಳಿದನು ಶ್ರೀ ಚನ್ನಬಸವನು
ಕಾಲದೆಗೆಯಿರಿ ಶರಣರೆಲ್ಲರು
ಕಾಲದೆಗೆಯಿರಿ ಜಂಗಮರು ಕಲ್ಯಾಣದಿಂದೆಂದು ॥೩೭॥

ಧರಿಸಿರೆಲ್ಲರು ಖಡ್ಗ ಕರದೊಳು
ಬರುವರೆಮ್ಮನು ಕೊಲ್ಲಲಿಕೆ ತ್ವರ
ಧರಣಿಪಾಲನ ಸೈನ್ಯವದನರೆ ತಡೆಯಲಿಕೆ ನೀವು ।
ಹಿರಿದು ಕತ್ತಿಯ ಸಿದ್ಧರಾಗಿರಿ
ತೊರೆದು ಜೀವದ ಹಂಗು ಕಾದಿರಿ
ಹರನ ಸಂಕಲ್ಪದೊಲು ತಾನಾಗುವದು ತಪ್ಪದದು ॥೩೮॥

ಅರಹಿ ಪರಿಯೀ ಚನ್ನಬಸವನು
ಪರಮ ಮಾನಿಯು ಮತ್ತೆ ಪೇಳ್ದನು
ಬರುವವರು ನನ್ನೊಡನೆ ಬನ್ನಿರಿ ನಾನು ಹೋಗುವೆನು ।
ಹರನ ಪ್ರೇರಣೆಯಂತೆ ಯುಳಿವಿಗೆ
ಸರುವರೂ ಬರಬೇಕು ನೀವಂ
ದೊರೆಯಲಾರೆನು ಹೋಗುವರು ಹೋಗವದ ತಂತಮ್ಮ ॥೩೯॥

ಪುರಕೆ ಗ್ರಾಮಕೆ ಹೊರಡಿರೈ ಜವ
ಬರುವ ಸಿದ್ಧತೆ ಮಾಡತೊಡಗಿದೆ
ಧರಣಿಪಾಲನ ಸೈನ್ಯ ನಮ್ಮನು ವಧಿಸಲಿಕೆ ತಾನು ।
ತೊರೆದು ಜೀವದ ಹಂಗು ಹಲವರು
ಗುರುವರನ ಶ್ರೀ ಚನ್ನಬಸವನ
ತೊರೆಯಲಾರದೆ ಜತೆಯೊಳಾತನ ಗಮಿಸಿದರು ತಾವು ॥೪೦॥

ಬಂದರೈ ಬ್ರಾಹ್ಮರ ಪ್ರಮುಖರು
ಬಂದರಾಗಳು ಪ್ರಮುಖರು ಜೈನರು
ಬಂದು ಬಿಜ್ಜಳನಳಿಯನಿಗೆ ಹೇಳಿದರು ನಿಜವಿದುವು ।
ಬಂಧುರನವರ ಬಿಜ್ಜಳರಸನ
ಮಂದ ಮತಿಯಾ ಬಸವನೇ
ಮಂದಿಯಿಂದಂ ಕೊಲ್ಲಿಸಿರುವದು ಕೊಲ್ಲು ಮೊದಲವನ ॥೪೧॥

ಹೋಗು ಜವದೊಳು ಸೈನ್ಯದೊಂದಿಗೆ
ಹೋಗುವರು ಪುರದೊರೆದು ಸವರು
ಹೋಗಿ ಕೊಲ್ಲಿಸು ಸಿಕ್ಕ ಲಿಂಗಾಯತರನೆಲ್ಲರನು ।
ಆಗೆ ಸಿಗುವರು ನಿನ್ನ ಕೈಯಲಿ
ಬೇಗದೊಳು ತಾವುಭಯ ಬಸವರು
ಹೋಗುವರು ಪುರಬಿಟ್ಟು ದುಷ್ಟರು ಕೊಂಡು ಚೆಲ್ಲವರ ॥೪೨॥

ಕೇಳಿ ಪೌರದಾಳುಗಳ ಬೋಧನ
ತಾಳಿ ರೋಷವ ಸೇನೆಯೊಂದಿಗೆ
ಕೇಳಿದೈ ಸಾಗಿದನು ಕೊಲ್ಲಲು ಲಿಂಗವಂತರನು ।
ಕಾಲನೊಲು ತಾಂ ತೋರದಿರಲು ನೃ-
ಪಾಲನೀಯು ಪುರಾಂ ರಾಯನು
ಶೂಲಭಕ್ತರು ಹೋಗುತಿರೆ ಪುರ ಬಿಟ್ಟು ನೋಡಿದನು ॥೪೩॥

ಇದ್ದರಾಗಳು ಲಕ್ಷಗಟ್ಟಲೆ
ಸಿದ್ಧರಾಗಿಹ ಯುದ್ಧ ಮಾಡಲು
ಬುದ್ಧಿನಿಧಿಯಾ ಚನ್ನಬಸನ ಜತೆಯೊಳಗೆ ಜನರು ।
ಇದ್ದರವರೊಳು ಶರಣಜನ ಹಲ
ರಿದ್ದರೈ ಪ್ರೇಣ್ ಜಂಗಮರು ತಾ
ಇದ್ದರವರೊಳು ಭಕ್ತ ಜನರುಗಳೆನಿತೊ ತಾವಾಗೆ ॥೪೪॥

ತೋರಿದರು ನರಪತಿಯು ಸೈನ್ಯದ
ವೀರ ಜನರಿಗೆ ವೈರಿರಾಜರ
ಘೋರವಾಗಿಹ ಸೈನ್ಯದಂದದಿ ಲಿಂಗಯುತರವರು ।
ವೀರ ವೃತ್ತಿಯ ಚನ್ನಬಸವನು
ವೀರಶೈವರ ದಂಡಿಗಾದನು
ಧೀರತನವುಳ್ಳವನು ಸೇನಾಪತಿಯು ತಾನಾಗೆ ॥೪೫॥

ಜವದಿ ದಂಡಿಗೆ ಸ್ವಾಗಲಪ್ಪಣೆ
ಯಪನು ಗೈದನು ಹೋಗುಪರೊಳು
ತವೆ ತಳೆದು ಖಡ್ಗವನು ಕರದೊಳು ಲಿಂಗಧಾರಿಗಳು ।
ಭವಿಸಿ ರೋಷವು ಯುದ್ಧಗೈದರು
ಭುವಿಯ ಮೇಲ್ ಮೃತರಾಗಿಯೊರಗಿದ
ರವನಿಪತಿ ಕಡೆಯವರು ಮೇಣ್ ಲಿಂಗಾಯತರು ಹಲರು ॥೪೬॥

ದಿನದೊಳಾ ಘನ ಯುದ್ಧವಾಯಿತು
ಕೊನೆಗೆ ನೃಪತಿಯ ಸೈನ್ಯ ಸೋತಿತು
ಮನಸಿಜಾರಿಯ ಭಕ್ತರಿಗೆ ಜಯ ಲಭಿಸಿತಾದಿನವು ।
ವಿನುತ ಲಿಂಗಾಯತರು ಸರ್ವರು
ಘನ ಮಹಿಮ ನುತ ಚೆನ್ನಬಸವ
ಣ್ಣನ ಬಿಡದೆ ಬೆಂಬತ್ತಿ ಗಮಿಸಿದರುಳವಿ ಕ್ಷೇತ್ರಕ್ಕೆ ॥೪೭॥

ಅತ್ತ ಶ್ರೀ ಭಗವಾನ ಬಸವನು
ಸತ್ತಮನು ತಾನೈಕ್ಯವಾದನು
ಚಿತ್ತಜನರಿಪು ಸಂಗಮೇಶ್ವರನಲ್ಲಿ ತಾಂ ಬೆರೆದು ।
ಕುತ್ತದುವು ದೂರಾಗಿ ಹೋಯಿತು
ಬಿತ್ತಿರುವ ಬಸವಣ್ಣ ಧರ್ಮದ
ಬಿತ್ತುಗಳ ಸಲೆ ಬೆಳೆಯು ಬಂದಿತು ನಾಡಿನಲ್ಲೆಲ್ಲ ॥೪೮॥

ಬದುಕಿ ಮೂವತ್ತಾರು ವರ್ಷವು
ಸದಮಲಾತ್ಮನು ಬಸವದೇವನು
ವಿಧು ಧರನ ಸಂಕೇತ ದೋಲವತಾರ ಕಾರ್ಯವನು ।
ಸದಯನುರೆ ಮುಗಿಸಿದನು ಜಗದಲಿ
ವಿಧು ದಿವಾಕರರಿರುವವರೆಗೂ
ಸುದಮಲಯಶೋ ದಿವ್ಯತನುವಿಂದುಳಿದಿಹನು ತಾನು ॥೪೯॥

ಸ್ಮರಣಗೆಯ್ದರೆ ನಾಮ ಬಸವನ
ದುರಿತವೆಲ್ಲವು ಸುಟ್ಟು ಹೋಪುದು
ಸರುವ ಕಂಟಕ ನಾಶವಡೆವವು ದೈನ್ಯವಳಿಯುವದು ।
ಹರುಷದೊಳು ಬಲು ಕಾಲಗಳೆವರು
ಹರನು ಕರಣವನಧಿಕ ಮಾಳ್ಪನು
ಧರೆಯೊಳಗೆ ಬಹುದಿವಸವಿರುವವರು ಮೋಕ್ಷವಡೆಯುವರು ॥೫೦॥

ಆಗಿ ಹೋದನು ಜಗದಿರ್ಪೊಳಗೀ
ತ್ಯಾಗಿಗಳು ಸ್ಥಾಪಕರು ಧರ್ಮವ
ಸಾಗಿರುವನವರೊಳಗೆ ಶ್ರೇಷ್ಠನು ಬಸವ ಗುರುವರನು ।
ಸಾಗಿಸಿದ ಬಲು ಧರ್ಮನಾಮದೆ
ಮೇಗೆಯನ್ಯಾಯವನು ಮನುಜರ
ತ್ಯಾಗವೀರನು ಕಳೆಯಲಾಸ್ಥಿತಿ ಕಡೆತನಕ ತಾನು ॥೫೧॥

ಕಾದಿದನು ಘನರಿಪುಗಳೊಡನಾ
ಪಾದಗಳ ಹಿಂದಿಡದೆ ಬಸವನು
ಸಾಧಿಸಿದನುರೆ ಕಿರಿಯ ಜಾತಿಯ ಜನಗಳೇಳಿಯನು ।
ಹಾದಿಯನು ಹೊಸ ನಿರ್ಮಿಸಿದನೈ
ಭೋಧಕನು ಸಲೆ ಹಿಂದು ಧರ್ಮದೊ
ಳಾದರವು ಜನ್ಮಿಸುವದನನೊಳು ಸ್ಮರಣವಾದೊಡನೆ ॥೫೨॥

ವೀರಶೈವ ಸುಧರ್ಮಜಲಧಿಗೆ
ತಾರಕೇಶನು ಬಸವ ದೇವನು
ವೀರಶೈವರ ಧರ್ಮ ಬಸವನ ಹೆಚ್ಚು ಬೆಳಕಿರುವ ।
ಸಾರ ನಂದಾ ದೀಪವಾಗಿದೆ
ಮಾರ ವೈರಿಯ ಶ್ರೇಷ್ಠ ಭಕ್ತನು
ಹಾರ ರತ್ನದ ಮನುಜ ಜಾತಿಯ ಕಂಧರಕ್ಕವನು ॥೫೩॥

ಕೊಟ್ಟಿಹನು ಧನವನ್ನು ದೇವರು
ಕೊಟ್ಟಿಹನು ವಿದ್ಯೆಯನು ಮತಿಯನು
ಗಟ್ಟಿದುವು ಕೊಡಲಿಕ್ಕೆ ನಿಲೆಗವು ಜನರಿಗಿಲ್ಲಹಿಪ ।
ಕೊಟ್ಟು ಶಿವನನು ತೋಷಗೊಳಿಸಿರಿ
ಕಟ್ಟಿಕೊಳ್ಳಿರಿ ಪುಣ್ಯವನು ಒಹು
ಬಿಟ್ಟು ನೀವಾ ಜನಕೆ ಕೊಡದೇ ಪಾಪ ಸಲಿಸುವಿರಿ ॥೫೪॥

ಜಗವಿದುವು ದೇವರ ಕುಟುಂಬವು
ಜಗದೊಳಿರುತಿಹ ಸುರರು ಮನುಜರು
ಜಗದೊಳಿರುತಿಹ ಮಿಕ್ಕ ಪ್ರಾಣಿಗಳೆಲ್ಲವೀಶ್ವರನ ।
ಮಿಗಲು ಮಮತೆಯ ಮಕ್ಕಳಾಗಿವೆ
ಸಗುಣ ಮಯನಿಹ ದೇವದೇವನು
ಹಗಲಿರುಳು ಸಲಹುವನು ಪ್ರೇಮದೆ ಲೋಕವೆಲ್ಲವನು ॥೫೫॥

ಎಲ್ಲಲಿರುವರು ಬಂಧು ಜನರುಗ
ಳೆಲ್ಲ ಜನಗಳ ಬಾಂಧವರು ನಾ
ವೆಲ್ಲರೊಂದಿಗೆ ಪ್ರೇಮದಿಂದಂ ನ್ಯಾಯದಿಂ ನಿರುತ ।
ಬಲ್ಲವರೆ ವರ್ತನೆಯ ಮಾಳ್ಪುದು
ಗೆಲ್ಲವಡೆವುದು ಭವದಯುದ್ಧದೊ
ಳೆಲ್ಲ ವಿಶ್ವದ ದೊರೆಯನಾಗಿಹ ಶಿವನ ಮೆಚ್ಚಿಪುದು ॥೫೬॥

ಜಾತಿಯನು ಮಾಡಿಲ್ಲ ದೇವರು
ಭೂತನಾಥನು ಧರ್ಮಗಳ ನೀ
ಭೂತಲದಿ ಮಾಡಿಲ್ಲ ನಿಜವಿದು ಮನುಜರೊಳು ತಾನು ।
ಜಾತಿ ಧರ್ಮಾದಿಗಳ ಗೈದರು
ಹೇತುವನು ಸಾಧಿಸಲು ತಮ್ಮಯ
ಜಾತಿ ಧರ್ಮವಿವೆಲ್ಲವಿರುವವು ಮಾನವರದೊಂದು ॥೫೭॥

ಮನುಜರೊಳು ಕೆಲಜಾತಿ ಜನರನು
ಗಣಿಸುತಿಹುದದು ತುಚ್ಛವೇದುರೆ
ಘನ ದುರಿತಕರ ಕೃತ್ಯವಾಗಿದೆ ಧರ್ಮವೆಲ್ಲದುವು ।
ಮನುಜರೆಲ್ಲರ ಸಾಟಿಯೆಣಿಪ್ಪದು
ಗಣಿಸದೊಲು ವರ್ತನೆಯ ಮಾಳ್ಪುದು
ಮನುಜರೆಲ್ಲಗ ಧರ್ಮವಾಗಿದೆ ಸತ್ಯಧರ್ಮವದು ॥೫೮॥

ಅಳಿಯ ಬೇಕೀ ಜಾತಿಗಳು ತಾ
ವಳಿಯ ಬೇಕೀ ಧರ್ಮ ಭೇದಗ
ಳುಳಿಯಲಿಳೆಯೊಳು ಧರ್ಮವೊಂದೇ ನ್ಯಾಯಮುಮವಿರುವ ।
ನೆಲೆಸುವವು ಸಲೆ ಶಾಂತಿಸುಖಗಳು
ನೆಲದ ಮೇಲೀ ಬಳಿಕ ನರರೊಳು
ನೆಲಸಿದೊಲು ಸರಲೋಕದಲಿ ಗಡ ಸೌಖ್ಯ ಶಾಂತಿಗಳು ॥೫೯॥

ಬರಲಿ ಸುದಿನವು ಮೃತ್ಯುಲೋಕಕೆ
ಹರನ ಕೃಪೆಯಿಂದೀಘ ಶೀಘ್ರವು
ಮರೆಯುಲೈ ಮಾನವರ ಜಾತಿಯು ಬಂಧು ಭಾವದೊಳು ।
ತೊರೆಯಲೆಲ್ಲಾ ಜಾತಿ ಜನಗಳು
ಹಿರಿಯದಾಗಿಹ ಪಾಪದೊಳು ಬಲು
ದೊರೆಯುವದು ಕುತ್ತಿಗೆಯು ಪ್ರಾಣಗಳಿದುವು ಲೋಕದಲಿ ॥೬೦॥

ಸೇವಿಸದು ಮಾಂಸವನು ಸುರೆಯನು
ಸೇವಿಸದು ಮತ್ತೀದ ಮಾದಕ
ನೀವು ಜನರೆ ಪದಾರ್ಥವೆಲ್ಲವ ಸೌಖ್ಯ ಪುಣ್ಯಗಳ ।
ದೇವರದು ಮೇಣ್ ಕೃಪೆಯ ಪಡೆವಿರಿ
ನೀವು ತೊರೆವದರಿಂದಲವುಗಳೆ
ಭಾವ ನಿರ್ಮಲ ವಾಗುವದು ಬಹು ಬಿಟ್ಟರವುಗಳನು ॥೬೧॥

ಪೇಳುವದು ತಾಂ ಲಿಂಗವಂತರ
ಪೋಲು ಧರ್ಮವು ಸಕಲ ಜನಕದು
ಪೇಳಿದನು ಶ್ರೀ ಬಸವ ದೇವನು ಬ್ರಾಹ್ಮಣರಿಗಿಂತು ।
ತಾಳಿ ದಯ ತಾಂ ಕೊಲ್ಲಬಾರದು
ಕೇಳಿರೈ ಯಜ್ಞದೊಳು ಪಶುಗಗಳ
ತಾಳುವನು ಬಲು ರೋಷವದರಿಂ ನಿಮ್ಮ ಮೇಲ್ ಶಿವನು ॥೬೨॥

ಬಸವ ದೇವನ ಸಿಂಹವಾಣಿಯು
ಬಸವ ದೇವನ ಶ್ರೇಷ್ಠ ನೀತಿಯು
ಹಸನ ಮನಸಿನ ದ್ವಿಜರ ಮೇಲ್ ಪರಿಣಾಮ ಮಾಡಿವವು ।
ವಸುಧೆಯೊಳಗದು ಬರುಬಿಡುತೆ ತಾಂ
ಪಶುವಿಗಾಗುವ ಹಿಂಸೆ ನಿಂತಿತು
ಬಸವಗುರುವಿನ ಬೋಧ ಫಲವಿದು ಕೇಳಿರೈ ನೀವು ॥೬೩॥

ಹೊಲಸು ತಿಂಬುವ ನರನೆ ಹೊಲೆಯನು
ಬಲು ನಿಜವಸಿದು ಬಸವ ಪೇಳ್ದನು
ಹೊಲಸು ತಿಂಬುವದೆಂದರಿದುಪೇ ಮಾಂಸ ತಿಂಬುವದು ।
ಬಲು ಜವದೆ ಬಿಡಿರಿದನು ಜನರೇ
ಚೆಲವು ನೀತಿಯ ಪಥದೆ ಸಾಗಿರಿ
ಗಳಿಸಿಕೊಳ್ಳಿರಿ ಪುಣ್ಯವನು ಬಲು ಪುಣ್ಯಕೃತಿಯೆಸಗಿ ॥೬೪॥

ಮಾರದಿರಿ ಕಟುಕರಿಗೆ ದನಗಳ
ತೋರುವದು ದಯವವುಗಳಲಿ ನೀವ್
ಭೂರಿ ಕಷ್ಟವ ಪಟ್ಟು ಹೊಲದಲಿ ದುಡಿದಿಹವು ನಿಮ್ಮ ।
ಚಾರು ಗೋವುಗಳೆಮ್ಮ ಕುರಿಗಳು
ಕ್ಷೀರವನ್ನೀಯುಪವು ತಾಯ್ವೋಲ್
ವೈರಿಯಲ್ಲೆವು ನಿಮ್ಮ ಮೇಲುಪಕಾರ ಮಾಡಿಹವು ॥೬೫॥

ಮುದಿ ದನಗಳವು ನಿಮ್ಮ ಮನೆಯಲಿ
ಬೆದುರ ಜನರೇ ಬಿದ್ದು ಸಾಯಲಿ
ವಧಿಕ ಜನರಿಗೆ ಮಾರಿ ಪಾಪವ ಗಳಿಸಿಕೊಳ್ಳದಿರಿ ।
ಸದಯರಾಗಿರಿ ಹಣದ ದೆಸೆಯಿಂ
ದಧಮ ಮಾರ್ಗವ ಹಿಡಿಯ ಬೇಡಿರಿ
ವಿದಿತವಿರಲೈ ಘೋರವಾದ ಕೃತಘ್ನತನವಿದುವು ॥೬೬॥

ಪ್ರಾಣಿಗಳ ಮೇಲ್ ದಯುವ ಮಾಳ್ಪುದು
ಕಾಣಿರೈ ಸದ್ಧರ್ಮವಾಗಿದೆ
ಮಾನವರ ನಿಜ ಲೋಕದಲ್ಲೀ ಶ್ರವಣ ಮಾಡುವದು ।
ಜಾಣರೇ ನೋಯಿಸದ ಹೆರವರ
ಮಾನಸವ ನಿವ್ ಕಠಿಣ ವಚನದೆ
ಸಾನುರಾಗದೆ ಸರ್ವರೊಂದಿಗೆ ಸಾಗಿದನು ದಿನವು ॥೬೭॥

ಪೊರೆಯುತಿದುವಗೆ ಮೂರು ಲೋಕವ
ಕರುಣದೊಳು ಮೇಣ್ ಪ್ರೇಮದಿಂದಲಿ
ಧರಿಸಿರುವ ಜಾಹ್ನವಿಯ ಜಡೆಯಲಿ ಕೆಂಜಟಾಯುತಗೆ ।
ಸುರಪನಿಂದಂ ಪೂಜೆಗೊಳ್ಳುವ
ಸರುವ ವಿಶ್ವದ ಸ್ವಾಮಿಯಾಗಿಹ
ಗಿರಿಭವಾಪತಿಯಾದ ಶಂಭುಗೆ ಹರಗೆ ಜಯುವಿರಲಿ ॥೬೮॥

( ಹದಿನೇಳನೆಯ ಸಂಧಿ ಮುಗಿದುದು )



# ಹದಿನೆಂಟನೆಯ ಸಂಧಿ

ಸೂಚನೆ:– ಬಂದರ್ಶೈ ಯಡೆಯೂರಿನಿಂದಂ
ಬಂದು ಹುಬ್ಬಳ್ಳಿಯಲ್ಲಿ ನಿಂತರು
ಹೊಂದಿ ತೋಷ ಕುಮಾರಯತಿಗಳು ಮಠವ ನೆಲೆಗೊಳಿಸಿ ।

ತಾರ ಗಿರಿಯೊಳು ವಾಸಗೆಯ್ದಿಹ
ಮಾರನನು ಮೇಣ್ ತ್ರಿಪುರವುರುಪಿದ
ವಾರಣದ ಚರ್ಮವನು ಹೊದ್ದಿಹ ನೀಲಕಂಧರನು ।
ಧಾರುಣಿಯ ರಥಮಾಡಿಕೊಂಡಿಹ
ಮೂರು ಲೋಕದ ಜನಕನಾಗಿಹ
ಗೌರಿ ರಮಣನ ವಂದಿಪೆನನು ಸಲಹಲೆಲ್ಲರನು ॥೧॥

ಧಾರವಾಡದ ಜಿಲ್ಹೆಯೊಳು ತಾಂ
ಸಾರವಾಗಿಹ ನಗರವಾಗಿದೆ
ವೀರಶೈವರೆ ಹೆಚ್ಚಿಗಿಹ ಹುಬ್ಬಳ್ಳಿ ಪಟ್ಟಣವು ।
ಭೂರಿ ಜನಧನಯುತರ ಪುರವದು
ಧಾರುಣಿಯೊಳತಿ ಕೀರ್ತಿಪೊಂದಿದೆ
ಚಾರು ಪುರದೊಳು ಲಕ್ಷ ಮೇಲೈವತ್ತು ಸಾವಿರವು ॥೨॥

ಜನರು ವಾಸಿಸುತಿಹರು ಸುಖದಿಂ
ಗಣನೆಯಾಗುತಿರ್ಪದದು ತಾಂ
ಜನ ಜನಿತ ಕರ್ನಾಟದೊಳು ಘನ ನಗರಗಳಲಿ ನಿಜ ।
ಸನಿಹದಲ್ಲಿದೆ ಧಾರವಾಡದ
ವಿನುತ ಜಿಲ್ಹೆಯ ದಕ್ಷಿಣಕ್ಕದು
ನಿನಯಿಗಳ ಹುಬ್ಬಳ್ಳಿವರ ತಾಲೂಕ ಪುರವದುವು ॥೩॥

ಹಳೆಯ ಹುಬ್ಬಳ್ಳಿ ಹೊಸದು ಹುಬ್ಬಳ್ಳಿ
ಬಲು ಮೆರೆವ ದ್ವಯಭಾಗವಿರುವವು
ಬೆಳೆಯುತಿಹ ಹುಬ್ಬಳ್ಳಿ ಪಟ್ಟಣದೊಳಗೆ ರಂಜಿಸುತೆ ।
ಬಲುವು ಘನವಾಗಿರುವ ರೇಲ್ವೆಯ
ಚೆಲವು ಜಂಕ್ಶನ್ ಸ್ಟೇಶನವು ತಾಂ
ನೆಲಸಿಹುದು ಘನ ನಗರದೊಳಗಾ ನೋಡುವಂತಹದು ॥೪॥

ಒಹುದಿವಸವದು ಹೆಸರುಗೊಂಡಿದೆ
ಬಹು ಧನಾಢ್ಯರ ನಗರವೆಂಬುದು
ಮಹಿಯೊಳಗೆ ಹುಬ್ಬಳ್ಳಿ ಪಟ್ಟಣ ತಾನು ನಿಜವಾಗಿ ।
ಸುಹಿತ ಹಿಂದೂಧರ್ಮಕೆಸಗಿದ
ಮಹಿಮನಾದ ಶಿವಾಜಿ ಸುಲಿದುರೆ
ಬಹಳ ಧನವನ್ನೊಯ್ದನೈ ಹದಿನೇಳು ಶತಕದಲಿ ॥೫॥

ಹಳೆಯ ಹುಬ್ಬಳ್ಳಿ ಪಶ್ಚಿಮಕ್ಕಿದೆ
ಚೆಲವು ಮಠವಾರೂಢ ಸಿದ್ಧನ
ನೆಲಸಿಹುದು ಗಡ ಮೂರುಸಾವಿರ ಮಠವು ಪೂರ್ವಕ್ಕೆ ।
ಬಲುವು ಕೀರ್ತಿಯ ಹೊಂದಿದಂತಹ
ಬಲವು ಘನಮಠ ಸುಭಗವಾದುದು
ಸಲೆ ಮೆರೆವ ಹೊಸದಾದ ಹುಬ್ಬಳಿ ನಗರದೊಳು ತಾನು ॥೭॥

ಇತ್ತು ಮಠವದು ಚೆಲವು ಮಠದಲಿ
ಸತ್ತಮರು ಗುರುಸಿದ್ಧ ಗುರುಗಳು
ಮತ್ತದರ ಸೌಂದರ್ಯ ವರ್ಧನಗೊಳಿಸಿದರು ತಾವು ।
ಸುತ್ತಲಿನ ಜನ ದೂರಿನೂರಿನ
ಚಿತ್ತ ವೇಧಕ ಮಠವನೋಡಲು
ಚಿತ್ತವನು ಸಂತೋಷಗೊಳಿಸಲು ಬರುತಿಹರು ನಿತ್ಯ ॥೭॥

ನೆರೆಯುವದು ತಾಂ ಧಾರವಾಡದ
ಪುರದಿ ಸಂತೆಯು ಮಂಗಲದ ದಿನ
ನೆರೆಯದದುಗಡ ಸಂತೆ ಹುಬ್ಬಳ್ಳಿ ನಗರದೊಳಗೆಂದೂ ।
ದೊರೆಯುವವು ಸಲೆ ಸಕಲ ವಸ್ತುವು
ದೊರೆಯುವೊಲು ಸಂತೆಯಲಿ ನಿತ್ಯವು
ಗುರುತಿದುವು ಹಿರಿನಗರವೆಂಬುದು ಹುಬ್ಬಳ್ಳಿಯು ತಾನು ॥೮॥

ಘನ ಮಠದೊಳಾ ಉತ್ತರಕ್ಕುಪ
ವನ ವಿಹುದು ರಮಣೀಯವಾದುದು
ಹುಣಸೆ ಪೇರಲ ಹಲಸು ನೇರಿಲ ಮಾವು ಮೊದಲಾದ ।
ತನಿಫಲಂಗಳ ವೃಕ್ಷವಿರುವವು
ಘನ ಚತುರಗಳಿವೆ ಗಗನ ಮಲ್ಲಿಗೆ
ಕನಕ ವರ್ಣದ ಸಂಪಗೆಯು ಸುಮನಗಳ ತಾವಲ್ಲಿ ॥೯॥

ತೆಂಗು ಬಾಳೆಯು ವೃಕ್ಷವಿರುವವು
ಕಂಗಳಿಗೆ ಬಹು ತೋಷಗೊಳಿಪವು
ಮಂಗಲಾನ್ವಿತ ಬಿಲ್ವಪತ್ರೆಯ ದ್ರುಮವಿರುವವಲ್ಲಿ ।
ಬೃಂಗಗಳು ಸುಮರಜವನುಣ್ಣಲು
ಮಂಗಗಳು ಫಲಗಳನು ತಿನ್ನಲು
ಹಂಗಿನಿಂದಂ ಬರುವವಾ ಉಪವನದಿ ಮುದವಾಂತು ॥೧೦॥

ಗಾನ ಗೆಯ್ವವು ಶುಕ ಪಿಕಂಗಳು
ಕಾಣಿರಾ ಉಪವನದಿ ನಲವಿಂ
ಮಾನಸವ ಬಹು ತೋಷಗೊಳಿಪವು ಮಧುರ ಗಾಯನದೆ ।
ಸಾನುರಾಗದೆ ಬರುತಿಪವು ಸುರ
ಧೇನು ಸಮುವಾದುದುಪವನಕೆ ತಾವ್
ಮೇಣು ಗುಬ್ಬೆ ಕಪೋತ ಕೆಂಗರಿವಕ್ಕಿಗಳು ಬಿಡದೆ ॥೧೧॥

ಹಲವಿರುವವಾ ಮಠದಿ ಗದ್ದಿಗೆ
ಚೆಲವು ಸ್ಥಿತಿಯಲಿ ಪೂಜೆಗೊಳ್ಳುತೆ
ಬಲು ಚೆಲುವು ಗುಡಿಯಿರುವದಲ್ಲಿಯೆ ಮಠವ ಸ್ಥಾಪಿಸಿದ ।
ನಿಲಯ ಶಾಂತಿಯ ದಾದಯೋಗಿಯ
ಸಲೆಯಶವ ಪಡೆದಿರುವ ಜಗದೊಳು
ಗಳೆಯ ಒಡವರ ಮೊದಲ ಶ್ರೀ ಗುರುಸಿದ್ಧ ಯತಿವರರ ॥೧೨॥

ಮೆರೆವ ಗದ್ದಿಗೆಯೆಲ್ಲವಿರುವವು
ವರ ಮಠವ ನಾಳಿರುವ ಗುರುಗಳ
ಹಿರಿಯ ಗದ್ದುಗೆಯದುವೆ ಶ್ರೀ ಗುರುಸಿದ್ಧ ದೇವರರ ।
ವರ ನಗರ ಹುಬ್ಬಳ್ಳಿಯಲ್ಲಿಯೇ
ಹಿರಿಯ ದೇವಸ್ಥಾನವಿದುವೇ
ಪರಮ ದೇವಾಲಯವು ಶ್ರೀ ಗುರುಸಿದ್ಧ ಯೋಗಿಗಳ ॥೧೩॥

ಬರುತಿಹರು ಜನರೆಲ್ಲ ಜಾತಿಯ
ದರುಶನಕೆ ಗುರುಸಿದ್ಧ ಯತಿಗಳ
ಪರ ಸುಭಕ್ತಿಯ ಭಾವದಿಂದಂ ದಿನರಜನಿಯಲ್ಲಿ ।
ಬರುವರೈ ಮೇಣ್ ಮಠದ ಶ್ರೀಗಳ
ದರುಶನಕೆ ಹಲಜನರು ನಿತ್ಯವು
ಹರುಷದಿಂದಂ ಭಕ್ತಿಯಿಂದಂ ಸಕಲ ಕುಲದವರು ॥೧೪॥

ಮೊಳಗುವದು ಸಲೆ ಬೆಳಗಿನಲಿ ಮೇಣ್
ಮೊಳಗುವದು ತುಸು ರಾತ್ರಿಯಾಗಲು
ಸೆಲದೆರೆಯ ರಾಲಯವ ನಾಚಿಪ ಮಠದಿ ಚೌಷಡವು ।
ಬೆಳಗಿನಲಿ ಮೇಣ್ ರಾತ್ರಿ ಸಮಯದಿ
ಕಲೆತು ವಿದ್ಯಾರ್ಥಿಗಳು ಸರ್ವರು
ಬಲು ಭಕುತಿಯಿಂ ಪ್ರಾರ್ಥನೆಯ ಪದ ಹಾಡುವರು ನಿತ್ಯ ॥೧೫॥

ಹೊಡೆಯುವರು ಗಂಟೆಯನು ದೇವರ
ಗುಡಿಯೊಳಗೆ ಗುರುಸಿದ್ಧ ಮಹಿಮರ
ಬಿಡದೆ ಭಕ್ತರು ಬೆಳಗಿನಿಂಬಲು ರಾತ್ರಿ ಹೆಚ್ಚಿಸುವ ।
ಗಡ ತನಕ ವರಮಠದಿ ಪ್ರತಿದಿನ
ನಡೆಯುವದು ಬಹು ಜನರ ಭೋಜನ
ನುಡಿಯುವದು ಮಾಂಗಲ್ಯ ಭೇರಿಯು ನಿರುತ ಮಠದಲ್ಲಿ ॥೧೬॥

ಹಾರುವದು ಕೆಂಬಣ್ಣ ಧ್ವಜವದು
ವೀರ ವಿರತರ ಮಠದಿ ಹುರುಪಿಂ
ನಾರಿಯರು ಮೇಣ್ ಪುರುಷ ವರ್ಗವು ಸತತ ಬರುತಿಹುದು ।
ತೋರುವದು ಶ್ರೀ ಮಠವು ದೃಷ್ಟಿಗೆ
ಧಾರುಣೀಶರ ಗೃಹದಿ ನಡೆದೊಲು
ಭೂರಿ ಸಂಭ್ರಮದಿಂದ ಲಗ್ನವು ಪ್ರೇಕ್ಷಕರ ಕಣ್ಗೆ ॥೧೭॥

ಲಿಂಗರಾಜರು ದಾನವೀರರ
ಮಂಗಲರು ಶಿರಸಂಗಿ ದೊರೆಗಳು
ಲಿಂಗವಂತರ ಹೆಚ್ಚು ಕಲ್ಯಾಣವನು ಗೈದವರು ।
ತುಂಗ ಸಭೆಗಧ್ಯಕ್ಷರಿದ್ದರು
ಮಂಗಲಾಕೃತಿ ಸಭೆಯು ನೆರೆಯಿತು
ಸಂಗಮೇಶ್ವರ ದಯದೆ ಹತ್ತೊಂಬತ್ತರ ನಾಲ್ಕರಲಿ ॥೧೮॥

ಮೂರುಸಾವಿರ ಮಠವು ನೆಲಸಿದೆ
ಚಾರು ಹುಬ್ಬಳ್ಳಿ ನಗರದೊಳಗದು
ತೋರುವದು ಶಿರ್ಶಿಯ ಶಿಲಾಶಾಸನದೆ ಹೀಗೆಂದು ।
ವೀರ ಶೈವರ ಹಿರಿಯ ಸ್ಥಾನವು
ವೀರ ಯತಿಗಳ ಮಠವಿದಾಗಿದೆ
ಸಾರುವದು ತಾನೆಂಟುನೂರಬ್ಧಗಳ ಪೂರ್ವದಲಿ ॥೧೯॥

ಇದ್ದುದನ್ನು ಶಿಲೆಯ ಲೇಖದಿ
ಮುದ್ದಿನಿಂದ ಪ್ರಸಿದ್ಧಗೊಳಿಸಿದ
ನೆದ್ದು ತೋರುವ ಕರ್ಮವೀರ ಸುಪತ್ರದಲಿ ತಾನು ।
ಬುದ್ಧಿವಂತನು ವರದ ರಾಜನು
ಶುದ್ಧ ಮನದಾ ಮುಯಿಲಗೋಳನು
ಸುದ್ದಿಯೀಹತ್ತೊಂಬತ್ತು ಶತಕದೈವತ್ತೆರಡರಲಿ ॥೨೦॥

ಪರಮ ಮಳದೊಳು ಕೂಡಿಬಿಟ್ಟಿರೆ
ಹಿರಿ ಹಿರಿಯರಿಂ ಕೂಡಹಾಕಿದ
ಮೆರೆವ ದ್ರವ್ಯದ ಸದುಪಯೋಗವ ಮಾಡಬೇಕೆಂದು ।
ಗುರುವರರು ಗುರುಸಿದ್ಧರಾಜರು
ತೊರೆದವರು ವಿಷಯೋಪ ಭೋಗವ
ಹರುಷದಿಂದಂ ಬಯಸುತಿದ್ದರು ಬಹುದಿವಸ ತಾವು ॥೨೧॥

ಧಾರವಾಡ ಜಿಲ್ಲೆಯಲ್ಲಿಯೇ
ಸಾರ ಘನವಾಗಿರುವ ಪಟ್ಟಣ
ಚಾರು ಕರ್ನಾಟಕದ ವಿಶ್ರುತವಾಗಿ ರಂಜಿಸುವ ।
ವೀರ ಶೈವರದಾದ ಹುಬ್ಬಳ್ಳಿ
ಯೂರಿನೊಳಗಿರದಿರಲು ಮೊದಲಿಗೆ
ಭೂರಿ ಹಿತಕರವಾಗಿರುವ ಕಾಲೇಜ ದ್ವಯ ತಾವು ॥೨೨॥

ಇರದಿರಲು ಕಾಮರ್ಸವೆಂಬುವ
ದಿರ ದಿರಲು ತಾನಾರ್ಟ್ಸವೆಂಬುವ
ಒರಿಯ ವೆನಿಸುವ ತಾವು ಕಾಲೇಜಗಳು ಪುರದೊಳಗಾ ।
ಇರಲು ಯುನಿವರ್ಸಿಟಿಯು ತಕ್ಕದು
ಪರಮವಾ ಹುಬ್ಬಳ್ಳಿ ಪತ್ತನ
ವಿರದೆ ಕಾಲೇಜುಗಳು ದ್ವಯವವು ಕೂದಃ ಪಡೆದಿರಲು ॥೨೩॥

ಮೊದಲು ಮಠವಾಳಿರುವ ಗುರುಗಳಿ
ಗಿದುವು ಮನದಲಿ ಬರದೆ ಹೋಯಿತು
ಸಧನರಾಗಿರುವೆನಿತೋ ಜನಗಳು ಪುರದಿ ವಾಸಿಪರು ।
ವಿದಿತವಾಗದೆ ಹೋಯಿತವರಿಗೆ
ವಿದಿತವಾಗದೆ ಉಳಿಯಿತದು ಮೇಣ್
ಸದಭಿಮಾನಿಗಳಾದ ಹುಬ್ಬಳ್ಳಿ ಪುರದ ಹಿರಿಯರಿಗೆ ॥೨೪॥

ಕಳೆಯಲಿಲ್ಲೀ ಕೊರತೆ ತಾನೂ
ಚೆಲುವೆನಿಪ ಬ್ರಿಟೀಶರಾಳ್ಕೆಯು
ಕಳೆದು ಬಿಟ್ಟರು ಲಾಂಛನವನಾ ಜಗದ ಗುರುವರರು ।
ಗೆಲವಿನಲ್ಲಿಯೇ ಆಯುಗಳೆದಿಪ
ಬಲು ಸಮರ್ಥರು ರಾಜ ರಾಜರು
ಚಲಿಸದಿಪ ಮನದವರು ಶ್ರೀಗುರು ಸಿದ್ಧಯತಿವರರು ॥೨೫॥

ವೀರ ಶೈವರ ಧರ್ಮದಿರುವೊಲು
ಮೂರುಸಾವಿರ ಮಠದ ವೃಳ್ಳೀ
ಸಾರ ಮಹಿಮರು ಸದಭಿಮಾನಿಗಳಾದವರು ಮತ್ತೆ ।
ಭೂರಿಸುಭಿ ಮಾನಿಗಳು ತಾವಿರೆ
ಚಾರು ಹುಬ್ಬಳ್ಳಿ ಪಟ್ಟಣದಗಡ
ವೀರ ವಿರತರು ಜಗದ ಗುರುಗಳು ಹುಬ್ಬಳ್ಳಿಯ ಪುರದ ॥೨೬॥

ಮಾಡಿದರು ಹುಬ್ಬಳ್ಳಿ ನಗರದಿ
ನಾಡೆ ಕಾಲೇಜಗಳ ದ್ವಯವನು
ಮಾಡಿದರು ಕಾಮರ್ಸ್‌ವಲ್ಲದೆ ಆರ್ಟ್ಸ ಹೆಸರುಳ್ಳ ।
ಕೂಡಲೇ ಕಾಲೇಜಗಳನ್ನು
ನಾಡ ಭೂಷಣರಾದ ಗುರುಗಳು
ಮಾಡಿದರು ಹೈಸ್ಕೂಲವನು ತಾವ್ ಹುಬ್ಬಳ್ಳಿಯ ಪುರದಿ ॥೨೭॥

ಮತ್ತೆ ಮಾಡಿದರವರು ಹುಬ್ಬಳ್ಳಿ
ಚಿತ್ತ ವೇಧಕ ಪುರದಿ ಜವದೊಳು
ಸತ್ತಮರು ಟ್ರೇನಿಂಗ ಕಾಲೇಜವನು ಹರ್ಷದಲಿ ।
ಚಿತ್ತವಿಸಿರೈ ಭಕ್ತ ಜನರೇ
ಮುತ್ತಿನೊಲು ಹಸನಾದ ಮನಸಿನ
ಮುತ್ತು ಸುರಿದೊಲು ಮಾತನಾಡುವ ಜಗದ ಗುರುವಿವರು ॥೨೮॥

ಮಾಡಿದರು ಹುಬ್ಬಳ್ಳಿ ನಗರದಿ
ಕಾಡದೇವರ ಭಕ್ತರಾಗಿಹ
ಗಾಢ ಕೀರ್ತಿಯನಾಂತ ಗುರುಗಳು ಕನ್ನಡದ ಸಾಲೆ ।
ಮಾಡಿದರು ಸಂಪೂರ್ಣವಾದುದು
ನಾಡೆ ಜನ ಶಿಕ್ಷಣವ ಪಡೆಯಲು
ಮಾಡಿದರು ಹೀಗೆಲ್ಲ ವಿದ್ಯಾಮಂದಿರಗಳನ್ನು ॥೨೯॥

ಇತ್ತು ಮಠದದು ಪಾಠಶಾಲೆಯು
ಮತ್ತದರ ರೂಪಾಂತರವ ತಾವ್
ಚಿತ್ತ ಜನರಿಪ್ಪ ಭಕ್ತ ಮಣಿಗಳು ಮಾಡಿದರು ಬಳಿಕ ।
ಉತ್ತಮವು ಕಾಲೇಜ ಸಂಸ್ಕೃತ
ಬಿತ್ತರದ ಸನ್ಮೂರ್ತಿಯಾದೀ
ಗೆತ್ತು ಜನಗಳು ಕಲಿಯ ಸಂಸ್ಕೃತ ಭಾಷೆಯನಧಿಕ ॥೩೦॥

ಇಟ್ಟಿಹರು ಮಠ ಮೂರುಸಾವಿರ
ಪಟ್ಟು ತೋಷವ ನಾಳಿದಂತಹ
ಸೆಟ್ಟಿರಾಗಿಹ ತಮ್ಮ ಗುರುಗಳ ಭಕ್ತಿ ಭಾವದೊಳು ।
ಗಟ್ಟಿಗರು ಗಂಗಾಧರಾಖ್ಯರ
ಸಿಟ್ಟಿರದ ಶ್ರೀ ಜಗದ ಗುರುವರ
ರಿಟ್ಟಿಹರು ನಾಮವನು ಕಾಲೇಜಕ್ಕೆ ಸ್ಕೂಲಕ್ಕೆ ॥೩೧॥

ವಿನುತರಾದೀ ಜಗದ ಗುರುಗಳು
ವಿನಯಿಗಳು ಕಾಮರ್ಸ ಸಂಸ್ಕೃತ
ಘನವಿರುವ ಕಾಲೇಜ ವೆರಡಕೆ ನಾಮ ವಿಟ್ಟಿರಲು ।
ತಣಿಯದೇ ತಾವನಿತದೀದಲೆ
ಜನ ಜನಿತರಾಗಿರುವ ಗುರುಗಳು
ಪ್ರಣುತರೀ ಹೈಸ್ಕೂಲ ಮೇಣ್ ಟ್ರೇನಿಂಗ ಕಾಲೇಜಕೆ ॥೩೨॥

ವಿನುತ ಗಂಗಾಧರರ ನಾಮವ
ಮನದಿ ಪುಟ್ಟಿದ ಪ್ರೀತಿಯಿಂದಂ
ಗಣಪ ಪಿತೃನ ಭಕ್ತ ಮಣಿಗಳು ಮುದದೊಳಿಟ್ಟಿಹರು ।
ಮನೆಯ ತಮ್ಮಯ ದೇವರಾಗಿಹ
ಘನ ಸುಸಿದ್ಧನ ಕಾಡದೇವರ
ಮನಸಿ ಜಾರಿಯ ನಾಮವಿಟ್ಟರು ಆರ್ಟ್ಸ ಕಾಲೇಜಕೆ ॥೩೩॥

ಕನ್ನಡದ ತಾಂ ಸಾಲೆಗಿದ್ದಿತು
ಮುನ್ನ ಮಾದರಿ ಸಾಲೆಯೆಂಬುವ
ಚೆನ್ನನಾಮವ ಮೊದಲಿಗಿದ್ದಾ ಸಾಲೆಯನು ತಾವು ।
ಗನ್ನ ಮನಸಿನ ಪೂಜ್ಯ ಪಾದರು
ನನ್ನಿರೂಪರು ಕೊಂಡು ಕೊಡರು
ಮುನ್ನ ಹೆಸರಿಟ್ಟಿಹರು ಮಾದರಿ ಸಾಲೆಯೆಂದದಕೆ ॥೩೪॥

ಕಾಲೇಜಕೆ ಕಾಮರ್ಸ್‌ಕಾಗಿದೆ
ಕೇಳುವದು ಸಜ್ಜನರೆ ವ್ಯಯವದು
ಮೂಲದಲಿ ದ್ವಯ ಲಕ್ಷ ಮೇಲೈವತ್ತು ಸಾವಿರವು ।
ಕಾಲೇಜಕ್ಕಾ ಆರ್ಟ್ಸ್‌ಕಾಗಿದೆ
ಹೇಳುವದು ದ್ವಯ ಲಕ್ಷವಲ್ಲದೆ
ಮೇಲೆ ತಾಂ ಹದಿನೈದು ಸಾವಿರ ಹಣವು ವ್ಯಯ ತಾನು ॥೩೫॥

ಮತ್ತೆ ಹೈಸ್ಕೂಲಕ್ಕೆ ಸಂಸ್ಕೃತ
ಉತ್ತಮರು ಕಾಲೇಜಕಲ್ಲದೆ
ಮತ್ತೆ ವ್ಯಯ ಮಾಡಿಹರು ಕನ್ನಡ ಸಾಲೆ ಸಲುವಾಗಿ ।
ಹತ್ತಿದಂತಹ ಯೋಗ್ಯ ಹಣವನು
ಕುತ್ತಿಗಂಜದ ಜಗದ ಗುರುಗಳು
ಬಿತ್ತವಿಸಿರ್ಯೆ ಲಕ್ಷಗಟ್ಟಳೆ ಹಣವ ಮುದದಿಂದೆ ॥೩೬॥

ಮಾಡಿಹರು ಹೈಸ್ಕೂಲ ಕಟ್ಟಿಸಿ
ಜೋಡಿಯಿರದೀ ಜಗದ ಗುರುಗಳು
ನೋಡಿರೈಐವತ್ತು ಸಾವಿರ ಧನವ ತಾವುಗಳು ।
ಕಾಡದೇವರ ಭಕ್ತವರರೀ
ನಾಡ ಜನ ಕಲ್ಯಾಣ ಕಾರ್ಯದಿ
ಮಾಡಿದರು ತಮ್ಮಾಯುವೆಲ್ಲವ ಪ್ರಯವ ತೋಷದಲಿ ॥೩೭॥

ಬರೆಯುವೆನು ಸಂಧಿಯೊಳು ಮುಂದಣ
ಗುರುವರರು ಮಾಡಿರುವ ಸತ್ಕೃತಿ
ವರ ಸಹಾನಿಗಳಿವರು ಶ್ರೀ ಗುರುಸಿದ್ಧ ಯತಿವರರು ।
ಹರಗೆ ಗಿರಿಜಾಪತಿಗೆ ಕರುಣಾ
ಶರ ನಿಧಿಗೆ ಶಶಿಧರಗೆ ಸಾಂಬಗೆ
ಪರಮ ಮಂಗಲ ರೂಪನಾಗಿಪ ಶಿವಗೆ ಮಂಗಲವು ॥೨೮॥

(ಹದಿನೆಂಟನೆಯ ಸಂಧಿ ಮುಗಿದುದು)



# ಹತ್ತೊಂಭತ್ತನೆಯ ಸಂಧಿ

ಸೂಚನೆ:– ಮುಂದೆ ತಮ್ಮಯ ಮಠಕೆ ಗೈದರು
ತಂದೆಗಳು ಗುರುಸಿದ್ಧ ದೇವರು
ಬಂಧುರರು ಬಹು ಯೋಗ್ಯ ಗುರುಗಳ ಜಗದ ಗುರುವಿವರು

ಶ್ರೀಶ ಪೂಜಿತ ಪಾದ ಪದ್ಮಂ
ಶೇಷ ಭೂಷಂ ಪಾರ್ವತೀಶಂ
ಕೋಶ ಗುಣಮಣಿ ದೋಷರಹಿತಂ ಪರಮ ಪಾವನನು ।
ವಾಸವಾನತ ಚರಣ ಕಮಲಂ
ನಾಶಗೆಯ್ದಿಹ ತ್ರಿಪುರಮಂ ಜಗ
ದೀಶನಾಗಿಹ ಶಿವನು ಕರುಣದೆ ಕಾಯಲೆಲ್ಲರನು ॥೧॥

ಮಾಡಿದರು ಬಹು ಜನರ ಹಿತಕರ
ಜೋಡಿಯಿರದೀ ಕಾರ್ಯವೊಬ್ಬರೆ
ಮಾಡುತಿರೆ ವಿಘ್ನವನು ಕೆಲವರು ಪುಣ್ಯಕೃತ್ಯಕ್ಕೀ ।
ನೋಡದೆ ಅಂಥವರ ವಿಘ್ನವ
ಮಾಡಿದರು ತಮ್ಮಿಚ್ಛೆಯೊಲು ತಾವ್
ಗಾಢ ಧೈರ್ಯದೆ ಪೂಜ್ಯಪಾದರು ಸದ್ಗುರುಗಳಿವರು ॥೨॥

ಚೆಂದವಾಗಿದೆ ಹೆಚ್ಚು ಪಟ್ಟಣ
ಹೊಂದಿಹುದು ಬಹು ಕೀರ್ತಿಯದರಿಂ
ಮಂದ ಹಾಸಿತ ಮುಖದ ಯತಿಗಳು ಗೈದ ಕೃತಿಯಿಂದೆ ।
ಹೊಂದಲಿಕೆ ಹೆಚ್ಚಾದ ಶಿಕ್ಷಣ
ಮುಂದಿಗತ್ಯನುಕೂಲವಾಗಿದೆ
ಹೊಂದುವರು ಶಿಕ್ಷಣ ಸುತ್ತಿಹ ಹಳ್ಳಿ ಜನರೆಲ್ಲಾ ॥೩॥

ಹಾಡಿ ಹರಸುತ್ತಿಹರು ಸರ್ವರು
ಗಾಢ ತೋಷದೆ ಜಗದ ಗುರುಗಳು
ಮಾಡಿದಕೆ ತಾವ್ ಸಾಟಿಯಿರದೀ ಶ್ರೇಷ್ಠ ಕಾರ್ಯವನು ।
ಮಾಡಿರುವ ರಾಜನ್ಮಯತಿಗಳು
ಮಾಡಲಿಕೆ ಬರುವಂಥವೆಲ್ಲಾ
ನೋಡಿರೈವರ ಪುಣ್ಯ ಕೃತಿಗಳ ತಾವು ಜಗದಲ್ಲಿ ॥೪॥

ಇವರು ನೆಗಳಿದ ಪುಣ್ಯ ಕೃತಿಗಳು
ಭುವನದಲ್ಲಿ ಪಾರ ರಹಿತರು
ತವೆ ಸಕಲವಾ ಕಾರ್ಯ ಹೇಳಲು ಸಾಧ್ಯವಿಲ್ಲ ನಿಜ ।
ಅವುಗಳಲಿ ಕೆಲ ಮುಖ್ಯ ಕೃತಿಗಳ
ಸವಿನಯದೆ ಬಹುವಿದರೊಳೆರೆದಿರೆ
ದಿವಿಜರೇ ದಿಟ ಜಗದ ಗುರುಗಳು ಮನುಜರಿವರಲ್ಲಾ ॥೫॥

ಮೇರೆ ದಪ್ಪಿದೆ ಕೀರ್ತಿ ಸಾಂಗರ
ಮೇರೆ ದಪ್ಪಿದೆ ಪುಣ್ಯ ಸಾಂಗರ
ಸಾರ ಗುಣಮಣಿ ಭೂಷಿತರ ಶ್ರೀ ಜಗದ ಗುರುವಿವರ ।
ವೀರದಾನೀಶ್ವರರ ಮಹಿಮಾ
ಪಾರಹಿತರ ರಾಜ ರಾಜರ
ಮೂರುಸಾವಿರ ಮಠದ ಹುಬ್ಬಳ್ಳಿ ಸ್ವಾಮಿ ಮಣಿಯಿವರ ॥೬॥

ಆದನಂತರ ನಿರ್ಮಿಪುದು ಸಲೆ
ಮೋದದಾ ಕಾಲೇಜಗಳು ಮೇ
ಣಾದ ನಂತರ ಮತ್ತಿತರವಾ ಸಾಲೆಗಳು ತಾವು ।
ಸೋದರರರು ಒಡ ಜನರಿಗಾಗಿರು
ವೀದಯಾಮಯರಾದ ಶ್ರೀಗಳು
ಹಾದಿ ಹಿಡಿದುದು ಪ್ರಥಮದಲ್ಲಿಯೆ ಮತ್ತವನು ಹೆಚ್ಚು ॥೭॥

ಬೆಳಸಿದರು ತರುವಾಯ ಯತಿಗಳು
ಫಳಿಲನೇ ತಾವ್ ಸಾಲೆ ಕಲಿಯುವ
ಹಲವು ಹುಡುಗರಿಗನ್ನು ವಿಕ್ಕುವವನ್ನು ನಡೆಸಿವರು ।
ಬಲುಹು ಚೆಲುವಿಹ ತಮ್ಮ ಮಠದೊಳು
ಸಲೆ ನಡೆದ ಮೊದಲಲ್ಲಿ ಭೋಜನ
ನಿಲಯದಲಿ ಹೆರವೂರ ಭಕ್ತರಿಗಾಗಿ ನೆಲೆಸಿರುವ ॥೮॥

ಮುಂದದಕೆ ಬೋರ್ಡಿಂಗವೆಂಬುವ
ಸುಂದರಾಹ್ವಯ ಪ್ರಾಪ್ತವಾಯಿತು
ನಂದದಿಂ ದಿನ್ನೂರು ವಿದ್ಯಾರ್ಥಿಗಳು ತಾವಲ್ಲಿ ।
ಇಂದು ಎರಡೂ ಹೊತ್ತು ಭೋಜನ
ಬಂದು ಮಾಡುತ್ತಿಹರು ತಣಿವೊಲು
ಬಂಧುರರ ಗುರುವಾದ ಶ್ರೀಗಳು ಧನ್ಯರೈ ಜಗದಿ ॥೯॥

ಮಠದೊಳಗೆ ತಾವ್ ಕೆಲಸಮಾಡುವ
ದಿಟವಿದುವು ಪಲಜನಗಳಲ್ಲಿಯೇ
ಪಟುತರರ ದೀ ಊಟ ಮನೆಯಲ್ಲೂಟ ಸಾಗುವದು ।
ಮಠಕೆ ಹೆರಪೂರಿಂದೆ ಬಂದಿಹ
ನಿಟಿಲ ನೇತ್ರನ ಭಕ್ತ ಜನಗಳ
ಮಠದೊಳಿರುವೀ ಊಟ ಮನೆಯಲ್ಲೂಟವಾಗುವದು ॥೧೦॥

ಕರೆಯದೆ ಊಟಕ್ಕೆ ಬರುವರು
ಪರಮ ಮಠಕೀ ಕೆಲವು ಬಡವರು
ಬರುವರ‍್ಯೆ ಕೆಲ ಜನರು ಬೈರಾಗಿಗಳು ಭೋಜನಕೆ ।
ಕರೆಯದೇ ಬಂದಂಥ ಜನರಿಗೆ
ಕರುಣದಿಂ ಹೇಳುವದು ಸಾಗದು
ಕರೆಯದೇ ಬಂದೆಲ್ಲ ಜನಗಳಿಗನ್ನ ವಿಕ್ಕುವದು ॥೧೧॥

ಕಡೆಗೆ ನೀಡುವರೆಲ್ಲ ಜನರಿಗೆ
ಬಿಡದೆ ತೃಪ್ತಿಯ ಪಡೆವೆಲನ್ನವ
ನಡೆಯುವದು ಹೀಗೆಲ್ಲ ನಿತ್ಯವು ಶ್ರೇಷ್ಠ ಮಠದಲ್ಲಿ ।
ನಡೆಯುವದು ತಾನೆರಡು ಹೊತ್ತಿಗೆ
ಬಿಡದೆ ಹಿಡಿದರೆ ಕೂಡಿ ನಿತ್ಯವು
ಪಡೆಯುವರು ಭೋಜನವದ್ಯೆನೂರ್ ಜನರ ಮೇಲಲ್ಲಿ ॥೧೨॥

ಅನ್ನ ಛತ್ರದ ರೂಪತಾಳಿದೆ
ಸನ್ನುತರ ಶ್ರೀ ಜಗದ ಗುರುಗಳ
ಗನ್ನವಾಗಿಹ ಚೆನ್ನದಂತಹ ಭೋಜನಾಲಯವು ।
ಚೆನ್ನವಾ ಹುಬ್ಬಳ್ಳಿ ನಗರದೊ
ಳನ್ನ ಭೋಜನ ಗ್ರಹದಿ ದೊರೆವುದು
ನನ್ನಿಯಿದು ರೂಪಾಯಿಯೊಂದಕ್ಕೊಂದು ಊಟದೊಲು ॥೧೩॥

ಇನಿತು ಪೇಟೆಯೊಳನ್ನ ತುಟ್ಟಿಯು
ಮನುಜರಿಗೆ ತಾಂ ದೊರೆವ ಕಾಲದಿ
ಘನ ಮಠದೊಳಾ ಉಚಿತ ಭೋಜನ ನಿತ್ಯದಲಿ ತಾವು ।
ಜನರಿಗೈನೂರಕ್ಕೆ ಮಿಕ್ಕಿಹ
ತಣಿಪನಿತು ನೀಡುವರು ತೋಷದೆ
ಮುನಿಗಳೋಲಿಹ ಜಗದ ಗುರುಗಳ ಪರಮ ಕೃಪೆಯಿದುವು ॥೧೪॥

ವಸತಿ ಗ್ರಹವೇ ಆಗಿ ಬಿಟ್ಟಿತು
ರಸೆಯೊಳಗೆ ಪರಮವಾದ ಮಠವದು
ಪುಸಿ ಇದಲ್ಲವು ಸಕಲ ವಿದ್ಯಾರ್ಥಿಗಳ ಸಾಂಪ್ರತವು ।
ಕುಸುಮತುಲ ಮೃದ ಮನದ ಯತಿಗಳು
ತುಸು ಕೊರತೆ ತಾನಾಗ ಗೊಡದೇ
ಅಸಮವಾಗಿಹ ಪ್ರೀತಿಯಿಂದಂ ಪೊರೆಯುತಿರೆ ತಾವು ॥೧೫॥

ಉಣ್ಣುತಿಹ ಬೋರ್ಡಿಂಗದಲಿ ಗಡ
ಚೆನ್ನ ವಿದ್ಯಾರ್ಥಿಗಳು ದ್ವಯ ಶತಕ
ಗನ್ನವಾದಾ ಮಠದೊಳವರೊಳು ಲಿಂಗಯುತರಿವರು ।
ಉಣ್ಣುವರು ಮುಕ್ಕಾಲು ಬಾಲಕ
ರುಣ್ಣುವರು ಮೇಣ್‌ಮಿಕ್ಕ ಜಾತಿಯು
ಕನ್ನಡಿಗರೈವತ್ತು ಹುಡುಗರು ಯೋಗ್ಯ ಸಮಯಕ್ಕೆ ॥೧೬॥

ಹಲವು ಜನಿಸಿವೆ ಜಾತಿವಾಚಕ
ಚೆಲುವು ಬೋರ್ಡಿಂಗಗಳು ದೇಶದೊ
ಳುಳಿದ ಜಾತಿಯ ನೊಬ್ಬ ಬಾಲನ ತೆಗೆದು ಕೊಳ್ಳದಿಹ ।
ತುಲವಿರದ ಶ್ರೀ ಜಗದ ಗುರುಗಳು
ಬಲುವಿಶಾಲಾಂತರ್ಯ ಯುತರಾ
ಉಳಿದ ಕುಲದೈವತ್ತು ಬಾಲರ ತೆಗೆದು ಕೊಂಡಿಹರು ॥೧೭॥

ಸಲೆ ಮೆರೆವ ಬೋರ್ಡಿಂಗದಲಿ ಗಡ
ಒಲು ಮಮತೆಯಿಂ ಪೂಜ್ಯ ಪಾದರು
ಗಳಿಸಿರುವದರಿಂದ ನಾಡಿನ ಪ್ರೀತಿಯನ್ನಿವರು ।
ಕಲಿಯಬೇಕೀ ಪರಮ ಗುರುಗಳ
ಚೆಲುವು ನಡತೆಯಂ ರಾಷ್ಟ್ರದೊಳಗಿರು
ಉಳಿದ ಜಾತಿಯರಾದ ಬೋರ್ಡಿಂಗಗಳ ನಡೆಸುವರು ॥೧೮॥

ಲಿಂಗವಂತರ ದನಿತೆ ಮಾಡದೆ
ಮಂಗಲರು ಶ್ರೀ ಜಗದ ಗುರುಗಳು
ತುಂಗಮನದವರಿವರು ಹಿಂದೂ ಧರ್ಮಿಗಳನೆಲ್ಲಾ ।
ಲಿಂಗವಂತರ ಹಾಗೆ ಭಾವಿಸಿ
ಪಂಗಿರದ ಯತಿ ಸಂಘ ಚಂದ್ರರು
ಪುಂಗವರು ತಾವಾಸ್ಥೆ ಗೈದರು ಭೇದಕ್ಕೆಡೆಗೊಡದೆ ॥೧೯॥

ನಡೆಯಲಿಕೆ ಚೆನ್ನಾಗಿ ಕಾರ್ಯವು
ಕಡು ಹಿತದ ಶಿವಯೋಗ ಸದನದ
ಮೃಡನ ರೂಪರು ಧನದ ನೆರವನು ಯೋಗ್ಯ ಸಮಯಕ್ಕೆ ।
ಬಿಡದೆ ಗೈದರು ಗೆಯ್ಯುತಿದ್ದರು
ಕೊಡುತಲಿದ್ದರು ಯೋಗ್ಯ ಸಂಸ್ಥೆಗೆ
ಗಡ ಹಣವ ಬಲು ಪ್ರಣುತ ಗುರುಸಿದ್ಧೇಶ್ವರರು ತಾವು ॥೨೦॥

ಇಡುವ ದೇಹದ ಕಾಲ ಬಂದುದು
ಮೃಡನ ರೂಪರು ತಿಳಿದು ಮನದಲಿ
ಪುಡುಕುತಿದ್ದರು ಮುಂದೆ ತಮ್ಮಯ ಮಠಕೆ ಮಾಡಲಿಕೆ ।
ಒಡೆಯಗನು ಒಹು ಯೋಗ್ಯರಾಗಿಹ
ಜಡಜ ಸಮ ಮೃದುವಾದ ಹೃದಯರು
ಗಡ ಜಗದ್ಗುರುವರರು ಶ್ರೀ ಗುರುಸಿದ್ಧ ಯೋಗಿಗಳು ॥೨೧॥

ಅರಿತಿರಲು ತಾವ್ ತಮ್ಮ ಮನದಲಿ
ಗುರುಗಳಾಗುವದೆಂಬದಿವರೇ
ಗುರುವರೇಣ್ಯರು ತಮ್ಮಯಂತಜ್ಞಾನದಿಂ ತಾವು ।
ಅರಿಯದವರೊಲು ಮಾಡುತಿದ್ದರು
ಬರಿದೆ ಸಂಸಾರಿಗಳ ತೆರದಲಿ
ಪರಮ ಮಹಿಮರು ಮೂರುಸಾವಿರ ಮಠದ ಸ್ವಾಮಿಗಳು ॥೨೨॥

ಇದ್ದರೈ ತಾವ್ ಕಾಶಿ ಕ್ಷೇತ್ರದಿ
ಮುದ್ದಿನಿಂ ಸಂಸ್ಕೃತವ ಕಲಿಯಲು
ಬುದ್ಧಿ ಸಾಗರರಾದ ಭಾವೀಜ್ಜಗದ ಗುರುವರರು ।
ಬುದ್ಧಿಗಳು ಗುರುಸಿದ್ಧ ದೇವರು
ಶುದ್ಧ ಮನದಿಂ ಕರೆಸಿದರು ಜವ
ವೆದ್ದು ತೋರುವ ಶಾಂತರಿವರನು ಬರೆದು ಪತ್ರವನು ॥೨೩॥

ಹೇಳಬೇಕಾಗಿಹುದು ಶ್ರೋತ್ರರೆ
ಶೀಲಯುಕ್ತರ ಪೂರ್ವ ಚರಿತೆಯ
ಕೇಳಿರೈ ಮೈಸೂರ ಪ್ರಾಂತ ಕಡೂರ ಜಿಲ್ಲೆಯೊಳು ।
ಮೇಲೆನಿಪ ಶಶಿವಾಳ ಗ್ರಾಮದಿ
ಶೂಲ ಭಕ್ತಾಗ್ರಣಿಗಳಾದ ಸು-
ಶೀಲರಾಗಿಹ ಮರುಳಸಿದ್ಧಯ್ಯ ಚೆನ್ನಮ್ಮರ ತಾವು ॥೨೪॥

ಉದರದಿಂ ಜನ್ಮವನು ಪಡೆದರು
ಸುದಿವಸದಲಿ ಮಂಗಲ ಮುಹೂರ್ತದಿ
ಬುಧರು ಹತ್ತೊಂಭತ್ತರ ಇಪ್ಪತ್ತೊಂಭತ್ತಬ್ಧದಲಿ ।
ಸದಯರೀ ಹುಬ್ಬಳ್ಳಿಯೊಳಗಿರು
ವಧಿಕ ಕೀರ್ತಿಯನಾಂತಿರುವ ಮಠ
ದಧಿಪರಾಗಲು ಜನಿಸಿರಲು ಜಗದಲ್ಲಿ ಶ್ರೀವರರು ॥೨೫॥

ಇರುವದಿವರಿಗೆ ಪ್ರಥಮ ನಾಮವು
ಹರುಷಗೊಳಿಪ ವಿಜಯ ಮಹಂತೇ
ಶ್ವರವಿದುವು ಬಹು ಯೋಗ್ಯವಾದುದು ಹೆಸರಿನೋಳಿಪರು ।
ಮೆರೆಯುವರು ಚಿಕ್ಕಂದಿನಿಂದಂ
ಧರೆಯಲೀ ತಾವ್ ವಿಜಯದಿಂದಂ
ಸರುವರಿಗೆ ಪ್ರಿಯರಾಗಿಪರು ಬಲು ಸದ್ಗುಣದೆ ತಮ್ಮ ॥೨೬॥

ಕಲಿಯುತಿಪರು ಕನ್ನಡವ ಮೊದಲಿಗೆ
ಕಲಿತರಾಮೇಲಾಂಗ್ಲ ಭಾಷೆಯ
ಕಲಿತರೈ ತರುವಾಯ ಸಂಸ್ಕೃತ ಹಿಂದಿ ಭಾಷೆಗಳ ।
ಬಲು ಮುದದೆ ಶಿವಯೋಗ ಭವನ (ಮಂದಿರ)ದೊ
ಳಲಸತನವಿಲ್ಲದಲೆ ಗೈದರು
ಬಲವು ಹುರುಪಿಂ ಯೋಗದಭ್ಯಾಸವನು ಮತ್ತಲ್ಲಿ ॥೨೭॥

ಬರುತಿಪವು ಸಲೆ ನಾಲ್ಕು ಭಾಷೆಗ
ಳೊರೆದ ತೆರದೊಳು ಮೊದಲು ವಿವರವ
ಬರೆದಿಪರು ಕೆಲ ಗ್ರಂಥಗಳನೀ ತರುಣ ಗುರುವರರು ।
ಬರೆದಿಪರು ಮೇಣ್ ಪದ್ಯ ಪುಸ್ತಕ
ಪರಮ ಯತಿಗಳು ಕವಿಗಳಿಪರೀ
ಗುರುವರರು ಯುವ ಜಗದ ಗುರುಗಳು ಶಾಂತವೃತ್ತಿಯರು ॥೨೮॥

ಮೊದಲು ವಿಜಯ ಮಹಾಂತ ಯತಿಗಳು
ಚದುರರಿವರಾಗಿರಲು ಗುರುಗಳು
ಸದಯರೀ ಚಿತ್ತರಗಿಯೆಂಬುವ ಪುರದ ಸನ್ಮಠಕೆ ।
ಅದುವಿರುವದಿಲಕಲ್ಲ ಬಳಿಯ
ಲ್ಲದರೊಡೆತನವ ಸಾಗಿಸುವದನು
ವಿಧಿಯು ಬರೆದಿರಲಿಲ್ಲ ಲೇಖಗನ್ನಿವವ ಭಾಲದಲಿ ॥೨೯॥

ಬಂದರೈ ತಾವ್ ಕಾಶಿಯಿಂದಂ
ಬಂದು ಶ್ರೀಗಳ ಪಾದ ಕಮಲಕೆ
ವಂದನೆಯ ಮಾಡಿದರು ವಿಜಯ ಮಹಾಂತ ಯತಿಗಳು ।
ಮುಂದೆ ಶ್ರೀಗಳು ಕರೆಸಿಕೊಂಡರು
ಮಂದಿಯನು ಭಕ್ತರಲಿ ಪ್ರಮುಖರ
ತಂದೆಗಳು ಮೇಣ್ ಕರೆಸಿದರು ಹಲ ಮಠದ ಗುರುಗಳನು ॥೨೦॥

ಕಲೆತ ಮೇಲ್ ಕರೆದಿರುವ ಜನಗಳು
ಬಲು ಮೆರೆವ ಮಠದಲ್ಲಿ ತಮ್ಮಯ
ತಿಳಿಸಿ ಹೇಳಿದರೆಲ್ಲ ಜನರಿಗೆ ವೃದ್ಧನಾಗಿಹೆನು ।
ಉಳಿಯಲಾರೆನು ಬಹಳ ದಿನವೀ
ಯಿಳೆಯ ಮೇಲ್ ನಾ ಮುಂದೆ ಮಠಕೀ
ಚೆಲುವ ಗುರುಗಳ ನೇಮಿಸಲು ನಿಮ್ಮನ್ನು ಕರೆಸಿಹೆನು ॥೨೧॥

ಒಮ್ಮತದಿ ನೀವ್ ಹೇಳಿದವರನು
ನಮ್ಮ ಮಠಕೀ ಸ್ವಾಮಿ ಮಾಳ್ಪೆನು
ನಿಮ್ಮ ಮನಸಿಗೆ ಬಂದವರ ನೀವ್ ಹೇಳುವದು ತಿಳಿದು ।
ಸಮ್ಮತಿಸಿದರು ನೆರೆದ ಜನಗಳು
ಹಮ್ಮಿರದ ಶ್ರೀ ಜಗದ ಗುರುಗಳು
ತಮ್ಮ ವಾಂಛೆಯ ತಿಳಿಸಿದಂದದಿ ತಮ್ಮ ತಮ್ಮೊಳಗೆ ॥೨೨॥

ಮಾಡಿದರು ತಾವೆರಡು ದಿವಸವು
ನಾಡೆವಾದ ವಿವಾದ ಬಹಳೇ
ನೋಡಿರ್ಕೆ ಆಗದಕೆ ತಮ್ಮೊಳಗೊಮ್ಮತವು ತಾನು ।
ಕೂಡಿ ಪ್ರಮುಖರು ಕೆಲರು ಪೇಳ್ದರು
ಜೋಡಿರದ ಶ್ರೀ ಪೂಜ್ಯಪದರಿಗೆ
ಕೂಡಿದೆಮ್ಮೊಳು ಮತವು ಸರ್ವರ ನೀವೆ ನೇಮಿಸುವದು ॥೨೩॥

ನಿಮ್ಮ ಮನಸಿಗೆ ಬಂದ ಗುರುಗಳ
ನಿಮ್ಮ ಮಠಕೀ ಸ್ವಾಮಿ ಮಾಡಿರಿ
ನಮ್ಮ ಸಮ್ಮತಿಯಿರುವದೆಲ್ಲರ ಜ್ಞಾನಿಗಳು ನೀವು ।
ತಮ್ಮಯೊಪ್ಪಿಗೆ ಕೊಟ್ಟಮೇಲಾ
ಚಿಮ್ಮುವಾನಂದದಲಿ ಸುಜನರು
ನಮ್ಮ ಶ್ರೀಗಳು ಕರೆಸಿಕೊಂಡರು ಮೇಲೆ ಕುಳಿತಿರುವ ॥೩೪॥

ಕಾಶಿಯಿಂ ಬಂದಿರುವ ಯತಿಗಳ
ದೋಷರಹಿತರ ಶಿಕ್ಷಿತರ ಬಹು
ಲೇಸು ಗುಣವುಳ್ಳವರ ತೋರಿಸಿ ಕೂಡಿದೆಲ್ಲರಿಗೆ ।
ಈ ಶರಾ ಪೇಳಿದರು ನನಗೀ
ಕಾಶಿಯಿಂ ಬಂದಿರುವ ಯತಿಗಳು
ದೇಶದೊಳು ಕೀರ್ತಿಸಿದ ಮಠಕೀ ಸ್ವಾಮಿಯಾಗಲಿಕೆ ॥೩೫॥

ಸರ್ವ ವಿಧದಿಂ ಯೋಗ್ಯತೋರ್ಪರು
ಸರ್ವರೂ ಸಮ್ಮತವ ನೀವುದು
ಶರ್ವನೊಲಿಪ ಗುರುವರೇಣ್ಯರು ಹೇಳಿದೊಲು ಬಳಿಕ ।
ಸರ್ವ ಜನರುಗಳೊಪ್ಪಿ ಕೊಂಡರು
ಸರ್ವರೂ ಸಾಷ್ಟಾಂಗ ನಮನವ
ಪಾರ್ವತೀಶ ಹಾಗೆ ತೋರುವ ಯತಿಗೆ ಮಾಡಿದರು ॥೩೬॥

ಮಾಡಿದರು ಮೇಣ್ ಸಕಲ ಜನಗಳು
ಕೂಡಲೇ ಗುರುಸಿದ್ಧ ದೇವಗೆ
ಮಾಡಿರುವ ನರರೂಪದಿಂದಂ ಶಿವಗೆ ವಂದನೆಯ ।
ನಾಡೆ ಸಂಭ್ರಮದಿಂದ ಮುಗಿಯಿತು
ಮಾಡಿದುದು ಗುರುಗಳನು ಮುಂದಣ
ಕೂಡಲೇ ಯೀ ಮೂರುಸಾವಿರ ಪರಮ ಮಠದಲ್ಲಿ ॥೩೭॥

ಶ್ರೀ ಜಗದ್ಗುರುವರರ ಪ್ರೀತಿಯು
ನೈಜವಿದು ಬಲವಿತ್ತು ಯುವಕ
ಶ್ರೀ ಜಗದ್ಗುರುವರರ ಮೇಲದು ನಿರುಪಮವು ತಾವು ।
ಸೋಜಿಗವು ಕಡು ಚಿಕ್ಕ ಗುರುಗಳ
ಸಾಜವೇ ಶ್ರೀಯವರ ಮೇಲೂ
ಮಾಜದೊಲು ತೋರುವದು ಪ್ರೀತಿಯು ಧನ್ಯರುಭಯುತರು ॥೩೮॥

ಗರತಿಯರ ದಿರುವಂತೆ ಪ್ರೀತಿಯು
ತರಳರಲಿ ತಾಂ ಹಡೆದ ತನ್ನಯ
ಪರಮ ಮಮತೆಯು ಪತಿಯ ಮೇಲಿರುವಂತೆ ಯಾಕೆಯದು ।
ಮೆರೆಯುತಿಹ ಪೇಣ್ ಚೆನ್ನ ಮನೆತನ
ದರಲಿ ತೋರುವ ತಂದೆ ಮಕ್ಕಳ
ಹಿರಿಯ ಪ್ರೀತಿಯು ವಾಸವಾಗಿರಲು ಭಯ ಗುರುಗಳಲಿ ॥೩೯॥

ಅತಿಶಯಾದರ ಭಕ್ತಿ ಮಮತೆಯು
ನುತ ಜಗದ್ಗುರುವರರ ಮೇಲಿದೆ
ಮತಿ ಜಲಧಿಯಾಗಿರುವ ಭಾವಿ ಜಗದ ಗುರುವಿವರ ।
ಕಥಿಸಲಿಕೆ ಸಾಧ್ಯವಿದೆ ಮುಖದಿಂ
ಮಿತವಿಚನಿಗಳ ಭಕ್ತಿ ಮಮತೆಯ
ಯತಿವರರದು ನೋಡಿದರೆ ಸಂತೋಷವಾಗುವದು । ॥೪೦॥

ಹವೆಯ ಸೇವನೆಗಾಗಿ ನಿತ್ಯವು
ನವ ಗುರುಗಳನು ತಮ್ಮ ಜತೆಯುಲಿ
ಸುವಿನಯಿಗಳು ಗಮಿಸುತಿದ್ದರು ಕರೆದುಕೊಂಡು ಗಡ ।
ತವೆ ಮೆರೆಯುತಿಹ ಕಾರಿನಲಿ ತಾವ್
ಸುವಿಮಲಾಂತಃಕರಣ ಯುಕ್ತರು
ಭುವನನುತ ಗುರುಸಿದ್ಧರಾಜರು ಜಗದ ಗುರುವರರು । ॥೪೧॥

ಹೇಳುತಿದ್ದರು ಸಮಯದೊಳಗಾ
ಮೇಲು ಮತವಿದನಾಳ್ವ ರೀತಿಯ
ಹೇಳುತಿದ್ದರು ಮಾಡಬೇಕಾಗಿರುವ ಕೆಲಸಗಳ ।
ಕೇಳಿರೈ ನೆರೆ ಮುಂದೆ ಸಾಗಲಿ
ಶೂಲ ಭಕ್ತರ ಘನಮತದ ತಾ
ನಾಳಿಕೆಯು ಹಿತಜನರಿಗಾಗಲಿ ಬಯಕೆಯಿಂದವರು ॥೪೨॥

ಶ್ರೀ ಜಗದ್ಗುರು ರಾಜ ರಾಜರ
ನೈಜವಿದು ಗುರುಸಿದ್ಧ ಯತಿಯೊಲು
ಸೋಜಿಗವು ಕೆಲಗುಣಗಳಿವೆ ನವ ಜಗದ್ಗುರುಗಳಲಿ ।
ಸಾಜತನ ಮೇಣ್ ಸ್ವಚ್ಛ ಮಾನದ
ಮಾಜದಿರುವ ಔದಾರ್ಯವಲ್ಲದೆ
ರಾಜಿಸುವ ಸವಿನಯವು ನಿರಹಂಕಾರ ವೃತ್ತಿಯಿವು ॥೪೩॥

ನೋಡಿ ಸದ್ಗುಣ ವಿಂಥವಿವರವು
ಗಾಢ ತೋಷವ ಪಡೆವರೆಲ್ಲರು
ಮಾಡುವರು ಸಮಮವತೆ ಶ್ರೀಗಳು ಸಕಲ ಜನರನ್ನು ।
ನಾಡೆ ಯುತ್ಸಾಹ ವೃತ್ತಿಯುಕ್ತರು
ನೋಡಿ ಶ್ರೀ ಗುರುಸಿದ್ಧ ಯತಿಗಳು
ಮಾಡುತಿದ್ದರು ಸ್ತುತಿಯನಿವರದು ಜನಗಳೆದುರಿನಲಿ ॥೪೪॥

ಎಸಗಿದರು ತಮ್ಮಾಕ್ಕೆಯೊಳು ತಾವ್
ಹಸನ ಮನಸಿನ ಜಗದ ಗುರುಗಳ
ತುಸುವೆ ಹಣವದು ಹತ್ತುಲಕ್ಷ ದಾನಮಾಡಿಹರು ।
ಉಸುರಿಹುದು ನಿಮಗೊಮ್ಮೆ ಇದನೇ
ಪಶು ಪತಿಯ ಸದ್ಭಕ್ತ ಜನರೇ
ಕುಸುಮತುಲ ಮೃದುಮನದ ಶ್ರೋತ್ರರೇ ಸ್ಮರಣವಿರಬಹುದು ॥೪೫॥

ಇನಿತು ವ್ಯಯವನು ಹಣದ ಗೈದರು
ಘನ ಮಹಿಮ ರಾಜಗದ ಗುರುಗಳು
ಧನದ ಸುಸ್ಥಿತಿಯುಳಿಸಿರುವರೈ ಸನ್ಮತದಿ ತಮ್ಮ ।
ಜನಕರೇ ನಿಜ ಪೂರ್ವ ಜನ್ಮದ
ವಿನುತ [illegible]ರು ಸಿದ್ಧೇಶ ಗುರುಗಳು
ಸುನಯರಾಗಿಹ ತರುಣರಾಗಿಹ ಜಗದ ಗುರುವಿವರ ॥೪೭॥

ಜಗದುದರನಾಗಿರುವವನು ಮೇಣ್
ಜಗವ ನೆಲ್ಲವ ತುಂಬಿ ತುಳುಕುವ
ಜಗವ ನೆಲ್ಲವ ನಿರ್ಮಿಸಿದ ತಾಂ ಜಗವ ರಕ್ಷಿಸುವ ।
ಜಗವಿದೆಲ್ಲಕೆ ದೇವನಾಗಿಹ
ಗಗನಕೇಶಗೆ ಪಾರ್ವತೀಶಗೆ
ಸುಗುಣ ಮಣಿ ಮಂದಿರಗೆ ಶಿವನಿಗೆ ನಿರುತ ಜಯವಿರಲಿ ॥೪೮॥

( ಹತ್ತೊಂಭತ್ತನೆಯ ಸಂಧಿ ಮುಗಿದುದು )



# ಇಪ್ಪತ್ತನೆಯ ಸಂಧಿ

ಸೂಚನೆ:- ತೊರೆದು ಜಡತನು ಕೊಡಿ ಬಿಟ್ಟರು
ಪರನೊಳಗೆ ಶ್ರೀ ಜಗದ ಗುರುಗಳು
ಪರುಷದಿಂ ಶಿವರಾತ್ರಿ ದಿನದಲಿ ನರಮಣಿಗಳಿವರು ।

ಶ್ರೀ ಮದನಹರ ಶೈಲಜಾವರ
ವಾಮದೇವ ಸುಹಾಸ್ಯಯುತ ಮುಖ
ಕೋಮಲಾಂತಃ ಕರುಣಿ ಮುಪ್ಪುರ ದಹಿಸಿರುವ ಮೃಡನು ।
ಪ್ರೇಮಮಯ ಕಾರುಣ್ಯ ಸಾಗರ
ಭೂಮಿಧರ ಮಂದಿರ ಸದಾಶಿವ
ಸೋಮಶೇಖರ ಸರ್ಪ ಭೂಷಣ ಪರ ಪೊರೆಯಲೆಮ್ಮ ॥೧॥

ಶ್ರೀ ಜಗದ್ಗುರುವರರ ಪ್ರೀತಿಯು
ಸಾಜವೇ ಅತ್ಯಧಿಕವಾಗಿರ
ರಾಜಿಸುತ್ತಿಹ ಧಾರವಾಡದಿ ವಾಸಗೆಯ್ದಿರುವ ।
ನೈಜಭಕ್ತರೊಳೊಬ್ಬನಾಗಿಹ
ಮಾಜದಿಹ ಚೆಲು ನಡತೆಯುಳ್ಳ
ಮೂಜಗದ ಪತಿದಯದೆ ರಾಚಪನರಳಿಕಟ್ಟಿ ಗಡ ॥೨॥

ಮೇಲೆಯೆಂಬುದು ವೆಂತೆಯೊರೆದಿದೆ
ಶೀಲವಂತರೆ ಶಿವನ ಭಕ್ತರೆ
ಹೇಳುತಿದ್ದರು ಮಹಿಮರಾ ಭಕ್ತನಿಗೆ ಸರ್ವವನು ।
ಶೂಲಿಯಾಗಿಹ ಮರ್ತ್ಯಗೆ ಲೋಕದ
ಶೀಲಸಂಭೂಪರಿಗೆ ರೋಗವು
ಮೇಲೆ ಮೇಲುರು ಕಾಡಹತ್ತಿತು ಸರ್ವಜ್ಞರವರು ॥೩॥

ತಿಳಿದು ಬಿಟ್ಟರೆ ದೇಹವಿರುವದು
ತಿಳಿಸಿದರು ತಾವ್ ರಾಚಪನಿಗಾ
ಕಳೆಯುವೆನು ದೇಹವನು ಕೆಲ ಮಾಸದಲಿ ನಾನಿನ್ನು ।
ಕಳೆಯಬಾರದು ತನುವ ಸಜ್ಜರೆ
ಉಳಿಯ ಬೇಕೀ ಜಗದಿ ಬಹುದಿನ
ಬೆಳೆಸಲಿಕೆ ಮಾನವರ ಸುಖವನು ಮಹಿಮರೇ ನೀವು ॥೪॥

ಅನ್ನುತಿದ್ದರು ಅಜ್ಜನೆಂದಾ
ಸನ್ನುತರಿಗಾ ಅರಳಿಕಟ್ಟೀ
ನನ್ನಿಯಕ್ಕರದಿಂದೆ ಮೊದಲಿನತುಟ್ಟು ರಾಚಪನು ।
ಗನ್ನ ಮಹಿಮರು ಪೇಳ್ದರಾತಗೆ
ನನ್ನ ರಾಚಪ ಮುಗಿದಿರುವರೈ
ನನ್ನಯಾಯುವು ಹಿಂದೆಯೊಂದೂವರೆ ವರುಷ ಮೊದಲು ॥೫॥

ಬೆಳೆಸಿಕೊಂಡನು ಹೆಚ್ಚು ಕಾಲವ
ತಿಳಿದುಕೊಳ್ಳೆ ಯೋಗ ಬಲದಿಂ
ದುಳಿವ ಬಯಕೆಯು ನಷ್ಟವಾಗಿದೆ ನನ್ನ ಮನದಲ್ಲಿ ।
ಇಳೆಯ ಮೇಲವತಾರ ತಾಳೆನು
ಸಲೆಯೆಸಗಿದೆನು ಸರ್ವ ಕಾರ್ಯವ
ನುಳಿದ ಕಾರ್ಯವ ಮಾಡುವರು ಯುವ ಜಗದ್ಗುರುವರರು ॥೬॥

ಹೇಳಿದನು ಮತ್ತದನೆ ರಾಚಪ
ಕೇಳಿರಜ್ಜರೆ ನನ್ನ ಬಿನ್ನಪ
ಬಾಳ ಬೇಕೀ ಜಗದಿ ಹೆಚ್ಚಿಗೆ ರಕ್ಷಿಸಲು ನಮ್ಮ ।
ಕೇಳಿ ಭಕ್ತನ ಮನವ ಕರಗಿಪ
ಮೇಲು ಮಮತೆಯ ಭಾಷಣವನುರೆ
ತಾಳಿದರು ಮೌನವನು ಶ್ರೀಗಳು ಘನ ಮಹಿಮರವರು ॥೭॥

ಮತ್ತೆ ಕೆಲದಿನ ಕಳೆದ ನಂತರ
ಮತ್ತದನೆ ಹೇಳಿದರು ಶ್ರೀಗಳು
ಮೆತ್ತಗಿನ ಮಾನಸದ ಸುತನೋಲಿರ್ಪ ರಾಚಪಗೆ ।
ಬಿತ್ತವಿಸು ರಾಚಪನೆ ತೊರೆದನು
ಕುತ್ತುಗಳಿಗೀಡಾಗುತಿಪ ತನು
ಮುತ್ತಿನಂತಪ ನನ್ನ ಭಕ್ತರ ಪೊರೆಯಲಿಕೆ ನಾನು ॥೮॥

ಇರುವೆನಪ್ರತ್ಯಕ್ಷ ವಿಷದೊಳು
ತೊರೆಯು ರಾಚಪ ಚಿಂತೆಯನು ನೀ
ಗುರುವರರು ಪೇಳಿಂತು ತದುಪರಿ ಮೌನ ತಾಳಿದರು ।
ಮರುಗಿದನು ಮರ ಮರನೆ ರಾಚಪ
ಪರಮ ಯತಿಗಳ ಭಾಷೆಯಾಲಿಸಿ
ಪೊರೆಯುತಿದ್ದನು ಬಿಡದೆ ಮನೆಯ ಪಿತ್ರನೋಲಿರುವ ॥೯॥

ಗುರುವರರು ಗುರುಸಿದ್ಧ ಮೂರ್ತಿಗ
ಳೊರೆದ ಮಾತುಗಳನ್ನು ಮರಗುತೆ
ಸರುವರೂ ದುಃಖಿಸುತಲಿದ್ದರು ಕೇಳಿ ಗುರುವಚನ ।
ಅರುಹುತಿದ್ದರು ಪೂಜ್ಯಪಾದರು
ಕರುಣದಿಂ ರಾಚಪಗೊಬ್ಬಗೆ
ಹಿರಿಯ ಮಾತುಗಳೆಲ್ಲವಿಂತಹ ಸಂಪ್ರೀತಿಯಿಂದೆ ॥೧೦॥

ಮುಂದೆ ಕೆಲದಿನ ಕಳೆದ ನಂತರ
ಬಂಧುರರು ಗುರುಸಿದ್ಧ ದೇವರು
ಬಂದಿರುವ ದರ್ಶನಕೆ ರಾಚಪಗಿಂತು ಹೇಳಿದರು ।
ಇಂದು ಶೇಖರನಲ್ಲಿ ಬರವೆನು
ಕಂದನೇ ರಾಚಣ್ಣ ಕೇಳೆಲೋ
ಸಂದದಿಂ ಶಿವರಾತ್ರಿ ದಿನದಲಿ ತಪ್ಪದೇ ನಾನು ॥೧೧॥

ಕೇಳಿ ಶಿವಯೋಗಿಗಳ ಭಾಷೆಯ
ತಾಳಿದನು ಬಹು ದುಃಖವನು ತಾಂ
ಕೇಳಿರೈ ರಾಚಪನರಳೀಕಟ್ಟಿ ಶ್ರೀಯುತನು ।
ಹೇಳುತಿರಲಿಲ್ಲಿಂಥ ಮಾತನು
ಮೇಲು ಯತಿಗಳು ಪರರಿಗೆಂದೂ
ಶೀಲ ಸಂಪದದಿಂದೆ ಶೋಭಿಪ ಜಗದ ಗುರುವರರು ॥೧೨॥

ಕಾಡುತಿತ್ತದು ಶ್ರೀಗಳನು ರುಜೆ
ಪೀಡೆಯನ್ನಾ ಹಲರ ಕಳೆದಿಹ
ಜೋಡಿಯಿರದೀ ಪುಣ್ಯ ಚರಿತರು ಭೇಷಪ ತಾವು ।
ನೋಡಿ ಭಕ್ತಜನಾಗ್ರಹವ ಗಡ
ಮಾಡುತಿರಲು ಪ್ರಚಾರವನು ತಾವ್
ಮಾಡುವೊಲು ಪ್ರಾಪಂಚಿಕರು ತಾವೀಜಗತಿನಲಿ ॥೧೩॥

ಗಮಿಸ ಬೇಕೆಂದೆನಿಸಿ ಶ್ರೀಗಳು
ಪ್ರಮುದದಿಂದಂ ವಾಸ ಮಾಡಲು
ವಿಮಲ ಮನದವರಿವರು ಗೋಬಲ ಗುಡ್ಡ ಬಳಿಯೊಳಿಹ ।
ಸುಮತಿಗಳು ತಮ್ಮಾಶ್ರಮಕೆ ತಾ
ವಮಿತ ಹರ್ಷದೆ ತೊರೆದು ತಮ್ಮಯ
ಸಮವಿರುದುದಾ ಮೂರುಸಾವಿರ ಮಠದ ಹುಬ್ಬಳ್ಳಿಯ ॥೧೪॥

ಕೊನೆಯದಾಯಿತು ಬಿಟ್ಟುದುದು ಮಠ
ಘನ ಮಹಿಮ ಗುರುಸಿದ್ಧ ದೇವರು
ಘನ ಮಠದ ಶ್ರೀ ಜಗದ ಗುರುಗಳು ಪುಣ್ಯ ದೇಹಿಗಳು ।
ಕೊನೆಯದಾದುದು ವಿದಿತವಾಗಿದೆ
ಘನ ಮಹಿಮರಿಗೆ ಮಠವ ಬಿಟ್ಟುದು
ಜನರಿಗದು ಗೊತ್ತಾಗಲಿಲ್ಲವು ಘನ ಮಠದೊಳಿರುವ ॥೧೫॥

ಮಠದೆ ಹೊರಡುವ ಮೊದಲು ಶ್ರೀಗಳು
ಪಟುಗಳಾಗಿರುವಾದ್ಯರಾಗಿಹ
ಮಠದ ಸ್ಥಾಪನೆ ಗೈದ ಶ್ರೀಗುರುಸಿದ್ಧ ಯೋಗಿಗಳ ।
ದಿಟದ ಮೂರ್ತಿಯು ಗದ್ದಿಗೆಗೆ ತಾವ್
ತಟನಿ ಪತಿಯಾಗಿರುವ ಕರುಣೆಯು
ನಿಟಿಲ ನೇತ್ರನ ಭಕ್ತವರ್ಯರು ನಮನ ಪಾಡಿದರು ॥೧೬॥

ನುಡಿದರೈ ತಮ್ಮೊಳಗೆ ಶ್ರೀಗಳು
ಕಡೆಯ ದರ್ಶನ ನಿಮ್ಮದಿದು ಪ್ರಭು
ಕೊಡು ಹರಕೆಯಂ ಕರುಣದಿಂದಂ ಹೋಗುವೆನು ನಾನು ।
ನುಡಿಯುವಾಗಳ್ ತಮ್ಮೊಳೀಂತೀ
ಬಿಡದೆ ಬಂದವು ನೀರು ಕಣ್ಣಲಿ
ಗುಡಿಯ ಹೊರಗಡೆ ಬಂದು ಬಿಟ್ಟರು ಕಣ್ಗಳೊರಿಸುತ್ತ ॥೧೭॥

ಕುಳಿತು ಮೋಟಾರದಲಿ ಹೊರಟರು
ಬಲು ಮೃದುಲವಾಗಿರುವ ಹೃದಯರು
ನೆಲದ ಮೇಲಣ ಸುರಪ ಸದನದ ಹಾಗಿರುವ ತಮ್ಮ ।
ಬಲು ಮಮತೆಯಿಂ ಮಠವ ನೋಡುತ
ಪಲವು ಸಲ ತಿರು ತಿರುಗಿ ಯತಿಗಳು
ತಳಿದ ಷಡರಿಗಳನ್ನು ಶ್ರೀಗುರು ಸಿದ್ಧ ಯೋಗಿಗಳು ॥೧೮॥

ಇರುವ ತಾಂ ಫಕ್ಕೀರಿ ರೋಡಿನ
ನೆರೆ ಮೆರೆವ ಗೋಬಲಧ ಗುಡ್ಡದ
ಹಿರಿಯದಾಗಿಹ ತಮ್ಮಯಾಶ್ರವ ದೊಳಗೆ ಶ್ರೀಯವರು ।
ಹರುಷದಿಂದಂ ಬಂದು ಬಿಟ್ಟರು
ಕರಸಿಕೊಂಡರು ಬಳಿಕ ಕೆಲರನು
ಕರುಣೆಗಳು ತಾವ್ ಮಕ್ಕಳಂದದಿ ಪೊರೆದಿರುವರನ್ನು ॥೧೯॥

ಇದರಲ್ಲಿಯೇ ಪಟ್ಟದೇವರು
ಬುದ್ಧಿಗಳು ಪರಕಣಸಿಯೂರಿನ
ಸಿದ್ಧರಿವರಪ್ಪಣೆಯ ತೆರದೊಳು ಬಂದರೈ ಜವದೆ ।
ಮುದ್ದಿನಿಂ ಚಿಕ್ಕೋಡಿಯೂರಿಂ
ಶುದ್ಧ ಮನಸಿನ ಸ್ವಾಮಿಗಳು ಗಡ
ಗೆದ್ದ ಮೋಹವ ನಿವರು ಚರಮೂರ್ತಿಗಳು ದರ್ಶನಕೆ ॥೨೦॥

ಬಂದರೈ ಚೆನ್ನವೀರ ಯತಿಗಳು
ನಂದದಿಂ ಹುಬ್ಬಳ್ಳಿ ಪುರದಿಂ
ಚಂದವಿರುವೆರಡೆತ್ತಿನಾಮಠದಾಣ್ಮರಾದವರು ।
ಬಂದರಾಗಿಳು ಪ್ರಮುಖ ಭಕ್ತರು
ಬಂಧುರರು ದರ್ಶನಕೆ ಮುದದಿಂ
ಹೊಂದಿರುವ ತಾವ್ ಪೂಜ್ಯರಿವರಿಂದುಪಕೃತಿಯುನಧಿಕ ॥೨೧॥

ಕೆಲವು ಭಕ್ತರು ಪಾಸಗೈದರು
ಬಲು ಮಮತೆಯಿಂ ಸೇವೆ ಮಾಡುತೆ
ಚೆಲುವು ಪಾನದ ಗುರುಸಿದ್ಧ ದೇವರ ಜಗದ್ಗುರುವರರ ।
ಉಳಿದರೈ ಮೇಣ್ ಸೇವೆಯಸಗುತೆ
ಬಲು ಮಮತೆಯಿಂ ಸ್ವಾಮಿಗಳ ಬಳಿ
ತಿಳಿಮನಸಿನೆರಡೆತ್ತಿನಾಮಠದ ಚೆನ್ನವೀರ ಯತಿಗಳು ಕೆಲರು ॥೨೨॥

ತೆಗೆದು ಕೊಳ್ಳುತಿದ್ದ ರೌಷಧ
ಜಗದ ಗುರುಗಳು ರೋಗಗೆಯ್ಯುವ
ಮಿಗೆ ಯುಪದ್ರವ ಕೊರತೆಯಾಗ ಸ್ವಾಮಿ ಮಣಿಯವರು ।
ತೆಗೆದು ಕೊಳ್ಳದೆ ತಾವು ಭೇಷಜ
ಜಗದೊಳಗೆ ಬದುಕಿರಲು ಶ್ರೀಗಳು
ಮುಗಿದುದು ತಪಸ್ಸಾಯು ತಿಳಿದಿರೆ ಪೂಜ್ಯ ಪಾವರಿಗೆ । ॥೨೩॥

ತಿಳಿಯಲಿಲ್ಲ ಆರಿಗೂ ತಾಂ
ಕಳೆವರೆಂಬುದು ತನುವ ಗುರುಗಳು
ಚೆಲುವು ಮಾತಾಡುತ್ತಲಿದ್ದರು ಸ್ನಾನ ಪೂಜೆಗಳ ।
ಸಲೆಯೆಸಗುತಿರೆ ಮಾಳ್ಪಹೊತ್ತಿಗೆ
ಮಲಗಿದ್ದರು ರೋಗಿಗಳ ತೆರ
ಬಲು ಸಮರ್ಥರು ಶಯ್ಯೆಯಲಿ ಶ್ರೀ ಜಗದ ಗುರುವಿವರು ॥೨೪॥

ಉದಯಿಸಿತು ಶಿವರಾತ್ರಿ ದಿವಸವು
ಸದಯರಾಗಿಹ ಜಗದ ಗುರುಗಳು
ಮುದದೊಳಗೆ ಬಲು ಮೆರೆಯುತಿದ್ದರು ಪುಣ್ಯ ದೇಹಿಗಳು ।
ಹೃದಯದಲಿ ಶಿವನಾಮ ಭಜಿಸುತೆ
ಪಿಧುವಿನೊಲು ಬಹು ಶಾಂತರಾದೀ
ಚದುರ ಯತಿಗಳು ಹೊತ್ತುಗಳೆಯುತಿದ್ದರೈ ತಾವು । ॥೨೫॥

ಮಾಡಿದರು ಮಧ್ಯಾಹ್ನ ಸಮಯಕೆ
ನೋಡಿರೀ ಯತಿವರರು ಸ್ನಾನವ,
ಮಾಡಿದರು ಲಿಂಗಾರ್ಚನೆಯು ಬಹು ಭಕ್ತಿ ಪೂರ್ವಕವು ।
ನಾಡೆ ತದನಂತರದಿ ಪಡೆದರು
ಜೋ ...ರ್ದೀ ಗುರುವರರು ತಾವ್
ಕೂಡಲೀ ವಿಶ್ರಾಂತಿಯನು ಪ್ರತಿ ದಿವಸ ಪಡೆಯುವೊಲು ॥೨೬॥

ಪ್ರತಿ ವರ್ಷದೊಲು ನಾಲ್ಕುಗಂಟೆಗೆ
ಯತಿಗಳೀ ತಾವ್ ಮಾಡಲೆದ್ದರು
ಶಿಲೆಗಳನ ಪೂಜಿಸಲು ಸ್ನಾನವನಿತರರರಿವವೊಲು ।
ಚತುರವರರಿಗೆ ವಿದಿತವಾಗಿದೆ
ಪೃಥಿವಿಯನ್ನಿ ತೊರೆಯುವದು ನಾ
ನತಿ ಸಮೀಪವು ಬಂದಿತೆಂಬುದು ಹರ್ಷಹೊಂದಿದರು ॥೨೭॥

ಮರಣವೇ ಮಹಾನೌಮಿಯೆಂದಾ
ಪರಮಗುರು ಬಸವಣ್ಣ ನೊರೆದೊಲು
ಹರುಷ ಪಡೆದರು ಮರಣ ಕಾಲವು ಬಂದುದನ್ನರಿತು ।
ವರ ಜಗದ್ಗುರು ಪೂಜ್ಯ ಪಾದರು
ಧರೆಯ ಮೇಲಣ ಶಂಭುವಾದೀ
ವಿರತ ಮಣಿ ಗುರುಸಿದ್ಧ ರಾಜೇಶ್ವರರು ಯೋಗಿಗಳು ॥೨೮॥

ಧ್ಯಾನ ಮಾಡುವ ಕಾಲದಲ್ಲಿಯೇ
ಜ್ಞಾನಿಗಳು ತಾವ್ ಕುಳಿತ ಕಾಲಕೆ
ತಾನು ಹೃದಯದ ಕ್ರಿಯೆಯು ನಿಂತಿತು ಕ್ಷಣದೊಳಗೆ ಪ್ರಾಣ ।
ಜಾಣ ಜಾಣರ ದೇಹವಗಲಿತು
ಮಾನ ನಿಧಿ ಶಿವನೊಳಗೆ ಬೆರೆಯಿತು
ಕಾಣುತಲೆ ಯತಿ ದೇಹ ಬಿಟ್ಟುದು ಸಕಲ ಜನರಿಗೆ ॥೨೯॥

ಘೋರ ದುಃಖಾನಳದಿ ಬಿದ್ದರು
ಹಾರಿ ಹೋಯಿತು ದೇಹದೆಚ್ಚರ
ಮೀರಿರುವ ಸದ್ಭಕ್ತಿ ಯತಿಯೊಳಗಿದ್ದ ಕೆಲಜನರ ।
ದೀರರೀ ದುರ್ವಾರ್ತೆಯನು ಜವ
ಮೂರುಸಾವಿರ ಮಠಕೆ ಮೊದಲಿಗೆ
ಭೂರಿ ತಾವ್ ದುಃಖಿಸುತ ತಂತಿಯಮಾಡಿ ತಿಳಿಸಿದರು ॥೨೦॥

ಬೆರೆದರೈ ಶಿವರಾತ್ರಿ ದಿನದಲಿ
ಗುರುವರರು ಹರನಲ್ಲಿ ತೋಷದೆ
ತೊರೆದರೈವಪು ಯೋಗಿ ಜನರಿಗೆ ಶೋಭಿಸುವ ತೆರದಿ ।
ತೊರೆದರಿಹ ಹದಿನಾರನೆಯ ದಿನ
ವಿರುವ ಫೇಬ್ರೂವಾರಿ ಮಾಸವು
ಇರಲು ಹತ್ತೊಂಬತ್ತರೈವತೆಂಟನೇಯ ವರ್ಷ ॥೨೧॥

ತಿಳಿಸಿದರು ತರುವಾಯ ಸುತ್ತಲು
ಘಳಿಲನೇ ಹಲ ಭಕ್ತ ಜನರಿಗೆ
ತಿಳಿಸಿದರು ಗಡ ತಂತಿಯಿಂದಾ ಹಲವು ಮಠಗಳಿಗೆ ।
ನೆಲಸಿರಲು ಶಿವಯೋಗ ಭವನ (ಮಂದಿರ)ದಿ
ಬಲು ಸರಳ ಹೃದಯಿಗಳು ಯತಿಗಳು
ಬಲು ಮುದದೆ ಭಾವೀ ಜಗದ್ಗುರುವರರು ಶ್ರೀಯುವರು ॥೨೨॥

ಅಲ್ಲಿಯೇ ನೆಲಸಿದ್ದರಾಗಳು
ಚೆಲ್ವ ಮನಸಿನ ಸ್ವಾಮಿಗಳು ಗಡ
ಬಲ್ಲವರು ತಾವ್ ಧಾರವಾಡದೊಳಿರುವ ಮತ್ತೊಂದು ।
ಸಲ್ಲಲಿತ ಮಠ ಮೂರುಸಾವಿರ
ವೆಲ್ಲರಿಗೆ ಪ್ರೀಯರಾದ ಗುರುಗಳು
ಬಲ್ಲರೇ ಹೀಗಾಯಿತೆಂಬುದು ಸ್ವಾಮಿಗಳುದ್ವಯರು ॥೨೩॥

ಫೋನ ಬರೆ ಬಾದಾಮಿಯಿಂದಂ
ತಾನು ತಿಳಿಯಿತು ಜಗದ ಗುರುಗಳು
ಪ್ರಾಣ ತೊರೆದುದು ಕೇಳಿಯೀದುವೃತ್ತವನು ತಮ್ಮ ।
ಪ್ರಾಣವೇ ಹೋದಂತೆಯಾಗಲು
ದೀನರವದಿಂ ಶೋಕಗೆಯ್ಯುತ್ತೆ
ಕಾಣರ್ದೈ ಸಾಗಿದರು ಹುಬ್ಬಳ್ಳಿ ಪುರಕೆ ಸ್ವಾಮಿಗಳು ॥೨೪॥

ತಿಳಿದ ಕೂಡಲೇ ಜಗದ ಗುರುಗಳು
ಕಳೆದರೆಂಬುದು ದೇಹವನು ತಾವ್
ಬಳ ಬಳನೆ ಕಣ್ಣೀರ ಸುರಿಸುತೆ ಸುತ್ತಮುತ್ತಿರುವ ।
ಕೆಲವು ಗ್ರಾಮದ ಭಕ್ತರೈದರು
ಬಳಿಯೊಳಿಹ ಕೊಣ್ಣೂರಿನಿಂದಂ
ಬಲುವು ಶೋಕವ ಗೆಯ್ಯುತೈದರು ಬಂಧು ಜನರವರ ॥೨೫॥

ತಿಳಿದ ಕೂಡಲೇ ತಂತಿಯಿಂದಂ
ಬಲು ಸಮರ್ಥರು ಜಗದ ಗುರುಗಳು
ಕಳೆದರೆಂಬುದು ದೇಹವನು ಹುಬ್ಬಳ್ಳಿ ಘನ ಮಠಕೆ ।
ಬಲುಹು ದುಃಖವ ಹೊಂದಿ ಬಿಟ್ಟರು
ನೆಲಸಿರುವ ಮಠದಲ್ಲಿ ನಿಖಿಲರು
ಸಲೆ ಮಮತೆಯಿಂ ರಕ್ಷಿಸಿದ ತಮ್ಮನ್ನು ಸ್ವಾಮಿಗಳು ॥೨೬॥

ಕೆಲರು ಬಂದರು ದುಃಖಿಸುತೆ ಕಡು
ಬಲುವು ತ್ವರತದಿ ಸಾಗುವಂತಹ
ಚೆಲುವು ಮೋಟಾರವನು ತಕ್ಕೊಂಡವರು ಸ್ವಾಮಿಗಳ ।
ಬಲು ಭಕುತಿಯಿಂ ದೇಹವೊಯ್ಯಲು
ಬಳಿಯೊಳಿಹ ಹುಕ್ಕೇರಿ ರೋಡಿನ
ಸಲೆ ಮೆರೆವ ಗೋಬಲದ ಗುಡ್ಡಕೆ ಯತಿಗಳಾಶ್ರಮಕೆ ॥೨೭॥

ಹರಡಿ ಬಿಟ್ಟಿತು ಜಗದ ಗುರುಗಳು
ತೊರೆದರೆಂಬುದು ಜಡ ಕಲೇವರ
ತ್ವರಿತದಲಿ ಹುಬ್ಬಳ್ಳಿ ಪುರದೊಳು ಕೆಡುಕು ಸುದ್ದಿಯಿದು ।
ಮರಗಿದರು ಮರ ಮರನೆ ಜನರುರ
ಳರಿತ ಕೂಡಲೆ ಕೆಡಕುವೃತ್ತವು
ಮರುಗದವರಾರುಂಟು ಜಗದಲಿ ಸಜ್ಜನರು ಮಡಿಯೆ ॥೨೮॥

ರೂಪವಿಲ್ಲದ ದೇವನೀತನು
ರೂಪ ದಳೆದನು ಭಕ್ತ ಜನರಲಿ
ರೂಪ ನೋಡುವ ಬಯಕೆ ಹೆಚ್ಚುಗೆ ಬೆಳೆದ ಕಾರಣವು ।
ರೂಪ ಧರಿಸಿದ ಪಂಚವದನಗೆ
ಪಾಪ ಭಕ್ತರ ಕ್ಷಮಿಸುವಾತಗೆ
ತಾಪವೆಲ್ಲವ ಕಳೆದು ಸಲಹುವ ಶಂಕರಗೆ ಜಯವು ॥೨೯॥

(ಇಪ್ಪತ್ತನೆಯ ಸಂಧಿ ಮುಗಿದುದು)



# ಇಪ್ಪತ್ತೊಂದನೆಯ ಸಂಧಿ

ಸೂಚನೆ:– ಮರೆಸಿದರು ಶ್ರೀ ಜಗದ ಗುರುಗಳ
ಪರಮ ಪುಣ್ಯದ ದೇಹ ಹುಬ್ಬಳ್ಳಿ
ಪುರದೊಳಾಗಳು ಕೂಡಿರಲು ದ್ವಯಲಕ್ಷ ಜನರುಗಳು ।

ಶ್ರೀ ಶುಭಾಗಂ ನೀಲಕಂಠ
ಮೂಷಕವ ನೇರಿಹನ ಜನಕಂ
ದೋಷರಹಿತಂ ಶೇಷ ಭೂಷಂ ಪಾರ್ವತೀಶ್ವರನು ।
ದೋಷಗಳ ನಮ್ಮೆಲ್ಲ ಕ್ಷಮಿಸಲಿ
ಪೋಷಿಸಲಿ ಬಹು ಮಮತೆಯಿಂದಂ
ವಾಸಿಸುವ ಕೈಲಾಸ ಗಿರಿಯೊಳು ಜ್ಞಾನ್ನವೀಧರನು ॥೧॥

ಬಳಿಕ ಮೋಟಾರದಲಿ ಯತಿಯ ಸು
ವಳಿದ ದೇಹವ ನೊಯ್ದುಬಿಟ್ಟರು
ತಳುಹದೇ ಹುಬ್ಬಳ್ಳಿ ನಗರಕೆ ಶೋಕಿಸುತೆ ಹಲರು ।
ತಿಳಿದ ಕೂಡಲೆ ಕೆಡಕು ವೃತ್ತವು
ಕೆಲವು ಗ್ರಾಮದ ಜನರು ಮಾರ್ಗದಿ
ಕಳವಳವ ಬಲು ಹೊಂದಿ ವಂದನೆ ಮಾಡಿದರು ಬಂದು ॥೨॥

ಬಲು ಸಮರ್ಥರ ಪುಣ್ಯ ದೇಹಕೆ
ಕಳೆಯಿತದರಿಂ ಸಮಯ ಪಥದೊಳು
ಬಳಿಕ ಗುರುಗಳ ತನುವನೊಯ್ದರು ಮಠಕೆ ಶ್ರೀಯವರ ।
ಬೆಳಗೊಡೆಯ ತಾನುದಿಪ ಸಮಯದಿ
ಬಳಿಕವನು ಯತಿ ತನುಗೆ ಮಾಡಿಸಿ
ಬಳಿಕ ಮಠದಲಿ ಕುಳ್ಳಿಸಿದರೈ ಯತಿಯ ದೇಹವನು ॥೩॥

ಹಚ್ಚಿದರು ಹಗಲಲ್ಲಿಯಾದಿನ
ವುಚ್ಚ ಮಠದೊಳಗಿರುವ ಮಿಂಚಿನ
ಹೆಚ್ಚು ಬೆಳಕನ್ನೀವ ದೀಪಂಗಳನು ಬಿಡದೊಂದು ।
ಹಚ್ಚಿದರು ಸಮೆಗಳಲಿ ದೀವಿಗೆ
ಕೆಚ್ಚೆದೆಯ ಯತಿ ತನುವಿನೆದುರಿಗೆ
ಹಚ್ಚಿದರು ಬಲು ದೊಡ್ಡವಿರುವಾ ಎರಡು ಸಮೆಗಳಲಿ ॥೪॥

ಹೂವುಗಳ ಮಾಲೆಯನು ಹಲವರು
ತಾವು ಪ್ರೇಮದೆ ಸಲ್ಲಿಸುತ್ತಿರೆ
ದೇವರೇ ಭೂಲೋಕಕಾಗಿಹ ಯತಿಯ ಕಂಧರಕೆ ।
ಸೇರಹತ್ತಿತು ಜನವು ಮಠದಲಿ
ವೀರ ಗುರುಗಳ ಕಡೆಯ ದರ್ಶನ
ಭೂರಿ ಭಕ್ತಿಯು ಭಾವದಿಂದಂ ಪಡೆಯಲಿಕೆ ತಾವು ॥೫॥

ಮೊಳಗುತಿರೆ ಚೌಪಡವು ಬಿಡದಲೆ
ಮೊಳಗುತಿರೆ ಮೇಣ್ ಬ್ಯಾಂಡವಾದ್ಯವು
ಮೊಳಗುತಿರೆ ಸಮ್ಮಾಳ ಹಲಗೆಗಳಿಗೆ ಮಠದಲ್ಲಿ ।
ಸಲೆ ಸನಾದಿಯ ನೂದುತಿದ್ದರು
ಬಲುಪು ಮೇಲ್ಸ್ವರದಲ್ಲಿ ತರುಣರು
ಕೆಲರು ಕೊಂಬುಗಳೂದುತಿದ್ದರು ಹುರುಪಿನಿಂದಾಗೆ ॥೬॥

ಹೋದರೈ ಶ್ರೀ ಜಗದ ಗುರುಗಳು
ಸೋದರರು ಬಡ ಜನರ ತೊರೆದೀ
ಮೇದಿನಿಯ ತಾವೀದು ಶ್ರೀ ಗುರುಸಿದ್ಧ ಯತಿವರರು ।
ಹೋದರೈ ಶಿವನಲ್ಲಿ ಬೆರೆದಿಂ
ದಾದರೈ ಶಿವ ತಾವು ಗುರುಗಳು
ಹೋದರೈ ಮಠವನ್ನು ಬಿಟ್ಟೆಂದೂದಿದನು ಕೊಂಬು ॥೭॥

ತುಸು ಸಮಯದಲಿ ತುಂಬಿತದು ಮಠ
ವಸಮವಾದುದು ಬಂದ ಜನರಿಂ
ಮಿಸುನಿಯಂತಹ ಗುಣದ ಶ್ರೀಗಳ ಕಡೆಯ ದರ್ಶನಕೆ ।
ಹೆಸರು ಪಡೆದಿಹ ನಾಡಿನಲ್ಲಿರು
ಕುಸುಮತುಲ ಮೃದು ಹೃದಯಿಗಳ ಪೇ-
ಣಸಮವಾದಾದರದಿ ಮುಗಿಸಲಿಕಂತ್ಯ ವಿಧಿಯನ್ನು ॥೮॥

ತುಂಬಿದವು ಮೂರಂಗಣಗಳಾ
ಇಂಬಿರದೆ ತಾವ್ ನೆರೆದ ಜನರಿಂ
ಕುಂಭಿನೀಶರ ಧಾಮದೋಲಿಹ ಸನ್ಮಠದ ತಾನು ।
ಕಂಬನಿಯ ನೊರೆಸುತ್ತೆ ಸರ್ವರು
ಶಂಭು ಸಮವಿಹ ಯತಿಯ ದೇಹಕೆ
ತಾಂ ಬಿಡದೆ ಜನರಾಗೆ ಗೆಯ್ಯುತ್ತಿದ್ದರೈ ನತಿಯ ॥೯॥

ಮೋಡ ಮುಸುಕಿದ ಚಂದ್ರ ನಂದದಿ
ನೋಡಿರಾದಿನ ತೋರಹತ್ತಿತು
ನಾಡಿನಲಿ ಕೀರ್ತಿಸಿದ ಹುಬ್ಬಳ್ಳಿ ಘನ ನಗರ ತಾನು ।
ಕೇಡಿನಲಿ ಹೆಚ್ಚಾದ ಕೇಡಿದು
ಕೂಡಿದುದು ಲಿಂಗದಲಿ ಶ್ರೀಗಳು
ಮಾಡುತಿದ್ದರು ಹೀಗೆ ಭಾಷಣ ಜನರು ಸಮಯದೊಳು ॥೧೦॥

ಬಂದರೆಲ್ಲಾ ಕಡೆಯ ಜನಗಳು
ಹೊಂದಿ ದುಃಖವ ಸ್ವಾಮಿವರ್ಯರ
ಬಂಧುರರ ತಾವ್ ಕಡೆಯ ದರ್ಶನಕಾಗಿ ಬೇರೂರ ।
ಬಂದರೈ ಕೆಲ ಪ್ರಮುಖ ಮಠಗಳ
ಬೇದ ಮನದಿಂ ಹಲ ಗುರುಗಳು
ಬಂದರೈ ಶ್ರೀಮಂತ ಭಕ್ತರು ಹಲವು ಪಟ್ಟಣದ ॥೧೧॥

ಸರ್ವ ಜನಗಳ ಮುಖವು ಬಾಡಿರೆ
ಶಿವನಂತಿಹ ಜಗದ ಗುರುಗಳು
ಪಾರ್ವತೀಶನೊಳೈಕ್ಯವಾಗಿಹ ದಿನವು ಸಹಜವದು ।
ಸರ್ವ ಕಾಲೇಜಗಳು ಪುರದಾ
ಸರ್ವವಿಧ ಶಾಲೆಗಳಃ ದಿನವಾ
ಸರ್ವರಿಗೆ ಪ್ರಿಯರಾದ ಗುರುಗಳ ಮಾನ ಮಾಡಲಿಕೆ ॥೧೨॥

ಬಂದವಾದವು ಸಂಜೆಯುವರೆಗೂ
ಬಂದವಾದವು ಪೇಟೆಗಳು ಮೇಣ್
ಬಂದವಾದವು ಬೇರೆ ಕಡೆಗಿರುವಂಗಡಿಗಳೆಲ್ಲಾ ।
ಅಂದು ಮಂದಿಯು ಮಾಡಲಿಲ್ಲವು
ಮಂದಿರದೊಳಡುಗೆಯುನು ತಮ್ಮಯ
ನಂದಿವಹನ ನಾಮ ನೆನೆಯುತೆ ಹೊತ್ತು ಹಾಕಿದರು ॥೧೩॥

ಭೂಸಮಾಧಿಯ ಸ್ಥಾನ ದೆಶೆಯಿಂ
ದಾ ಸಮಯದೊಳು ವಾದ ನಡೆಯಿತು
ಲೇಸು ಮನಸಿನ ಧಾರವಾಡದ ಮಠದ ಸ್ವಾಮಿಗಳು ।
ತೋಷದಿಂ ಹೇಳಿದರು ಜನರಿಗೆ
ಭೂಷಣರು ಗುರುವರ್ಗಕಾಗಿಹ
ದೇಶವಿಶ್ರುತ ಜಗದ ಗುರುಗಳು ಪೇಳಿರುವದನ್ನು ॥೧೪॥

ಹೇಳಿದರು ಗುರುಲಿಂಗ ಯತಿಗಳು
ಮೇಲು ದನಿಯಲಿ ಜನಸಮೂಹಕೆ
ಕೇಳಿರೆಲ್ಲರು ಹೇಳಿಪರು ಶ್ರೀ ಜಗದ ಗುರುವಿವರು ।
ಮೇಲು ಮಠದೀ ಪಶ್ಚಿಮಕೆ ಗಡ
ಕೇಳಿಕೊಳ್ಳಿರಿ ಮಠಕೆ ಹತ್ತಿಯೆ
ಶೂಲ ರೂಪರು ಭೂಸಮಾಧಿಯು ಮಾಡಲಿಕೆ ತಾವು ॥೧೫॥

ಆರಹಿದೊಲು ಶ್ರೀ ಜಗದ ಗುರುಗಳು
ಗುರು ಶಿರೋಮಣಿಯರ ಸಮಾಧಿಯು
ಧರೆಯೊಳಾ ಗಡ ಮಾಳ್ಪುದೆನ್ನಲು ಸಕಲರೊಪ್ಪಿದರು ।
ತ್ವರದೆ ಸಾಗಿಸಮಾಧಿ ಸಿದ್ಧತೆ
ಗುರುವರರು ಹೇಳಿರುವ ಸ್ಥಾನದಿ
ಹಿರಿಯ ಜನಗಳು ಹೇಳಿದಂದದಿ ನಿರ್ಮಿಸಿದರದನು ॥೧೬॥

ಆಗಿರು ಮಧ್ಯಾಹ್ನ ಸಮಯವು
ತ್ಯಾಗ ವೀರರ ಜಗದ ಗುರುಗಳ
ದಾಗಳಾವಪು ಹೂಗಳಿಂದಂ ಶಿಂಗರಿಸಿದಂಥ ।
ರಾಗದಿಂ ತೇರಿನಲಿ ಕುಳ್ಳಿಸ
ಲಾಗಳಾ ಜನನಿಕರವೆಲ್ಲವು
ಕೂಗಿ ಹರ ಹರವೆಂದು ನುಡಿದರು ಸಾಗಿತ್ತೈ ತಾನು । ॥೧೭॥

ಮೆರವಣಿಗೆ ಯತಿ ದೇಹದಾ ಮೇಲ್
ಪುರದಿ ಮಾಡಲು ಸಾಗಿತಲ್ಲಾ
ನೆರೆದ ಬಹು ಜನ ಜನರ ಸಾಗರ ಸಾಗುವಂದದಲಿ ।
ಭರದೆ ಮುಂಗಡೆ ಮೊಳಗುತಿದ್ದವು
ಕರಡೆ ಸಮ್ಮಾಳಗಳು ಬ್ಯಾಂಡವು
ನೆರಡು ವಿಧ ಹಲಗೆಗಳು ಮೇಲು ಸರದಿ ಸನಾದಿ ಹಾಡುತಿರೆ । ॥೧೮॥

ಹೋದರ್ರೈ ಶ್ರೀ ಜಗದ ಗುರುಗಳು
ಮೇದಿನೀಶರು ಪುರದ ಹುಬ್ಬಳ್ಳಿ
ಹೋದರ್ರೈ ತಾವು ಮೂರುಸಾವಿರ ಮಠದ ಸ್ವಾಮಿಗಳು ।
ಹೋದರ್ರೈ ಬಹು ದಾನ ಶೂರರು
ಹೋದರ್ರೈ ವರ ಪುಣ್ಯಗಾತ್ರರು
ಹೋದರ್ರೈ ಕೈಲಾಸ ಕೇಡಿನ ತೊರೆದು ಮಠವನ್ನು ॥೧೯॥

ಎಂದು ಕಾಳಿಯ ನೂದುತಿದ್ದನು
ಚೆಂದದಿಂದಲಿ ಮೇಲು ದನಿಯಲಿ
ಮಂದಿಗೆಲ್ಲಾ ಕೇಳಿಸುವೊಲು ಕಾಳಿಯವನಾಗೆ ।
ಮುಂದೆ ಸಾಗಿರೆ ಮಠದ ಧ್ವಯಗಜ
ಎಂದು ಕಣ್ಣೀರನ್ನು ಹಾಕುತ
ಮುಂದೆ ಪೋಣ್ ಸಾಗಿರಲು ಹಯಗಳು ಮ್ಲಾನ ಮುಖದಿಂದೆ ॥೨೦॥

ಕೂಡಿರುವ ಗುರುವರರ ದೇಹದ
ನೋಡಿರಾ ಮೆರವಣಿಗೆ ಕಾಲಕೆ
ಗಾಢವಾದಾದರದೆ ಜನರುಗಳೆರಡು ಲಕ್ಷವಿದೆ ।
ಮಾಡುತಿದ್ದರು ನಮನ ಜನಗಳು
ನೋಡಿ ಯತಿದೇಹವನು ಕಣ್ಣಿಂ
ಬಾಡಿರುವ ಮುಖದಿಂದೆ ತಮ್ಮಯ ಮನೆಯ ಹೊರ ಬಂದು ॥೨೧॥

ಹಿಡಿದಿರಲು ಛತ್ರವನು ಬಿಳಿಯದು
ಬಿಡದೆ ಬೀಸುತ್ತಿರಲು ಚಾಮರ
ಕಡು ಭಕುತಿಯಿಂ ಹಾರಿಸುತ್ತಿರೆ ಜನರು ಪುಷ್ಪಗಳ ।
ಮೃಡನ ಹಾಗಿಹ ಜಗದ ಗುರುಗಳ
ಜಡ ಶರೀರದ ಮುಂದೆ ಪಥದಲಿ
ಕೊಡಗಳಿಂ ನೀರ ಸುರುವುತಿದ್ದರು ನಾರಿಯರು ಬಂದು ॥೨೨॥

ಒಡೆಸುತ್ತಿದ್ದರು ಶ್ರೀ ಫಲಂಗಳ
ಧೃಡ ಭಕುತಿಯಿಂ ಯತಿಯ ದೇಹಕೆ
ನಡೆದ ಕಾಲಕೆ ಮೆರವಣಿಗೆ ಗಡ ದಾರಿಯಲಿ ಜನರು ।
ಬಿಡದೆ ಜಯ ಜಯಕಾರ ನಡೆದಿರೆ
ಹಿಡಿಸದಿಹ ನಾಡಿನಲಿ ಯಶವಾ
ಪೊಡವಿಯಧಿ ಪತಿನಮಿತ ಪಾದರ ಮಂಗಲಾಹ್ವಯದ ॥೨೩॥

ಬೆಳಗುತ್ತಿದ್ದರು ಭಕ್ತಿಯಿಂದಂ
ಲಲನೆಯರು ಬಂದಾರತಿಯ ತಾವ್
ಗೆಲೆದ ಮಾರನ ವೀರ ಯತಿಗಳ ಪುಣ್ಯ ದೇಹಕ್ಕೆ ।
ತುಲ ರಹಿತರೀ ಜಗದ ಗುರುಗಳು
ಬಲು ಚೆಲುವಾಳಿದರು ಮಠವನು
ಕಳೆದುದು ದೇಹವನು ಭೀಕರ ಹಾನಿಯಾಯ್ತೆಂದು ॥೨೪॥

ಜನಗಳಾ ಮೆರವಣಿಗೆಯಲ್ಲಿಹ
ಕನಿಕರದಿ ಬಲು ತಮ್ಮ ತಮ್ಮೊಳು
ಮನಸಿನಿಂ ಪೇಚ್ ದೀನರವದಲಿ ಮಾತನಾಡುತ್ತಿರೆ ।
ವನಿತೆಯರು ಪೇಚ್ ಪುರುಷರಾರೂ
ದನಿ ತೆಗೆದು ರೋದಿಸದ ಕಾರಣ
ಜನ ಪತಿಯ ಮೆರವಣಿಗೆಯೊಲು ವೆ.ರವಣಿಗೆ ತೋರುತಿರೆ ॥೨೫॥

ಅಧಿಕ ದುಃಖವ ಪಡೆದಿರಲು ತಾವ್
ಸದಯರಾಗಿಪ ಯುವ ಜಗದ್ಗುರು
ಬುಧರು ಮೇಣೆರಡೆತ್ತಿನಾಮಠ ದೊರೆಯರಾಗಿರುವ ।
ಚದುರರಾ ಚೆನ್ನವೀರ ಯತಿಗಳು
ಚೆದುರರಾ ಹಲಕರ್ಣಿ ಯತಿಗಳು
ಬುಧರು ಶ್ರೀ ಗುರುಸಿದ್ಧ ದೇವರು ದೇಹ ವಿಟ್ಟಾಗೆ ॥೨೬॥

ಅವರ ಹಾಗೆಯೆ ದುಃಖ ಪಡೆದಿರೆ
ಸವಿ ನುಡಿಯ ಚಿಕ್ಕೋಡಿ ಯೂರಿನ
ಸುವಿರತರು ಚರಮೂರ್ತಿಗಳು ಮೇಣ್ ಧಾರವಾಡದಿಪ ।
ತವೆ ಮೆರೆವ ಮಠದಾಣ್ಮರಾಗಿಹ
ಸುವಿನಯರು ಗುರುಲಿಂಗ ದೇವರು
ಭುವನನುತರಾ ಶ್ರೀ ಜಗದ್ಗುರು ಸುತರು ಸಲಹಿರುವ ॥೨೭॥

ಜೀವ ಕೊನೆಯಲ್ಲಿ ಕೂಡಿ ಬಿಡುವದು
ದೇವ ಶಿವನಲ್ಲೆಂಬ ತತ್ವವು
ಪಾವನವು ತಾನಾದ ಲಿಂಗಾಯತರ ಧರ್ಮದಲಿ ।
ಕೋವಿದರೆ ಸಿದ್ಧಾಂತವಿರುವದು
ಸಾವ ಹೊಂದಿರುವವರ ದೆಶೆಯಿಂ
ತಾವು ಜನಗಳು ವೀರ ಶೈವರು ತೋಷ ಹೊಂದುವರು ॥೨೮॥

ಅದರ ದೆಶೆಯಿಂ ವಾದ್ಯದೊಂದಿಗೆ
ಮುದದೆ ಬಿಡವಲೆ ಲಿಂಗವಂತರು
ಕದಲದೆದೆಯರು ಮೆರಸುವವರು ಮೃತ ಜನರ ದೇಹವನು ।
ರುದಿಸುವದು ತಪ್ಪೆಂದು ತಿಳಿವರು
ವಿದುಧರನೊಳಸು ಬೆರೆದ ಕಾಲಕೆ
ಬುಧರು ಲಿಂಗಾಯತರ ಧರ್ಮದ ತಮ್ಮ ಮನದಲ್ಲಿ ॥೨೯॥

ಕೆಲರು ಮಾತಾಡುತ್ತಲಿದ್ದರು
ಬಲುವು ಘನವಿಹ ಮೆರವಣಿಗೆಯಲಿ
ಬಲು ಸಮರ್ಥರ ಜಗದ ಗುರುಗಳ ಜಡ ಕಲೇವರದ ।
ಬಳಗ ನೋಡಿರಿ ನಿರತ ವೀರ್ಯರ
ಬಳಗ ನೆರೆವುದೆ ಇನಿತು ಬಾಳ್ವೆಯ
ಸಲೆ ಯೆಸಗುತಿಹ ನರರು ದೇಹವನಿಟ್ಟ ಕಾಲಕ್ಕೆ ॥೨೦॥

ತಪ್ಪಿದುವು ಸನ್ಯಾಸಿಯೆಂಬುವ
ದಪ್ಪ ನೀ ಗುರುಸಿದ್ಧ ರಾಜನಿ
ಗಿಪ್ಪರೈ ಕೆಲ ಜನಗಳಿದರಲಿ ಪಡೆದ ಮಕ್ಕಳೊಲು ।
ಇಪ್ಪರಿದರೊಳು ಬಂಧುಗಳ ತೆರ
ವಿಪ್ಪರೈ ಮೇಣ್ ಸ್ತ್ರೀಯರೆಲ್ಲರು
ಕಪ್ಪುಗೊರಳನ ರೂಪ ಯತಿಗಳ ಭಗಿನಿ ಸುತೆಯರೊಲು ॥೨೧॥

ಮಾಡಿದರು ಬಾಳ್ವೆಯನು ಶ್ರೀಗಳು
ನಾಡೆ ತಮ್ಮಯ ಪರಮ ಮತದಾ
ಮಾಡಲಾರರು ಬಾಳ್ವೆಗಾರರು ತಾವು ಹೀಗೆಂದೂ ।
ನಾಡೆ ಸಂಸಾರವನು ಕೇಳಿರೋ
ಮೂಢತನವಿದು ಬಾಳ್ವೆಯಿಂದಂ
ನೋಡಿರೈ ದೂರಿದ್ದರೆಂಬುದು ಶ್ರೀಗಳಿಗೆ ನಾವು ॥೨೨॥

ಅಡವಿ ಮಲ್ಲಿಗೆ ಯಲರಿನಂದದಿ
ಮೃಡನ ರೂಪರ ಜಗದ ಗುರುಗಳ
ಬಿಡದೆ ಕೀರ್ತಿಯ ಗಂಧವೆಲ್ಲರ ಮೋಹಗೊಳಿಸುವದು ।
ಪಡೆದ ತಾಯ್ತಂದೆಗಳು ಧನ್ಯರು
ಪೊಡವಿಯಲಿ ನರರಾಗಿ ಜನಿಸಿದ
ಬಿಡ ಜನೋದ್ಧಾರಿಗಳ ಶ್ರೀ ಗುರುಸಿದ್ಧ ದೇವರನು ॥೨೩॥

ಊದುತಿದ್ದನು ಕೊಂಬಾತನ್ನಯ
ಮೋದದಿಂದಂ ಪುರುಪಿನೀದಂ
ಹೋದರೈ ತಾವ್ ರಾಜ ರಾಜರು ಜಗದ ಗುರುವರು ।
ಹೋದರೈ ಗುರುಸಿದ್ಧ ದೇವರು
ಹೋದರೈ ಆನಂದ ರೂಪರು
ಹೋದರೈ ಗಡ ಮೃತ್ಯುಲೋಕವ ತೊರೆದು ತಾವಿಂದು ॥೩೪॥

ನೇಮಿಸಿದ ಪೇಟೆಯೊಳು ಸಾಗಿತು
ನೇಮಿಸಿದ ಕೇರಿಯೊಳು ಸಾಗಿತು
ಸ್ವಾಮಿಗಳ ಮೆರವಣಿಗೆ ದೇಹದ ಹೊಸನರದಲ್ಲಿ
ಸೀಮೆ ದಾಟಿತು ಹೊಸನಗರದಾ
ಕೋಮಲರ ಮೆರವಣಿಗೆ ಹೋಯಿತು
ಪ್ರೇಮಿಗಳ ಕರೆಯಂತೆ ಹಳೆಹುಬ್ಬಳ್ಳಿ ನಗರಕ್ಕೆ ॥೩೫॥

ನಡೆಯಿತಲ್ಲಿಯು ಮುಖ್ಯ ಮಾರ್ಗದಿ
ಕಡು ಹರಿಯದಿಹ ಮೆರವಣಿಗೆ ತಾಂ
ನಡೆಯಿತಲ್ಲಿಯು ಹೊಸನಗರದೊಳು ನಡೆದ ಹಾಗೆಲ್ಲ ।
ಜಡ ತನುಗೆ ಸನ್ಮಾನ ಜನರಿಂ
ನಡೆಯಿತಾತರು ವಾಯ ಹಿಂದಕ್ಕೆ
ಹಿಡಿಸದೊಲು ಪಥ ನಡೆದ ಪೇರ್ಮೆರವಣಿಗೆ ಮಠದ ಕಡೆ ॥೩೬॥

ಬಂದು ಮುಟ್ಟಿತು ಮಠಕ ನಂತರ
ಬಂಧುರರ ಮೆರವಣಿಗೆ ದೇಹದ
ನಂದಿವಹನನ ದಯದೆ ಹನ್ನೊಂದಕ್ಕೆ ರಾತ್ರಿಯಲಿ ।
ಮುಂದೆ ಸಾಗಿತು ಕಡೆಯ ವಿಧಿಯನು
ಬಂಧುರರ ಸಲೆ ಗೆಯ್ದ ಕಾರ್ಯವು
ನಂದಿ ಕೇತನ ನಾಮ ಜಯ ಜಯಕಾರ ಮಾಡುತ್ತೆ ॥೩೭॥

ಇಟ್ಟರೈ ಜಡ ತನುವ ಬಳಿಕಾ
ಮೆಟ್ಟಿನಲ್ಲಿ ಸಮಾಧಿಯೊಳಗಾ
ಬಿಟ್ಟರಾಗಳು ಮುಚ್ಚಿ ಭಸ್ಮದೆ ಪುಷ್ಪದಿಂದೆ ಸಲೆ ।
ಗಟ್ಟಿಗರ ತನು ಮತ್ತೆ ಮಣ್ಣಿಂ
ತಟ್ಟನೇ ತಾವು ಮುಚ್ಚಿ ಬಿಟ್ಟರು
ಕಟ್ಟ ಕಡೆಯಲಿ ಮಂಗಲಾರತಿಯನ್ನು ಮಾಡಿದರು ॥೩೮॥

ನಮಿಸಿ ನಡೆದರು ಸರ್ವ ಜನಗಳು
ಸಮವಿರದ ಶ್ರೀ ಜಗದ ಗುರುಗಳ
ಕಮಲ ಸುಮದೊಲು ಮೃದುಲ ಹೃದಯರ ಭೂ ಸಮಾಧಿಯನು ।
ಅಮರ ರಾಗುಣಗಾನ ಗೆಯ್ಯು
ತ್ತಮಿತ ಖಿನ್ನಾಂತಃಕರಣದಿಂ
ಸುಮತಿಗಳು ಜಡವಾದ ಪಥದಿಂ ಹೋದರಾ ಮೇಲೆ ॥೩೯॥

ಕಡೆಯ ವಿಧಿಯನು ಮುಗಿಸುವಾಗಳು
ದುಡಿದರೈ ಕಡು ಧಾರವಾಡದ
ಧೃಡ ಮನದ ಗುರುಲಿಂಗ ಗುರುಗಳು ಮತ್ತೆ ಹಲಕರಣಿ ।
ಕಡು ಕರುಣೆಗಳು ಪಟ್ಟದ್ದೇವರು
ದುಡಿದರೈ ಮೇಣ್ ಮತ್ತೆ ಕೆಲವರು
ಕಡೆಯ ಸೇವೆಯ ಮಾಡಿದರು ನಿಜ ತಮ್ಮ ಗುರುವರರ ॥೪೦॥

ಕಳೆದರೂ ಜಡತನುವ ಶ್ರೀಯವ
ರುಳಿದಿಹರು ಜಗದಲ್ಲಿ ಕೀರ್ತಿಯ
ಬಲು ಮನೋಹರ ತನುವಿನಿಂದವಿ ಶಶಿಗಳಿರುವನಕ ।
ಇಳೆಯ ಮೇಲದ ತರಿಸುತಿರುವರು
ಕೆಲವು ಜನ ನರಮಣಿಗಳಿಂತಹ
ನೆಲದ ಮೇಲಿ ಭವಿಸಿ ಬಂದಿಹ ದೇವರೇ ಇವರು ॥೪೧॥

ಶ್ರೀ ಜಗದ್ಗುರು ಪೂಜ್ಯ ಪಾದರ
ನೈಜಪದು ಸತ್ಕೀರ್ತಿದುಂದುಭಿ
ರಾಜಿಸುವ ಕನ್ನಡದ ನಾಡಲಿ ನಿರುತ ಮೊಳಗುವದು ।
ಜಾಜಿ ಮಲ್ಲಿಗೆ ಕಾಡ ಮಲ್ಲಿಗೆ
ವ್ರಾಜದೊಲು ಸುಮಗಳ ಸುಗಂಧವು
ರಾಜೀರೀ ಯತಿಗಳ ಸುಕೀರ್ತಿಯ ಕಂಪು ಮಾಜದದು ॥೪೨॥

ಮಠವನಾಳಲು ಯೋಗ್ಯ ಗುರುಗಳ
ಪಟ್ಟುಗಳೀ ತಾವ್ ನೇಮಿಸಿರ್ದುದು
ನಿಟಿಲನಯನನ ಭಕ್ತವರ್ಯರು ಜಗದ ಗುರುಪಿವರು ।
ದಿಟವೆ ಜಾಣ್ಮೆಯ ನಧಿಕ ಗೈದರು
ಮಠದ ಒಪ್ಪ ಭಿಮಾನಿಯಾಗಿಹ
ಸಟೆ ನುಡಿಯು ಗೊತ್ತಿರದ ಶ್ರೀ ಗುರುಸಿದ್ಧ ಯೋಗಿಗಳು ॥೪೩॥

ಆಳಿದರು ಶ್ರೀ ಜಗದ ಗುರುಗಳು
ಮೇಲು ಮಠವನು ಮೂರು ಸಾವಿರ
ಕೇಳಿರೈ ಮೂವತ್ತು ಮೂರಬ್ಬವುರೆತೋಪದೊಳು ।
ಕಾಲದೊಳಗೀ ಮಠದ ಕೀರ್ತಿಯ
ಶೀಲಯುಕ್ತರು ಬೆಳೆಸಿದಗು ಬಲು
ಬಾಳಿದರು ಹುಲಿಯಂತ ಲೋಕದಿ ತಾವು ನಿರ್ಭಯದೆ ॥೪೪॥

ಬೆಳೆಸಿದರು ಸಲೆ ಹುಟ್ಟುವಳಿಯುನು
ಸಲೆ ಮಠದ ಸರ್ಥಿಯಾದ ಮಾರ್ಗದೆ
ಗಳಿಸಿದರು ಬಹು ಮಮತೆ ಭಕ್ತರ ಹಿತವೆಸಗಿಯವರ ।
ಕಳೆದರೆಲ್ಲಾ ಆಯು ತಮ್ಮಯ
ಬಲು ಬಲಾಢ್ಯರು ದಾನಗೆಯ್ಯಲಿ
ಸಲೆ ಯೆಸಗುವಲಿ ಜನರ ಕಲ್ಯಾಣವನೆ ಯತಿಯಿವರು ॥೪೫॥

ಧನ್ಯಳೈ ತಾನಿವರ ಪಡೆದಿಹ
ಪುಣ್ಯಮಯ ಕರ್ನಾಟಕ ಮಾತೆಯು
ಧನ್ಯಳೈ ಬಹು ಭಾರತಾಂಬೆಯು ಜನನಿಯಾದಿವರ ।
ಧನ್ಯ ಲಿಂಗಾಯತರ ಧರ್ಮವು
ಧನ್ಯ ನಿಜ ಜಂಗಮರ ವಂಶವು
ಧನ್ಯ ತಾಂ ಕೊಣ್ಣೂರ ವಿಪರಿಗೆ ಜನ್ಮವಿತ್ತಿರುವ ॥೪೬॥

ಜಯ ಜಯವು ಗುರುಸಿದ್ಧ ಸಿದ್ಧಗೆ
ಜಯ ಜಯವು ಗುರುಸಿದ್ಧಯೋಗಿಗೆ
ಜಯ ಜಯವು ಶ್ರೀ ಜಗದ್ಗುರುವಿಗೆ ವಿರತಮಹಂಗಳಿಗೆ ।
ಜಯವು ಹುಬ್ಬಳ್ಳಿ ಪುರದೊಳಿರುವಾ
ಸಯನ ಮೋಹಕ ಮೂರು ಸಾವಿರ
ಜಯವು ಘನಮಠದಾಣ್ಮಠವರಿಗೆ ನಿರುತ ಜಯವಿರಲಿ ॥೪೭॥

ಜಯವು ಶ್ರೀ ಶಿವಯೋಗಿಗಳಿಗಾ
ಜಯವು ಪರಮೋದಾರ ಹೃದಯಗೆ
ಜಯವು ಪರತರ ಪುಣ್ಯ ಚರಿತಗೆ ದಾನವೀರಗೆ ।
ಜಯ ಜಯವು ನಿಃಸ್ವಾರ್ಥಿಯಾಗಿಹ
ಭಯರಹಿತ ಸದ್ವೃತ್ತಿಯುಕ್ತಗೆ
ಜಯವು ಶ್ರೀಗುರು ಸಿದ್ಧರಾಜೇಶ್ವರಗೆ ಜಯವಿರಲಿ ॥೪೮॥

ಈ ಪುರಾಣವ ನೋದುವರ ಮೇ
ಣೀ ಪುರಾಣವ ಕೇಳುವವರದು
ಪಾಪವೆಲ್ಲವು ನಾಶವಡೆವುದು ಪುಣ್ಯ ವರ್ಧಿಸುವದು ।
ಸ್ಯೆಪಿನೋಡಲಿನ ಪಾರ್ವತೀಶನು
ತಾಪವೆಲ್ಲವ ಕಳೆದು ಪ್ರೇಮದೊ
ಳಾಪರವು ಮಂಗಲನು ಸುಖವನ್ನಿತ್ತು ಸಲಹುವನು ॥೪೯॥

ಕೊಡುವನೈ ಶ್ರೀ ಶಿವನು ಸಂತತಿ
ಕೊಡುವನೈ ಸಿರಿ ಹೆಚ್ಚಿಗವರಿಗೆ
ಕೊಡುವನೈ ಆರೋಗ್ಯ ಭಾಗ್ಯವ ನಾಯುವನ್ನಧಿಕ ।
ಕೊಡುವನೈ ತಾಂ ಶಾಂತಿ ಪೂರ್ಣವು
ಕೊಡುವನೈ ವಪು ಬಲದ ಮತಿಯು
ಮೃಡನು ವಾಚಿಪ ಕೇಳುವನು ಪುರಾಣವನ್ನಿದನು ॥೫೦॥

ಧರಿಸಿಪಗೆ ಜಾಹ್ನವಿಯ ಜೆಡೆಯಲಿ
ಧರಿಸಿಪಗೆ ಮೇಣ್ ಶೂಲಕರಡಲಿ
ಧರಿಸಿಪಗೆ ತಾಂ ರುಂಡ ಮಾಲೆಯ ತನ್ನ ಕಂಠದಲಿ ।
ಧರಿಸಿಪಗೆ ಸರ್ಪಗಳ ಶಶಿಯನು
ಭರಣಗಳ ತೆರ ತಾನು ಸುಮಶರ
ಹರಗೆ ಗಿರಿಜಾಪತಿಗೆ ಸಾಂಬಗೆ ಸತತ ಜಯವಿರಲಿ ॥೫೧॥

( ಇಪ್ಪತ್ತೊಂದನೆಯ ಸಂಧಿ ಮುಗಿದುದು )

ಇದರಲ್ಲಿರ ಪೀಠಿಕಾಸಂಧಿ ೨ ಮತ್ತು
ಪುರಾಣ ಸಂಧಿ ೨೧ ರೂಡಿ ಸಂಧಿ ೨೩ರಲ್ಲಿ ಇರುವ
ಪದ್ಯ ಸಂಖ್ಯೆ ೧೨೬೭ ಗಳಿಗೆ ಮಂಗಲವಿರಲಿ

ಓಂ ಶಾಂತಿಃ ಶಾಂತಿಃ ಶಾಂತಿಃ

ಶಾಲಿವಾಹನ ಶಕೆ ೧೮೮೨ ಮಾ
ಘ ಬ|| ೧೩ನೇ ಸೋಮವಾರ (ಶಿವರಾತ್ರಿ)
ದಿನ ಈ ಪುರಾಣವು ಬರೆಯುವದು ಮುಗಿದುದು

ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಪು
ರಾಣ ಮಿದಂ ವಿಜಯಪುರ ಜಿಲ್ಲೆ
ಯೊಳಗಿರ್ಪ ಜಮಖಂಡಿ ತಾಲೂಕಿನೊ
ಳಗಣ ಬನಹಟ್ಟಿ ಪುರನಿವಾಸಿ ಶ್ರೀ
ನಾಮದೇವ ಶಿಂಪಿಗರ ಕುಲೋತ್ಪನ್ನ ರತ್ನಪ್ಪ
ನಾತ್ಮಜ ತುಕಾರಾಮಾಖ್ಯಯಂ ವಿರಚಿಸಿರ್ಪಂ

ಓಂ ಶಾಂತಿಃ

ಶುಭಮಸ್ತು